# ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳು

*ಪಿಹೆಚ್.ಡಿ. ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯ ಕಲಬುರ್ಗಿಕ್ಕೆ ಸಾದರಪಡಿಸಿದ*

*ಮಹಾಪ್ರಬಂಧ*


ಸಂಶೋಧಕರು

**ಶ್ರೀಮತಿ ಕುಸುಮಾ ತಂ. ನಿಂಗಣ್ಣಾ**

**ಎಂ. ಎ. ಬಿ. ಎಡ್.**

ಮಾರ್ಗದರ್ಶಕರು

**ಡಾ. ಮಂಜುಳಾ ಬಿ. ಚಿಂಚೋಳಿ**

**ಎಂ.ಎ., ಪಿಹೆಚ್.ಡಿ**

ಮುಖ್ಯಸ್ಥರು ಇತಿಹಾಸ ವಿಭಾಗ (ನಿವೃತ್ತ)

ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ






ಇತಿಹಾಸ ವಿಭಾಗ ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ

2017

# ದೃಢೀಕರಣ ಪತ್ರ



**ಡಾ. ಮಂಜುಳಾ ಬಿ. ಚಿಂಚೋಳಿ**
ಎಂ.ಎ, ಪಿಹೆಚ್.ಡಿ
**ಮುಖ್ಯಸ್ಥರು ಇತಿಹಾಸ ವಿಭಾಗ (ನಿವೃತ್ತ)**
**ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ**

***"ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳು"*** ಎಂಬ ಸಂಶೋಧನಾ ಮಹಾಪ್ರಬಂಧವನ್ನು ***ಶ್ರೀಮತಿ ಕುಸುಮಾ ತಂ. ನಿಂಗಣ್ಣಾ*** ಅವರು ಪಿಹೆಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಗುಲಬರ್ಗಾ ವಿಶ್ವವಿದ್ಯಾಲಯದ ಇತಿಹಾಸ ವಿಭಾಗಕ್ಕೆ ಸಾದರಪಡಿಸಿದ್ದಾರೆ.

ಈ ಪ್ರಬಂಧದಲ್ಲಿನ ಯಾವುದೇ ಭಾಗವು ಎಲ್ಲಿಯೂ ಪ್ರಕಟ ಪಡಿಸಿರುವುದಿಲ್ಲವಾದ್ದರಿಂದ ಇದು ಪಿಹೆಚ್.ಡಿ. ಪದವಿಗೆ ಅರ್ಹವಾಗಿದೆಯೆಂದು ದೃಢೀಕರಿಸುತ್ತೇನೆ.

ದಿನಾಂಕ**:**
ಸ್ಥಳ**:** ಕಲಬುರ್ಗಿ

ಡಾ. ***ಮಂಜುಳಾ ಬಿ. ಚಿಂಚೋಳಿ***
(ಮಾರ್ಗದರ್ಶಕರು)

## ಘೋಷಣಾ ಪತ್ರ

*"**ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳು**" ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಹೆಚ್.ಡಿ. ಪದವಿಗಾಗಿ ಮಾರ್ಗದರ್ಶಕರಾದ **ಡಾ. ಮಂಜುಳಾ ಬಿ. ಚಿಂಚೋಳಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಗುಲಬರ್ಗಾ ವಿಶ್ವವಿದ್ಯಾಲಯದ ಇತಿಹಾಸ ವಿಭಾಗಕ್ಕೆ ಸಾದರಪಡಿಸಿದ್ದೇನೆ.*

*ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ನಾನು ಈ ಮೊದಲು ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.*

ದಿನಾಂಕ : ಸಂಶೋಧಕರು

ಸ್ಥಳ : ಕಲಬುರ್ಗಿ **ಶ್ರೀಮತಿ ಕುಸುಮಾ ತಂ. ನಿಂಗಣ್ಣಾ**

# ಕೃತಜ್ಞತೆಗಳು

ಪಿ.ಹೆಚ್.ಡಿ ಪದವಿಗಾಗಿ ಅಧ್ಯಯನ ಮಾಡಲು ಇತಿಹಾಸ ವಿಭಾಗ ಗುಲಬರ್ಗಾ ವಿಶ್ವವಿದ್ಯಾಲಯ ಕಲಬುರಗಿಯಲ್ಲಿ ಪ್ರವೇಶದೊರಕಿದ್ದು ನನ್ನ ಸೌಭಾಗ್ಯವೆಂದು ಭಾವಿಸುತ್ತೇನೆ. **"ವಿಜಯನಗರದ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳು"** ಎಂಬ ಸಂಶೋಧನಾ ವಿಷಯವನ್ನು ಆಸಕ್ತಿಯ ಮೇರೆಗೆ ಆಯ್ಕೆ ಮಾಡಿಕೊಳ್ಳಲು ಪ್ರೇರಣೆ ನೀಡಿದ ಪೂಜ್ಯನೀಯ ಗುರುಗಳಾದ ಮಾರ್ಗದರ್ಶಕರೂ ಆದ **ಶ್ರೀಮತಿ ಡಾ॥ ಮಂಜುಳಾ.ಬಿ.ಚಿಂಚೋಳಿ ನಿವೃತ್ತ ಮುಖ್ಯಸ್ಥರು ಇತಿಹಾಸ ಅಧ್ಯಯನ ವಿಭಾಗ ಗುಲಬರ್ಗಾ ವಿಶ್ವವಿದ್ಯಾಲಯ ಕಲಬುರಗಿ** ಇವರಿಗೆ ಕೃತಜ್ಞಪೂರ್ವಕವಾದ ಅನಂತ ನಮನಗಳನ್ನು ಅರ್ಪಿಸುತ್ತೇನೆ.

ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಗಳಾದ **ಶ್ರೀ ಪ್ರೋ॥ಎಸ್.ಆರ್.ನಿರಂಜನ್, ಕುಲಸಚಿವರಾದ ಪ್ರೋ॥ ದಯಾನಂದ ಅಗಸರ, ಪ್ರೋ॥ ಸಿ.ಎಸ್.ಪಾಟೀಲ, ಮೌಲ್ಯಮಾಪನ ಕುಲಸಚಿವರು, ವಿಶ್ರಾಂತ ಕುಲಪತಿಗಳಾದ ಪ್ರೋ॥ ಈ.ಟಿ.ಪುಟ್ಟಯ್ಯಾ, ಇತಿಹಾಸ ಅಧ್ಯಯನ ವಿಭಾಗದ ಪ್ರಭಾರಿ ಮುಖ್ಯಸ್ಥರಾದ ಪ್ರೋ॥ ರಾಮುಲು, ನಿವೃತ್ತ ಪ್ರಾಧ್ಯಾಪಕರಾದ ಪ್ರೋ॥ ಝಾಕಿಯಾ.ಕೆ.ಅನ್ಸಾರಿ, ಡಾ॥ಚೆನ್ನಣ್ಣ ವಾಲೀಕಾರ, ಡಾ॥ ನಾಗಾಬಾಯಿ ಬುಳ್ಳಾ, ಡಾ॥ಬಸವರಾಜ ಚಿಂಚೋಳಿ ವಕೀಲರು** ಇವರೆಲ್ಲರಿಗೂ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

"ವಿಶೇಷವಾಗಿ ನನ್ನ ಸಂಶೋಧನೆಗೆ ಸಹಾಯ ಹಾಗೂ ಪ್ರೋತ್ಸಾಹ ನೀಡಿದಂತಹ ದಂಪತಿಗಳಾದ **ಶ್ರೀಮತಿ ಶಾರದಾ ಸುಭಾಷ ರಾಠೋಡ ಪ್ರಾಧ್ಯಾಪಕರು ಹಾಗೂ ಶ್ರೀ ಸುಭಾಷ ರಾಠೋಡ ಮಾಜಿ ಜಿಲ್ಲಾ ಪಂಚಾಯತ ಉಪಾಧ್ಯಕ್ಷರು** ಹಾಗೂ ನಮ್ಮ ಚಿಂಚೋಳಿ ತಾಲ್ಲೂಕಿನ ಜನಪ್ರೀಯ ಶಾಸಕರಾದ **ಶ್ರೀ ಡಾ॥ ಉಮೇಶ ಜಾಧವ,** ಮುಖ್ಯಮಂತ್ರಿಗಳ ಸಂಸದೀಯ ಕಾರ್ಯದರ್ಶಿಗಳು ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ನನಗೆ ಅಗತ್ಯವಾದ ಸಲಹೆಗಳನ್ನು ನೀಡಿ ಸಹಕರಿಸಿದ ಹಿರಿಯ ಸಂಶೋಧಕರಾದ ಇತಿಹಾಸ ವಿಭಾಗದ ಅತಿಥಿ ಉಪನ್ಯಾಸಕರಾದ **ಶ್ರೀ ಡಾ॥ ಶಶೀಧರ ಮೇಳಕುಂದಿ, ಡಾ॥ ಪ್ರಕಾಶ ಬಡಿಗೇರ, ಡಾ॥ ಸಂತೋಷ ಜಾಧವ, ಡಾ॥ ಕೆ ಜಗನ್ನಾಥ, ಡಾ॥ ಬಾಬು ಪೂಜಾರಿ, ಡಾ॥ ಮಾನಪ್ಪ, ಡಾ॥ ರತ್ನಾಕರ ಹೊಸಮನಿ, ಶ್ರೀ ನಾಗೇಂದ್ರಪ್ಪ** ಹಾಗೂ ಇತಿಹಾಸ ವಿಭಾಗದ ಎಲ್ಲಾ ಸಿಬ್ಬಂದಿ ವರ್ಗದವರಿಗೂ ಹಾಗೂ ಎಲ್ಲಾ ಸಂಶೋಧಕ ಮಿತ್ರರಿಗೂ ಅನಂತ ಕೃತಜ್ಞತೆ ಸಲ್ಲಿಸುತ್ತೇನೆ.

ನನ್ನ ಸಂಶಧೋದನೆಯ ಸಂದರ್ಭದಲ್ಲಿ ಸದಾ ನನ್ನ ಜೊತೆಗಿದ್ದು ನನಗೆ ಸ್ಪೂರ್ತಿ ತುಂಬಿದ ನನ್ನ ಯಶಸ್ಸಿಗಾಗಿ ಹಗಲಿರುಳು ಶ್ರಮಿಸಿದ ನನ್ನ ಬಾಳಸಂಗಾತಿಯಾದ **ಶ್ರೀ ಪ್ರಕಾಶ.ಬಿ.ಬೋಯಿ ವಕೀಲರು ಚೆಂಗಟಾ** ಇವರಿಗೆ ನನ್ನ ಮನತುಂಬಿದ ಧನ್ಯಾವಾದ ಅರ್ಪಿಸುತ್ತೇನೆ. ನನ್ನನ್ನು ಹೆತ್ತು ಹೊತ್ತು ವಿದ್ಯಾವಂತಳನ್ನಾಗಿ ಮಾಡಿ ನನ್ನ ಬೆಳವಣಿಗೆಗೆ ಕಾರಣೀಕರ್ತರಾದ ನನ್ನ ಪೋಷಕರಾದ ಹಾಗೂ ಗುರುಗಳೂ ಆದ **ಶ್ರೀಮತಿ ಸುಮಿತ್ರಾ ನಾಟಿಕಾರ ನಿವೃತ್ತ ಶಿಕ್ಷಕರು, ಶ್ರೀ ನಿಂಗಣ್ಣಾ ನಾಟಿಕಾರ ಗ್ರಾ.ಪಂ ಸದಸ್ಯರು ಸಾತನೂರು** ಇವರಿಗೆ ನಾನು ಸದಾ ಚಿರಋಣಿ. ನನ್ನ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ ನನ್ನ ಅತ್ತೆಯವರಾದ ದಿವಂಗತ **ಶ್ರೀಮತಿ ಶಾಂತಾಬಾಯಿ.ಬಿ.ಬೋಯಿ ಮಾಜಿ ತಾಲ್ಲೂಕ ಪಂಚಾಯತ ಅಧ್ಯಕ್ಷರು ಚಿಂಚೋಳಿ,** ನನ್ನ ಮಾವನವರಾದ **ಶ್ರೀ ಬಾಬುರಾವ.ಬಿ.ಬೋಯಿ ಮಾಜಿ ಗ್ರಾಂ.ಪಂ ಅಧ್ಯಕ್ಷರು ಚೇಂಗಟಾ** ಇವರಿಗೂ ನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ ಸಂಶೋಧನೆಗೆ ಪ್ರೋತ್ಸಾಹಿಸಿ ಬೆಂಬಲ ನೀಡಿದ ನನ್ನ ಕುಟುಂಬದ ಸದಸ್ಯರಾದ ಮೈದುನರಾದ **ಶ್ರೀ ರವೀಂದ್ರ.ಬಿ.ಬೋಯಿ ಶಿಕ್ಷಕರು, ತಮ್ಮನಾದ ಶ್ರೀ ಡಾ॥ ಗುರುರಾಜ ನಾಟಿಕಾರ, ಸಹೋದರಿಯರಾದ ಶ್ರೀಮತಿ ಜ್ಯೋತಿ ಶರಣಬಸಪ್ಪ ಬೋಯಿ ಪ್ರಥಮ ದರ್ಜೆ ಸಹಾಯಕರು, ಶ್ರೀಮತಿ ತ್ರೀವೇಣಿ ಸಹ ಶಿಕ್ಷಕರು, ಶ್ರೀಮತಿ ರೇಖಾ.ಆರ್.ಬೋಯಿ ಗ್ರಾಂ.ಪಂ ಸದಸ್ಯರು ಚೇಂಗಟಾ, ನಾದಿನಿಯವರಾದ ಶ್ರೀಮತಿ ದೇವಕಿ ಮಲ್ಲಣ್ಣಾ, ಶ್ರೀಮತಿ ಮಮತಾ ಸತ್ಯಾನಾರಾಯಣ**

ಇವರೆಲ್ಲರಿಗೂ ನನ್ನ ಅನಂತ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಮಕ್ಕಳಾದ **ಶಶಾಂಕ, ಶರಣ, ಸ್ವಾತಿ, ಶ್ರೇಯಾ,** ಇವರಿಗೆ ನನ್ನ ಸಿಹಿಮುತ್ತುಗಳು.

"ನನ್ನ ಸಂಶೋಧನೆಗೆ ಪ್ರೋತ್ಸಾಹಿಸಿದ ನನ್ನ ಆತ್ಮೀಯ ಪ್ರಾಚಾರ್ಯರಾದ **ಶ್ರೀ ಬಸವರಾಜ ಗೌರೆ, ಪ್ರಾಚಾರ್ಯರು ಸ.ಪ.ಪೂ ಕಾಲೇಜು ಚೆಂದನಕೇರಾ,** ಸಹೋದ್ಯೋಗಿ ಉಪನ್ಯಾಸಕ ಮಿತ್ರರಾದ **ಶ್ರೀ ಶಿವಶರಣಯ್ಯಾ ಮಠಪತಿ, ಶ್ರೀ ಸುನೀಲ ವೈಜಾಪುರೆ, ಶ್ರೀ ಲಕ್ಷ್ಮಿಕಾಂತ ಪಂಚಾಳ, ಮುಖ್ಯಗುರುಗಳಾದ ರಮೇಶ ಮಾಸಿಮಾಡೆ, ಸಹ ಶಿಕ್ಷಕರಾದ ಶ್ರೀ ದೇವಜಿ ರಾಠೋಡ, ಶ್ರೀ ಬಸವಂತ ರೆಡ್ಡಿ, ಶ್ರೀ ದಿಲೀಪಕುಮಾರ ಸದಲಾಪುರೆ ಹಾಗೂ ಸರ್ವ ಶಿಕ್ಷಕ ವೃಂದಕ್ಕೂ ಹಾಗೂ ಶ್ರೀ ಚಂದ್ರಕಾಂತ.ಎಮ್ ಶಾಹಾಬಾದಕರ್ ಪ್ರಾಚಾರ್ಯರಿಗೂ, ಶ್ರೀ ಅಮೃತ.ಎ.ಬಿ ಉಪನ್ಯಾಸಕರಿಗೂ** ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

"ಸದಾ ನನ್ನ ಏಳ್ಗೆಯನ್ನೇ ಬಯಸುವ, ಬೆಂಬಲಿಸುವ ಆತ್ಮೀಯ ಮಿತ್ರವರ್ಗದವರಾದ **ಶ್ರೀ ನಾಗರಾಜ ಬಳಘಟ್ಟ, ಶ್ರೀ ಶರಣಪ್ಪ ಗುಂಡಗುರ್ತಿ, ಶ್ರೀ ನಾಗಯ್ಯಾ ಮಠ, ಶ್ರೀಮತಿ ಗೀತಾ, ಶ್ರೀಮತಿ ಮೀನಾಕ್ಷಿ, ಶ್ರೀಮತಿ ಶ್ರೀದೇವಿ, ಶ್ರೀಮತಿ ಜಯಶೀಲಾ, ಶ್ರೀಮತಿ ಸರೋಜಾ ಹಾಗೂ ಶ್ರೀಮತಿ ಗೌರಿ** ಇವರಿಗೂ ನನ್ನ ಹೃತ್ಪೂರ್ವಕ ಧನ್ಯವಾದಳನ್ನು ಅರ್ಪಿಸುತ್ತೇನೆ.

ಕೊನೆಯದಾಗಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ನನ್ನ ಕಾರ್ಯಕ್ಕೆ ಸಹಕರಿಸಿದ ಎಲ್ಲಾ ನನ್ನ ಹಿತೈಷಿಗಳಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಶ್ರೀಮತಿ ಕುಸುಮಾ ತಂ. ನಿಂಗಣ್ಣಾ**

# ಪರಿವಿಡಿ

# ಅಧ್ಯಾಯ 1

## ಪ್ರವೇಶ

---

**ಪೀಠಿಕೆ:**

ದೇಶದ ಸ್ವಾತಂತ್ರ್ಯಕ್ಕಾಗಿ ಮೂರು ದಶಮಾನಗಳ ಕಾಲ ನಿಜವಾದ ಮಹಾಸಂಗ್ರಾಮವನ್ನು ಮುಮ್ಮಡಿ ಬಲ್ಲಾಳನು ಹೂಡಿದನೆಂದು ಹೇಳಲಾಗಿದೆ. ಇಮ್ಮಡಿ ಬಲ್ಲಾಳನ ಉತ್ತರಾಧಿಕಾರಿಗಳು ತಮಿಳುನಾಡಿನ ರಾಜಕೀಯದಲ್ಲಿ ಗಳಿಸಿದ ವಿಜಯದ ಪರಿಣಾಮಗಳನ್ನು ಎದುರಿಸಲಾರದೆ ಹೋದರು. ಹೊಯ್ಸಳರು ಬಲಹೀನರಾದರು. ರಾಜ್ಯ ಕುಸಿಯಿತು. ವಿಜಯನಗರದ ಸಹೋದರರು ಕಳಚಿಕೊಂಡ ತುಂಡಗಳನ್ನು ನಿಧಾನವಾಗಿ ಆಯ್ದು ಕೊಂಡರು ಎಂಬ ಇನ್ನೊಂದು ಅಭಿಪ್ರಾಯವೂ ಇದೆ. ಈ ಎರಡು ಹೇಳಿಕೆಗಳೂ ಎರಡು ವಿಷಯಗಳನ್ನು ಸೂಚಿಸುತ್ತವೆ. ಮುಮ್ಮಡಿ ಬಲ್ಲಾಳನ ಹಿರಿಮೆಯನ್ನು ಕೊಂಡಾಡುತ್ತಾ ಪಿ.ಬಿ. ದೇಸಾಯಿರು ದಾಳಿಕಾರನ ಮೇಲ್ಮಟ್ಟದ ಶಕ್ತಿಯ ಮುಂದೆ ಆತನು ಬಾಗಿದರೂ ಶರಣಾಗಲಿಲ್ಲ, ಅಳಿಯಲೂ ಇಲ್ಲ ಎಂದಿದ್ದಾರೆ[1]. ಇದು ದಕ್ಷಿಣದ ಹಿಂದೂ ರಾಜ್ಯಗಳ ಅಸ್ತಿತ್ವವನ್ನೇ ಅಲುಗಾಡಿಸುವ ಹೆದರಿಕೆಯನ್ನುಂಟುಮಾಡಿದ್ದ ಮುಸ್ಲಿಂ ದಾಳಿಕಾರರ ವಿರುದ್ಧ ಆತನು ಹೂಡಿದ ಕದನಗಳಿಗೆ ಸಂಬಂಧಿಸಿದಂತೆ ಮಾಡಲಾದ ಹೇಳಿಕೆ[2].

ರಾಜ್ಯಕ್ಕೂ ಪ್ರಜೆಗಳಿಗೂ ಉಂಟಾಗುತ್ತಿದ್ದ, ಹೆಚ್ಚುತ್ತಿದ್ದ ಉಪದ್ರವವನ್ನು ಸಂಪೂರ್ಣವಾಗಿ ಎದುರಿಸಲು ಬಲ್ಲಾಳನು ಆ ಸಮಯದಲ್ಲಿ ಸರಿಸಿದ್ಧನಾದನೆಂಬುದು ತಿಳಿದ ವಿಷಯವೇ. ಆದರೆ ವಾಸ್ತವಿಕತೆಯ

ಅರಿವುಂಟಾಗುವುದರೊಳಗೆ ಆತನಿಗೆ ಮುಪ್ಪಡರಿತ್ತೆಂಬದನ್ನು ನೆನಪಿನಲ್ಲಿಡಬೇಕು. ಶೌರ್ಯವಂತನಾಗಿದ್ದುದರಿಂದ ಸ್ವತಃ ಶಸ್ತ್ರಧಾರಣ ಮಾಡಲು ಮುಪ್ಪು ಅವನಿಗೆ ಅಡ್ಡಿಯಾಗಲಿಲ್ಲ. ಆದರೆ ಏಕಾಂಗನಾಗಿ ದಾಳಿಗಳನ್ನು ತಡೆಯಲು, ರಾಜ್ಯವನ್ನು ಉಳಿಸಲು ಅವನಿಗೆ ಸಾಧ್ಯವಾಗುತ್ತಿತ್ತೇ? ಉಳಿಸಲಾಗದ ರಾಜ್ಯ ಅಳಿಯಿತು. ಆದರೆ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ದಾರಿಮಾಡಿಕೊಡುವುದರ ಮೂಲಕ ಆತ ದಾಳಿಗಳನ್ನು ತಡೆಹಿಡಿದ[3].

ಸುಮಾರು ಒಂದು ಶತಮಾನದ ಹಿಂದೆ, ಇಮ್ಮಡಿ ಬಲ್ಲಾಳನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿಯೇ ತಮಿಳುನಾಡಿನ ರಾಜಕೀಯ ಪರಿಸ್ಥಿತಿಗಳಲ್ಲಿ ತ್ವರಿತ ಬದಲಾವಣೆಗಳಾಗುತ್ತಿದ್ದುವು. ಪಾಂಡ್ಯರ ಮಾರವರ್ಮ ಸುಂದರಪಾಂಡ್ಯನ ಆಳ್ವಿಕೆಯ ಕಾಲದಲ್ಲಿ ಪಾಂಡ್ಯರು ಪ್ರಾಮುಖ್ಯತೆಯನ್ನು ಗಳಿಸಿದರು. ಕ್ರಿ.ಶ. 1217ರ ಸುಮಾರಿನಲ್ಲಿ, ಮೊದಲೊಮ್ಮೆ ಸಾಮಂತನಾಗಿದ್ದ ಈತ ಚೋಳರ ಮುಮ್ಮಡಿ ಕುಲೋತ್ತುಂಗನ ವಿರುದ್ಧ ದಂಗೆ ಎದ್ದಾಗ ಚೋಳನು ಹೊಯ್ಸಳರ ನೆರವನ್ನು ಬಯಸಿದ. ಆತನ ಪತ್ನಿ ಸೋಮಲದೇವಿ ಇಮ್ಮಡಿ ಬಲ್ಲಾಳನ ಮಗಳು. ಸಹಜವಾಗಿಯೇ ತನ್ನ ಅಳಿಯನನ್ನು ರಕ್ಷಿಸುವ ಹೊಣೆ ಬಲ್ಲಾಳನದಾಗಿತ್ತು[4]. ತನ್ನ ಮಗನಾದ ಯುವರಾಜ ಇಮ್ಮಡಿ ನರಸಿಂಹನನ್ನು ಚೋಳದೇಶಕ್ಕೆ ಕಳುಹಿಸಿದ. ಈತ ಯಶಸ್ವಿಯಾಗಿ ಚೋಳನನ್ನು ಸಿಂಹಾಸನದಲ್ಲಿ ಪುನಃ ಪ್ರತಿಷ್ಠಾಪಿಸಿದ. ಆದರೆ ಆರಂಭದ ಈ ತೊಡಗಿಸಿಕೊಳ್ಳುವಿಕೆಯ ಪರಿಣಾಮವಾಗಿ ಕ್ರಿ.ಶ. 1220ರಲ್ಲಿ ಸ್ವತಃ ತಾನೆ ಪಟ್ಟಕ್ಕೆ ಬಂದಾಗ ಚೋಳರ ಭಾರವನ್ನೂ ಹೊರಬೇಕಾಯಿತು[5]. ಕುಲೋತುಂಗನ ನಂತರ ಆಳತೊಡಗಿದ ಮುಮ್ಮಡಿ ರಾಜರಾಜನು ಪಾಂಡ್ಯನನ್ನು

ಕೆಣಕಿದ ಕಾಡವರ ನಾಯಕನಾದ ಕೋಪ್ಪೆರುಂಜಿಂಗನ ಬೆಂಬಲದಿಂದ ಪಾಂಡ್ಯನು ಚೋಲನನ್ನು ಕಾಪಾಡಲು ನರಸಿಂಹನು ಮೇಲಿಂದ ಮೇಲೆ ಚೋಳ ರಾಜ್ಯಕ್ಕೆ ಬರಬೇಕಾಯಿತು[6]. ಕಣ್ಣಾನೂರಿನಲ್ಲಿ ಒಂದು ಕಾವಲುಪಡೆಯನ್ನು ನೆಲೆಗೊಳಿಸಲು ನಿರ್ಧರಿಸಿದ. ನರಸಿಂಹನು ತನ್ನ ಎಲ್ಲ ಸಮಯವನ್ನೂ ಗಮನವನ್ನೂ ಚೋಳ ರಾಜ್ಯದ ಘಟನೆಗಳಿಗೇ ಮೀಸಲಿರಿಸಿದ[7]. ಇದರ ಪರಿಣಾಮವಾಗಿ, ಹೊಯ್ಸಳರ ದುರದೃಷ್ಟವೆಂಬಂತೆ ನರಸಿಂಹನು ತನ್ನ ರಾಜ್ಯವನ್ನೇ ಬಲಿಕೊಡಬೇಕಾಯಿತು. ಸೇವೂಣರ ಅರಸ ಸಿಂಘಣನು ತುಂಗಭದ್ರೆಯ ಉತ್ತರದ ಎಲ್ಲ ಪ್ರದೇಶಗಳನ್ನೂ ಕ್ರಿ.ಶ. 1230ರ ಸುಮಾರಿನಲ್ಲಿ ವಶಪಡಿಸಿಕೊಂಡನು. ಆ ಬಳಿಕ ನರಸಿಂಹನು ಬಹಳ ಕಾಲ ಬಾಳಲಿಲ್ಲ[8].

ಈತನ ಮಗ ಸೋಮೇಶ್ವರ ತನ್ನ ಯೌವನವನ್ನೆಲ್ಲಾ ತಮಿಳು ಪ್ರದೇಶದಲ್ಲಿ ಕಳೆದಿದ್ದ. ಆ ಪ್ರದೇಶದೊಡನೆ ಆತನಿಗೆ ವಿಶೇಷ ಸಂಬಂಧವಿದ್ದಿತು. ಕಣ್ಣಾನೂರು ಬಹಳಮೆಟ್ಟಿಗೆ ಆತನ ಸ್ಥಿರ ನಿವಾಸವಾಗಿ ರಾಜಧಾನಿಯಾದ ದೋರಸಮುದ್ರಕ್ಕೆ ಅಪರೂಪವಾಗಿ ಭೇಟಿ ನೀಡುತ್ತಿದ್ದನು. ಸೇವೂಣ ಸಿಂಘಣ ಹಾಗೂ ಕನ್ನರರಿಗೆ ಮತ್ತಷ್ಟು ಪ್ರದೇಶಗಳನ್ನು ಬಿಟ್ಟುಕೂಡಬೇಕಾಯಿತಾದರೂ ಅದರಿಂದ ಅವನು ವಿಚಲಿತನಾಗಲಿಲ್ಲ[9].

ದಶಮಾನದ ನಂತರ ಚೋಳರ ಮುಮ್ಮಡಿ ರಾಜೇಂದ್ರನು ಮುಮ್ಮಡಿ ರಾಜರಾಜನ ಉತ್ತರಾಧಿಕಾರಿಯಾದ. ಆತ ತನ್ನ ರಾಜ್ಯದಲ್ಲಿ ಹೊಯ್ಸಳರ ಹಸ್ತಕ್ಷೇಪ ಅನವಷ್ಯಕವೆಂದು ಭಾವಿಸಿದಾಗ ಸೋಮೇಶ್ವರನ ಪರಿಸ್ಥಿತಿ ಅಸೂಯಾತೀತವಾಯಿತು. ರಾಜೇಂದ್ರನು ತೆಲುಗು ಚೋಳ ಮನೆತನದ ತಿಕ್ಕ

ಹಾಗೂ ಆತನ ಮಗ ಮನುಮಸಿದ್ಧಿಯ ಬೆಂಬಲವನ್ನು ಪಡೆದನು[10]. ಸೋಮೇಶ್ವರನು ತೆಲಗು ಚೋಳರಿಂದ ಪರಾಜಿತನಾದಂತೆ ಕಾಣುತ್ತದೆ. ಇದರ ಪರಿಣಾಮ ಸ್ನೇಹಗಳಲ್ಲಿ ಬದಲಾವಣೆ. ರಾಜೇಂದ್ರನು ಪಾಂಡ್ಯನ ಮೇಲೆ ದಂಡೆತ್ತಿದಾಗ ಸೋಮೇಶ್ವರನು ಪಾಂಡ್ಯರ ನೆರವಿಗೆ ನಿಂತ[11]. ಕಾಂಚಿಯಿಂದ ಹೊರದೂಡಲ್ಪಟ್ಟು ಕಾಕತೀಯ ಗಣಪತಿಯಿಂದ ಮೂಲೆಗೊತ್ತಲ್ಪಟ್ಟಾಗ ರಾಜೇಂದ್ರನು ಸೋಮೇಶ್ವರನೊಡನೆ ತನ್ನ ವಿರಸಗಳನ್ನು ಬಲವಂತವಾಗಿ ನುಂಗಿಕೊಂಡು ಆತನ ನೆರವನ್ನು ಯಾಚಿಸಿದ. ಇದರಿಂದ ಹೊಯ್ಸಳನಿಗೆ ದೊರೆತ ಲಾಭ ಕಣ್ಣಾನೂರು ಮಾತ್ರ. ತನ್ನ ಸಾವಿಗೆ ಮುನ್ನ ಸೋಮೇಶ್ವರನು ರಾಜ್ಯವನ್ನು ಕ್ರಮವಾಗಿ ಬಿಜ್ಜಲಾದೇವಿ ಹಾಗೂ ದೇವಲಾದೇವಿಯರ ಮಕ್ಕಳಾದ ಮುಮ್ಮಡಿ ನರಸಿಂಹ ಮತ್ತು ರಾಮನಾಥರಲ್ಲಿ ಹಂಚಿದ.

ಈ ಇಬ್ಬರು ಸಹೋದರರು ಯಾವಾಗಲೂ ಪರಸ್ಪರ ಘರ್ಷಣೆಗಳಲ್ಲಿ ತೊಡಗಿದ್ದರು. ಕಿರಿಯನಾದ ರಾಮನಾಥನು ತನ್ನ ತಂದೆಯೊಂದಿಗೆ ಕಣ್ಣಾನೂರಿನಲ್ಲಿಯೇ ಉಳಿದುಕೊಂಡ. ಚೋಳರೊಡನೆ ಇವರು ಸಂಬಂಧಗಳನ್ನು ನವೀಕರಿಸಿಕೊಂಡಿದ್ದರೂ ಈ ಬಾಂಧವ್ಯವು ಮೊದಲಿನ ಬಲವನ್ನು ಕಳೆದುಕೊಂಡು ಕಲುಷಿತವಾಗಿ ಉಳಿದಿತ್ತು. ಹೊಯ್ಸಳನು ನಂಬಿಕೆದ್ರೋಹಿ ಎಂದು ಪಾಂಡ್ಯನು ಅರಿತುಕೊಂಡ. ಚೋಳ–ಹೊಯ್ಸಳರ ನಡುವಣ ಮೇಲ್ನೋಟದ ಸಂಬಂಧದ ಪ್ರಯೋಜನವನ್ನು ಪಡೆದ ಜಟಾವರ್ಮ ಸುಂದರಪಾಂಡ್ಯನು ಸೂಕ್ತ ಸಮಯದಲ್ಲಿ ಚೋಳನನ್ನು ಬಲವಾಗಿ ಘಾತಿಸಿದ[12]. ಚೋಳನನ್ನು ಕಾಪಾಡುವದಂತಿರಲಿ, ಹೊಯ್ಸಳರೇ ಸ್ವತಃ ಅಲ್ಲಿಂದ ಕಾಲ್ತೆಗೆಯಬೇಕಾಯಿತು. ಕಣ್ಣಾನೂರು ಕೈ ಬಿಟ್ಟಿತು.

ಇದಾದ ಸ್ವಲ್ಪ ಸಮಯದ ಬಳಿಕ, ಕ್ರಿ.ಶ. 1257ರಲ್ಲಿ ಸೋಮೇಶ್ವರನು ಮರಣವನ್ನಪ್ಪಿದ. ಕರ್ನಾಟಕ ಪ್ರದೇಶಕ್ಕೆ ಸೇರಿದ ಸ್ವಲ್ಪ ಭಾಗವಾದರೂ ಹಕ್ಕಿನಂತೆ ತನಗೆ ಸೇರಿದುದೆಂಬುದನ್ನು ಈಗ ರಾಮನಾಥನು ಅರಿತುಕೊಂಡು ಅದಕ್ಕಾಗಿ ಪ್ರಯತ್ನಿಸಬೇಕಾಯಿತು[13]. ಅದಕ್ಕಾಗಿ ಹಿರಿಯ ಸೋದರನೊಡನೆ ಕದನ ಅನಿವಾರ್ಯವಾಯಿತು. ನರಸಿಂಹನು ಈಗ ವಿಶೇಷ ಜಾಗರೂಕತೆ ವಹಿಸಬೇಕಾಯಿತು. ಆದರೆ, ಪರಿಣಾಮವಾಗಿ ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳನ್ನು ಸೇವೂಣರ ರಾಮಚಂದ್ರನಿಗೆ ಬಿಟ್ಟು ಕೊಡಬೇಕಾಯಿತು. ಸೇವೂಣರ ದಂಡನಾಯಕನಾದ ಸಾಳುವ ತಿಕ್ಕಮನು ತನ್ನ ಮೊದಲಿನ ಒಡೆಯನಾದ ಮಹಾದೇವನ ನೆನಪಿಗಾಗಿ ಹರಿಹರದಲ್ಲಿ ಲಕ್ಷ್ಮೀನಾರಾಯಣ ದೇವಾಲಯವನ್ನು ಕಟ್ಟಿಸಿದ. ರಾಮನಾಥನು ಸ್ವತಃ ಕೋಲಾರ, ಬೆಂಗಳೂರು ಜಿಲ್ಲೆಗಳ ಭಾಗಗಳನ್ನು ವಶಪಡಿಸಿಕೊಂಡ. ಕಣ್ಣಾನೂರಿನಿಂದ ಹೊರದೂಡಲ್ಪಟ್ಟ ಆತ ಕುಂದಾನೆಗೆ ಸರಿಯಬೇಕಾಯಿತು[14].

ತಂದೆಯಾದ ಮುಮ್ಮಡಿ ನರಸಿಂಹನ ಉತ್ತರಾಧಿಕಾರಿಯಾಗಿ ಕ್ರಿ.ಶ. 1291ರಲ್ಲಿ ಮುಮ್ಮಡಿ ಬಲ್ಲಾಳನು ಪಟ್ಟಕ್ಕೆ ಬಂದಾಗಿನ ಪರಿಸ್ಥಿತಿ ಇದು. ತಡೆಯಿಲ್ಲದೆ ಒಡ್ಡುತ್ತಿದ್ದ ತೊಂದರೆಗಳನ್ನು ರಾಮನಾಥನಿಗೆ ಬಲವಾದ ಪೆಟ್ಟನ್ನು ನೀಡುವುದರ ಮೂಲಕವೇ ಬಲ್ಲಾಳ ಕೊನೆಗಾಣಿಸಬೇಕಾಯಿತು. ರಾಮನಾಥನ ಮಗ ವಿಶ್ವನಾಥ ಅಲ್ಪಾಯುಷಿ. ಕ್ರಿ.ಶ. 1297ರ ನಂತರ ಆತನು ಕಾಣಿಸಿಕೊಳ್ಳುವುದಿಲ್ಲ. ಹಿಂದಿನ ವಿಷ್ಣುವರ್ಧನನ ಕಾಲದಲ್ಲಿನ ರಾಜ್ಯ ವಿಸ್ತಾರಕ್ಕೆ ಹೋಲಿಸಿದರೆ ಈಗ ಹೊಯ್ಸಳ ರಾಜ್ಯ ಎಷ್ಟಿತ್ತು? ಕ್ಷೀಣಿಸಿತು! ಮುಮ್ಮಡಿ ಬಲ್ಲಾಳನು ಇದನ್ನರಿಯಬೇಕಿತ್ತು. ಆದರೆ

ಇವೆಲ್ಲವೂ ಈತನಿಗೂ ಹಿಂದೆ ಆಳಿದ, ಇಮ್ಮಡಿ ನರಸಿಂಹನ ಕಾಲದಿಂದಲೆ ಕಾಣಬಂದ ಸಂಕುಚಿತ ದೃಷ್ಟಿಯ ಹಸ್ತಕ್ಷೇಪ ನೀತಿಯ ಪರಿಣಾಮ, ಅಭಿಮಾನವನ್ನು ತೃಪ್ತಿಗೊಳಿಸಿಕೊಂಡರೆ ವಿನಹ ಹೊಯ್ಸಳರು ಗಳಿಸಿದ್ದು ಕಡಿಮೆ[15]. ಕಳೆದದ್ದು ಅಪಾರ. ತಮ್ಮ ರಾಜ್ಯವೇ ನಿರಂತರವಾಗಿ ಸೇವೂಣರ ದಾಳಿಗಳಿಗೆ ತುತ್ತಾದಾಗ ಇತರರ ಚಟುವಟಿಕೆಗಳಲ್ಲಿ ಹಸ್ತಕ್ಷೇಪ ಮಾಡುವುದು ತಮ್ಮಿಂದ ಸಾಧ್ಯವಾಗದೆಂಬುದನ್ನು ಅವರು ಅರಿಯಬೇಕಿತ್ತು. ಚೋಳರು ಈ ವೇಳೆಗೆ ಬಲಹೀನರಾಗಿದ್ದು ಪ್ರವರ್ಧಮಾನಕ್ಕೆ ಬರುತ್ತಿದ್ದ ಪಾಂಡ್ಯರ ಮುನ್ನೋಡುವಿಕೆಯ ಸಮಯದಲ್ಲಿ ಚೋಳರಿಗೆ ನೆರವು ನೀಡುವುದು ಕೆಟ್ಟರಾಜನೀತಿಯಾಗಿತ್ತು[16].

ಇದಲ್ಲದೆ ಸ್ವತಃ ತಮ್ಮ ಮನೆಯೇ ದುಸ್ಥಿತಿಯಲ್ಲಿತ್ತು. ಸೇವೂಣರೇ ಅಲ್ಲದೆ ಉತ್ತರದಿಂದ ಧಾವಿಸುತ್ತಿದ್ದ ಮಹಮದೀಯರು ಸಹ ಯುದ್ಧ ಮಾಡುವ ಮನೋಭಾವವನ್ನು ಹೊಂದಿದ್ದರು. ಅಲಾವೂದ್ದೀನ ಖಿಲ್ಜಿಯು ಸೇವೂಣರಾಜ್ಯದೊಳಗೆ ನುಗ್ಗಿ ಅಪಾರವಾದ ಕೊಳ್ಳೆಯನ್ನು ಒಯ್ದುದನ್ನು ಪಟ್ಟಕ್ಕೆ ಬಂದ ಹೊಸದರಲ್ಲಿಯೇ ಬಲ್ಲಾಳನು ಕಂಡಿದ್ದ. ರಾಮಚಂದ್ರ ಏನೂ ಮಾಡಲಾರದವನಾಗಿದ್ದ. ಆದರೆ ಆ ಬಳಿಕವಾದರೂ ಹಿಂದೂ ಅರಸರು ಪಾಠ ಕಲಿಯಬೇಕಿತ್ತು. ಹಾಗಾಗದೇ ಹೋದದ್ದು ದುರದೃಷ್ಟಕರ. ದಾಳಿಕಾರ ಬೆನ್ನು ತೋರಿಸಿದ ಕೂಡಲೇ ಇವರುಗಳು ಪರಸ್ಪರ ಕಚ್ಚಾಟಗಳನ್ನು ಮುಂದುವರಿಸಿದರು. ಕ್ರಿ.ಶ. 1310ರಲ್ಲೂ ಸುಂದರಪಾಂಡ್ಯನು ತನ್ನ ಸೋದರ ವೀರಪಾಂಡ್ಯನ ವಿರುದ್ಧ ನೆರವನ್ನು ಯಾಚಿಸಿದಾಗ ಬಲ್ಲಾಳ ದಕ್ಷಿಣಕ್ಕೆ ಧಾವಿಸಿದ[17].

ಕೇವಲ ಕೊಳ್ಳೆ ಹೊಡೆಯುವ ಉದ್ದೇಶದಿಂದ ಬಂದ ಮಲ್ಲಿಕ್ ಕಾಪೂರನಿಗೆ ಮಾರ್ಗದರ್ಶಿಯಾಗಿ ತನ್ನ ದಂಡನಾಯಕ ಪರಶುರಾಮ ದಲವಾಯಿಯನ್ನೇ ಕಳುಹಿಸಲು ಸೇವೂಣರ ರಾಮಚಂದ್ರ ಹಿಂಜರಿಯಲಿಲ್ಲ. ಶತ್ರುವನ್ನೆದುರಿಸುವುದಂತಿರಲಿ, ಸ್ವತಃ ತಾನೇ ಪಾಂಡ್ಯರ ರಾಜ್ಯವಾದ ಮಲಬಾರಿಗೆ ಮುನ್ನುಗ್ಗಲು ಬಲ್ಲಾಳನು ಶತ್ರುವಿಗೆ ನೆರವು ನೀಡಿದ[18]. ಪಾಂಡ್ಯ ಸಹೋದರರು ಶತ್ರುವಿಗೆ ದೊರಕದೇ ಹೋದರು. ಅಲ್ಲಿನ ಹಿರಿದಾದ ದೇವಾಲಯಗಳು, ನಗರಗಳು ತಮ್ಮ ಸಂಪತ್ತನ್ನು ಶತ್ರುವಿಗೆ ಅರ್ಪಿಸಿದವು. ತಮ್ಮ ಸ್ವಂತ ಮಗನನ್ನೇ ದೆಹಲಿಯ ಸುಲ್ತಾನನ ಆಸ್ಥಾನಕ್ಕೆ ಕಳುಹಿಸುವುದರ ಮೂಲಕ ಬಲ್ಲಾಳನು ಅವಮಾನಿತನಾದ.

ನಂತರದ ಘಟನೆಗಳು ಕ್ಷಿಪ್ರಗತಿಯಲ್ಲಿ ನಾಟಕೀಯವಾಗಿ ಸರಿದುವು. ಇವೆಲ್ಲವೂ ತಿಳಿದ ವಿಷಯಗಳೇ. ಮತ್ತೆ ಅವುಗಳನ್ನು ನಿರೂಪಿಸುವ ಅವಶ್ಯಕತೆ ಇಲ್ಲ. ಆದರೆ ಸೇವೂಣರ ರಾಜ್ಯ ಆಳಿದ ನಂತರವೇ ಬಲ್ಲಾಳನು ತಾನು ಎದುರಿಸಬೇಕಾದ ದುರಂತದ ಬೃಹತ್ತನ್ನು ಅರಿತುಕೊಂಡುದು ಎಂಬುದು ಇಲ್ಲಿ ಗಮನಿಸಬೇಕಾದ ಅಂಶ[19].

ಈ ರೀತಿ ರಾಜಕೀಯವಾಗಿ ರಾಜ್ಯ ಹರಿದುಹೋಗಿದ್ದು ತೋರಿಕೆಗೆ ಮಾತ್ರ ಉಳಿದುಕೊಂಡಿತ್ತು. ಬಲ್ಲಾಳನು ಪರಕೀಯರ ದಾಳಿಗಳ ಹಿಡಿತದಿಂದ ಅದನ್ನು ರಕ್ಷಿಸಲು ಹಾತೊರೆದ. ರಾಜ್ಯವನ್ನು ರಕ್ಷಿಸಲು ಸಂಗಮ ಸಹೋದರರು ಸಮರ್ಥರೆಂಬುದನ್ನು ಆತ ಅರಿತ. ಸ್ವತಃ ತನ್ನ ಮಗನೇ ಈ ದೀಶೆಯಲ್ಲಿ ದುರ್ಬಲನಾಗಿ ಹೊಣೆಗಾರಿಕೆಯನ್ನು ಹೊರುವಲ್ಲಿ ಅಸಮರ್ಥನಾಗಿದ್ದ[20].

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ದಕ್ಷಿಣ ಭಾರತದ ಇತಿಹಾಸದಲ್ಲಿ ಅದ್ವಿತೀಯವಾದ ಘಟನೆ. ಇಲ್ಲಿನ ರಾಜಕೀಯ ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಸಾಮ್ರಾಜ್ಯದ ಆವಿರ್ಭಾವವಾಯಿತು. ಈ ವೇಳೆಗೆ ಉತ್ತರ ಭಾರತವೆಲ್ಲಾ ಸಂಪೂರ್ಣವಾಗಿ ಮುಸ್ಲಿಮರ ಆಡಳಿತಕ್ಕೆ ಒಳಪಟ್ಟಿದ್ದುದಲ್ಲದೆ, ಅವರ ಹಿಡಿತ ದಕ್ಷಿಣದ ಕಡೆಗೂ ವ್ಯಾಪಿಸತೊಡಗಿತ್ತು[21]. ಹೊಯ್ಸಳ ಸಾಮ್ರಾಜ್ಯದ ಅವನತಿ ಆಗಲೇ ನಿರ್ಧಾರವಾಗಿತ್ತು. ಮಲಿಕ್ ನಯಿಬ ಕಫುರ್ ದಕ್ಷಿಣದ ಕಡೆಗೆ ದಂಡೆತ್ತಿಬಂದು ವಿಜಯ ದುಂದುಭಿಯನ್ನು ಬಾರಿಸತೊಡಗಿದ್ದನು. ದೆಹಲಿಯ ಸುಲ್ತಾನ ಮಹಮ್ಮದ್ ಬಿನ್ ತುಘಲಕ್‌ನ ಕಾಲದಲ್ಲಿ ಈ ಬೀತಿ ಇನ್ನೂ ಹೆಚ್ಚಿತು. ದೇಶವೆಲ್ಲಾ ಅವ್ಯವಸ್ಥಿತವಾಯಿತು. ಅತ್ಯಂತ ಸುಸಂಘಟಿತವೂ ಸುಸಜ್ಜಿತವೂ ಆದ ರೀತಿಯಲ್ಲಿ ಅದನ್ನು ಎದುರಿಸದೇ ಹೋಗಿದ್ದರೆ, ದಕ್ಷಿಣ ದೇಶವೂ ಮಹಮ್ಮದೀಯರ ವಶವಾಗುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಆ ಅಪಾಯವನ್ನರಿತು ಅದನ್ನು ಎದುರಿಸಿ ಹಿಂದೂ ರಾಜ್ಯವನ್ನೂ, ಧರ್ಮವನ್ನೂ, ಸಂರಕ್ಷಿಸುವುದಕ್ಕಾಗಿಯೇ ದೀಕ್ಷೆವೆತ್ತು ಸ್ಥಾಪಿತವಾಯಿತು ಧರ್ಮ ಸಾಮ್ರಾಜ್ಯ ವಿಜಯನಗರ[22].

ಇದು ಸ್ಥಾಪನೆಯಾದ ಬಗೆಯನ್ನು ಕುರಿತು ಏಕಾಭಿಪ್ರಾಯವಿಲ್ಲ. ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಈ ಸಾಮ್ರಾಜ್ಯಕ್ಕೆ ಪ್ರಮುಖ ಕಾರಣಕರ್ತರೆಂಬ ವಿಚಾರದಲ್ಲಿ ಯಾವ ಸಂದೇಹವೂ ಇಲ್ಲ; ಉಳಿದ ಕೆಲವು ವಿವರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ವಿಚಾರದಲ್ಲಿ ರಾಬರ್ಟ ಸಿವೆಲ್‌ರವರು ಅಭಿಪ್ರಾಯ ಹೀಗಿದೆ: ಹರಿಹರ ಮತ್ತು ಬುಕ್ಕ ಸಹೋದರರು ಓರಂಗಲ್ಲಿನ ಪ್ರತಾಪರುದ್ರ ದೇವನ ಬಳಿಯಲ್ಲಿದ್ದರು[23]. ಮುಸ್ಲಿಮರ ದಾಳಿಯಿಂದ ಓರಂಗಲ್ಲು ನಾಶವಾದ ಮೇಲೆ

ಆನೆಗೊಂದಿಗೆ ಬಂದು ಅಲ್ಲಿ ಆಶ್ರಯವನ್ನು ಪಡೆದರು. ಮುಸ್ಲಿಮರ ಅತ್ಯಾಚಾರದಿಂದ ಅವರ ಮನಸ್ಸು ನೊಂದಿತ್ತು. ದೇಶ ಮತ್ತು ಧರ್ಮ ರಕ್ಷಣೆಗೆ ಪ್ರತಿಜ್ಞೆ ಮಾಡಿದ್ದರು. ಆನೆಗೊಂದಿಗೆ ಬಂದು ಅಲ್ಲಿ ಕಂಪಿಲ ರಾಜನ ಬಳಿಯಲ್ಲಿ ಮಂತ್ರಿ ಮತ್ತು ಭಂಡಾರದ ಅಧಿಕಾರಿಗಳಾಗಿ ಸ್ಥಾನವನ್ನು ಪಡೆದರು[24]. ಸುಮಾರು 1334ರಲ್ಲಿ ಬಹಾವುದ್ದೀನನಿಗೆ ಆಶ್ರಯವನ್ನು ಕೊಟ್ಟ ಕಾರಣಕ್ಕಾಗಿ ತುಘಲಕ್‌ನು ಆನೆಗೊಂದಿಯನ್ನೂ, ಕಂಪಿಲ ದುರ್ಗವನ್ನೂ ಮುತ್ತಿ ಕಂಪಿಲರಾಯನನ್ನು ಸೋಲಿಸಿ ಅವುಗಳನ್ನು ವಶಪಡಿಸಿಕೊಂಡನು. ಅಲ್ಲಿ ತನ್ನ ಪ್ರತಿನಿಧಿಯನ್ನಾಗಿ ಮಲ್ಲಿಕ್ ಮಹಮ್ಮದ್‌ನನ್ನು ನೇಮಿಸಿ ದೆಹಲಿಗೆ ಹಿಂತಿರುಗಿದನು. ಮಹಮ್ಮದನಿಗೆ ಅಲ್ಲಿನ ಜನರನ್ನು ವಶದಲ್ಲಿಟ್ಟುಕೊಂಡು ಆಳುವುದು ಕಷ್ಟವಾಯಿತು. ರಾಜ್ಯವನ್ನು ಅವರಿಗೇ ಕೊಡಲೂ ಉದ್ದೇಶಿಸಿ, ಹರಿಹರನನ್ನು ರಾಜನನ್ನಾಗಿಯೂ, ಬುಕ್ಕನನ್ನು ಮಂತ್ರಿಯನ್ನಾಗಿಯೂ ನೇಮಿಸಿ ಹೊರಟುಹೋದನು. ಈ ಸಹೋದರರಿಂದಲೇ ಮುಂದೆ ವಿಜಯನಗರ ಸ್ಥಾಪಿತವಾಯಿತು – ಇದು ಅನೇಕ ಅಭಿಪ್ರಾಯಗಳನ್ನು ಮಥಿಸಿ ರಾಬರ್ಟ ಸಿವೆಲ್‌ರವರು ಕೊಡುವ ಅಭಿಪ್ರಾಯ. ಕಂಪಿಲರಾಯ ಮತ್ತು ಅವನ ಮಗ ರಾಮನಾಥ ಅಥವಾ ಕುಮಾರರಾಮ ಇವರ ಪಾತ್ರವೂ ಈ ಸಾಮ್ರಾಜ್ಯ ಸ್ಥಾಪನೆಯಲ್ಲಿ ಇರುವಂತೆ ತೋರುತ್ತದೆ[25].

ಇನ್ನೊಂದು ಅಭಿಪ್ರಾಯದ ಪ್ರಕಾರ 3ನೆಯ ಹೊಯ್ಸಳ ಬಲ್ಲಾಳ ಈ ಸಾಮ್ರಾಜ್ಯ ಸ್ಥಾಪನೆಗೆ ಸ್ವಲ್ಪಮಟ್ಟಿಗೆ ಕಾರಣನಾಗುತ್ತಾನೆ. ಹರಿಹರ ಮತ್ತು ಬುಕ್ಕರು ಬಲ್ಲಾಳನ ಆಶ್ರಿತರಾಗಿದ್ದವರು. ಆನೆಗೊಂದಿಯನ್ನು ಕೇಂದ್ರವಾಗಿಟ್ಟುಕೊಂಡು ಹೊಸ ಸಾಮ್ರಾಜ್ಯದ ಸ್ಥಾಪನೆಗೆ ಮೊದಲು ಅವರು ನಾಂದಿಯನ್ನು ಹಾಡಿದರು. ಆನಂತರ

ಹಂಪೆಯಲ್ಲಿ ವಿಜಯನಗರ ನಿರ್ಮಿತವಾಯಿತು. ಈಚೆಗೆ ಸಿಕ್ಕ ಅನೇಕ ಆಧಾರಗಳು ಇಲ್ಲಿ ಬಲ್ಲಾಳನ ಪಾತ್ರವನ್ನು ಸಮರ್ಥಿಸುವಂತಿವೆ ಎನ್ನುತ್ತಾರೆ ಕೆಲವು ವಿದ್ವಾಂಸರು. ವಿಜಯನಗರ ಸ್ಥಾಪಿತವಾಗುವುದಕ್ಕೆ ಮುನ್ನ "ಹೊಸ ಪಟ್ಟಣ" ಎಂದು ಕರೆಯಲಾಗುತ್ತಿದ್ದ ಆ ಊರು ಬಲ್ಲಾಳನ ಅನೇಕ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ತಿಳಿದುಬರುತ್ತದೆ. ಆದ್ದರಿಂದ ಈ ಸಾಮ್ರಾಜ್ಯದ ಸ್ಥಾಪನೆಯಲ್ಲಿ ಆತನ ಪಾತ್ರವೂ ಪ್ರಮುಖವಾಗಿದ್ದಿರಬೇಕೆಂದು ಅಭಿಪ್ರಾಯ ಪಡಲಾಗಿದೆ[26].

ಇದಲ್ಲದೆ ಇನ್ನೊಂದು ಅಭಿಪ್ರಾಯವಿದೆ. ಹರಿಹರ ಮತ್ತು ಬುಕ್ಕರು ಓರುಂಗಲ್ಲಿನ ಪತನಾನಂತರ ಸುಲ್ತಾನ್ ಮಹ್ಮದ್ ಬಿನ್ ತುಘಲಕ್‌ನ ಪ್ರತಿನಿಧಿಗಳಾಗಿ ಅಲ್ಲಿದ್ದರು. ಮಹಮ್ಮದನು ೩ನೇ ಬಲ್ಲಾಳನನ್ನು ಅಡಗಿಸಲು ದಕ್ಷಿಣಕ್ಕೆ ಅವರನ್ನು ಕಳುಹಿಸಿಕೊಟ್ಟನು. ಆದರೆ ಅವರು ಇತ್ತ ಬಂದ ನಂತರ ವಿದ್ಯಾರಣ್ಯರ ಪ್ರಭಾವಕ್ಕೆ ಸಿಕ್ಕು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಕಾರಣರಾದರು. ಹೀಗೆ ಈ ರಾಜ್ಯದ ಹುಟ್ಟನ್ನು ಕುರಿತು ಅನೇಕ ಅಭಿಪ್ರಾಯಗಳು ಬೆಳೆದಿವೆ. ಇವುಗಳಲ್ಲೆಲ್ಲಾ ಕಾಣುವ ಒಂದು ನಿರ್ದಿಷ್ಟವಾದ ಅಂಶವೆಂದರೆ ಹರಿಹರ ಮತ್ತು ಬುಕ್ಕರು ಇದರ ಸ್ಥಾಪನೆಗೆ ಕಾರಣರಾದರೆಂಬುದು. ಇವರಿಗೆ ಹಿನ್ನೆಲೆಯಲ್ಲಿ ಪ್ರಮುಖ ಶಕ್ತಿಯಾಗಿ ನಿಂತವರು ವಿದ್ಯಾರಣ್ಯರೆಂಬ ವಿಚಾರವೂ ಸಂದೇಹಾಸ್ಪದ. ವಿದ್ವಾಂಸರಾದ ಶ್ರೀ ಬಿ.ಎ. ಸಾಲೆತೊರೆ ಅವರು ಹೇಳುವ ಅಭಿಪ್ರಾಯಗಳು ಗಮನಾರ್ಹವಾಗಿವೆ. ವಿದ್ಯಾರಣ್ಯರು ಈ ಸಾಮ್ರಾಜ್ಯ ಸ್ಥಾಪನೆಗೆ ಕಾರಣಕರ್ತರೆನ್ನುವುದು ಚಾರಿತ್ರಿಕ ಸತ್ಯವಲ್ಲವೆಂಬುದು ಅವರ ನಿರ್ದಿಷ್ಟ ಅಭಿಪ್ರಾಯವಾಗಿದೆ. ಶಾಸನ ಮತ್ತು ಇತರ ಅಧಾರಗಳ ಮೇಲಿಂದ ಅವರು ಈ ಅಭಿಪ್ರಾಯಕ್ಕೆ ಬಂದಿದ್ದಾರೆ[27]. ಹರಿಹರ ಮತ್ತು

ಬುಕ್ಕರ ರಾಜಗುರುಗಳು ಕ್ರಿಯಾಶಕ್ತಿ ಒಡೆಯರು ಎಂಬುದಕ್ಕೆ ಶಾಸನದ ಅಧಾರಗಳಿವೆಯೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಮತ್ತು ಕೊನೆಯಲ್ಲಿ;

[illegible]

ಎಂದು ತಮ್ಮ ಅಬಿಪ್ರಾಯವನ್ನು ನಿರ್ಧಾರವಾಗಿ ನುಡಿಯುತ್ತಾರೆ. ಈ ದಿಕ್ಕಿನಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ. ಅವರು ಹೇಳುವಂತೆ ಕಥೆಯನ್ನು ನಂಬಿ ಸತ್ಯವನ್ನು ಕಡೆಗಣಿಸುವಂತಾಗಬಾರದು.

ವಿವಿಧ ಅಭಿಪ್ರಾಯಗಳೇನೇ ಇರಲಿ ಒಟ್ಟಿನಲ್ಲಿ ಕನ್ನಡ ವಂಶದ ಸಂಗಮನ ಮಕ್ಕಳಾದ ಹರಿಹರ ಬುಕ್ಕರು ವಿಜಯನಗರದ ಸ್ಥಾಪಕರು ಎಂಬುದರಲ್ಲಿ ಸಂದೇಹವಿಲ್ಲ. ಅವರ ಈ ಕಾರ್ಯದಲ್ಲಿ ಅನೇಕ ಶಕ್ತಿಗಳು ನೆರವಾದುವು. ದೇಶದ ಆ ಸಂದಿಗ್ಧ ಪರಿಸ್ಥಿತಿಯನ್ನೆದುರಿಸಲು ಎಲ್ಲ ಸತ್ವ ಶಕ್ತಿಗಳು ಒಟ್ಟುಗೂಡಿ, ಜೊತೆಗೆ ಕರ್ನಾಟಕದ ಆಧಿದೇವಿ ಭುವನೇಶ್ವರಿಯ ಆಶೀರ್ವಾದವನ್ನು ಪಡೆದು ವಿಜಯನಗರ ಸಾಮ್ರಾಜ್ಯ ಮೈವೆತ್ತಿತೆನ್ನಬಹುದು[28].

**ಮೂಲ ಆಧಾರಗಳ ಸಮೀಕ್ಷೆ:**

ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರಾದ ಹರಿಹರ ಮತ್ತು ಬುಕ್ಕರ ರಾಷ್ಟ್ರೀಯತೆ, ಮೂಲ ನಿವಾಸ ಹಾಗೂ ರಾಜ್ಯ ಸ್ಥಾಪನೆ ಕುರಿತು ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ ಅವರ ಮೂಲವನ್ನು ಮೂರು ಸಿದ್ಧಾಂತಗಳಲ್ಲಿ ಮಂಡಿಸಲಾಗಿದೆ[29].

1. **ತೆಲಗು ಮೂಲ:**

ಡಾ. ಎನ್. ವೆಂಕಟರಮಣಯ್ಯ, ಕೆ.ಎ. ನೀಲಕಂಠ ಶಾಸ್ತ್ರಿ, ಪ್ರೊ. ಸೂರ್ಯನಾರಾಯಣರಾವ್, ರಾಬರ್ಟ ಸಿವೆಲ್, ಬರನಿ, ಇಸಾಮಿಯರು ಈ ಸಿದ್ಧಾಂತದ ಪ್ರತಿಪಾದಕರು. ಅವರ ಪ್ರಕಾರ ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ ಹರಿಹರ ಮತ್ತು ಬುಕ್ಕರು ಆಂಧ್ರದವರಾಗಿದ್ದು ತೆಲಗು ಮೂಲಕ್ಕೆ ಸೇರಿದವರಾಗಿದ್ದರು. ಅವರು ವಾರಂಗಲ್‌ನ ಕಾಕತೀಯ ದೊರೆ ಪ್ರತಾಪರುದ್ರನ ಸೇವೆಯಲ್ಲಿದ್ದರು. ಒಬ್ಬನು ಮಂತ್ರಿಯೂ, ಇನ್ನೊಬ್ಬನು ಖಜಾಂಚಿ ಆಗಿದ್ದರು. 1323ರಲ್ಲಿ ದೆಹಲಿಯ ಸುಲ್ತಾನ ಮಹ್ಮದ-ಬಿನ್-ತುಘಲಕ್‌ನು ವಾರಂಗಲ್ ಮೇಲೆ ಧಾಳಿಯಿಟ್ಟಾಗ ಅಲ್ಲಿದ್ದ ಹರಿಹರ ಮತ್ತು ಬುಕ್ಕರು ತಪ್ಪಿಸಿಕೊಂಡು ಆನೆಗೊಂದಿಗೆ ಬಂದು ಕಂಪಿಲಿ ರಾಜನಾದ ರಾಮನಾಥನ ಸೇವೆಗೆ ಸೇರಿಕೊಂಡರು. ಮತ್ತೊಮ್ಮೆ ಮಹ್ಮದ ತೊಘಲಕ್‌ನು ಕಂಪಿಲಿ ಮೇಲೆ ದಾಳಿ ಇಟ್ಟು ಅವರನ್ನು ಬಂಧಿಸಿ ದೆಹಲಿಗೆ ಕೊಂಡೊಯ್ದು ಅಲ್ಲಿ ಅವರನ್ನು ಇಸ್ಲಾಂಗೆ ಮತಾಂತರಿಸಿದನು. ಕೆಲಕಾಲ ಸುಲ್ತಾನನ ನಿಷ್ಠಾವಂತ ಸೇವೆ ಮಾಡಿದ ನಂತರ ಅವರನ್ನು ದಖನ್‌ನ ರಾಜ್ಯಪಾಲರಾಗಿ ನೇಮಿಸಲಾಯಿತು. ಹೀಗೆ ದಕ್ಷಿಣಕ್ಕೆ ಬಂದ ಅವರು ವಿದ್ಯಾರಣ್ಯರ ದರ್ಶನ ಪಡೆದು ಅವರ ಸಹಾಯದಿಂದ

ಸ್ವತಂತ್ರ್ಯ ವಿಜಯನಗರ ಸಾಮ್ರಾಜ್ಯವನು ಸ್ಥಾಪಿಸಿದರು. ಆಗವರು ಪುನಃ ಹಿಂದೂಗಳಾಗಿ ಹಿಂದೂ ಧರ್ಮದ ರಕ್ಷಣೆಗೆ ಕಟ್ಟಿಬದ್ಧರಾದರು.

ಜಿಯಾವುದ್ದೀನ ಬರನಿ ಹೇಳುವಂತೆ ಮಹ್ಮದನು ವಾರಂಗಲ್‌ನ್ನು ವಶಪಡಿಸಿಕೊಂಡಾಗ ಅಲ್ಲಿನ ಹಿಂದೂಗಳು ಕನ್ನಯ್ಯನಾಯಕ ನೇತೃತ್ವದಲ್ಲಿ ದಂಗೆ ಎದ್ದರು. ದಂಗೆ ಅಡಗಿಸಲು ಸುಲ್ತಾನ ಆ ಹಿಂದೆ ದೆಹಲಿಗೆ ಕೊಂಡೊಯ್ದ ಸಂಗಮ ಸಹೋದರರರನ್ನು ದಕ್ಷಿಣಕ್ಕೆ ಕಳುಹಿಸಿದನು. ಇಸ್ಲಾಂ ಧರ್ಮ ಸ್ವೀಕರಿಸಿದ್ದ ಅವರು ಪುನಃ ಹಿಂದೂ ಧರ್ಮಕ್ಕೆ ಪರಿವರ್ತನೆಗೊಂಡು ಅರಾಜಕತೆಯನ್ನು ಹೋಗಲಾಡಿಸಲು ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದರು. ಇಸಾಮಿ ಎಂಬ ಮುಸ್ಲಿಂ ಚರಿತ್ರೆಕಾರ ಕೆಲವು ಬದಲಾವಣೆಗಳೊಂದಿಗೆ ಇದೇ ಹೇಳಿಕೆಯನ್ನು ನೀಡಿದ್ದಾನೆ. ಇವನ ಪ್ರಕಾರ ಹರಿಹರ ಮತ್ತು ಬುಕ್ಕರು ಸುಲ್ತಾನನಿಂದ ಬಂಧಿತರಾಗಿ ಇಸ್ಲಾಂ ಅನ್ನು ಸ್ವೀಕರಿಸಿದರು. ದಕ್ಷಿಣಕ್ಕೆ ಅವರನ್ನು ಅಟ್ಟಿದ ಕೂಡಲೇ ಪುನಃ ಹಿಂದೂಗಳಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದರು.

ತೆಲುಗುಮೂಲ ನಂಬಲರ್ಹವಲ್ಲ ಮೇಲ್ಕಂಡ ವರ್ಣನೆಗಳು ಸಮಕಾಲೀನವಲ್ಲದೆ ಆನಂತರದ ಕಾಲದಲ್ಲಿ ಹುಟ್ಟಿದವು. ವಿದ್ಯಾರಣ್ಯ ವೃತ್ತಾಂತ, ರಾಜಕಾಲ ನಿರ್ಣಯ, ವಿದ್ಯಾರಣ್ಯ ಕಾಲಜ್ಞಾನ, ಕೆಳದಿ ನೃಪ ವಿಜಯ, ಕುಮಾರರಾಮನ ಕಥೆಯಂತಹ ಕೆಲವೇ ಗ್ರಂಥಗಳಲ್ಲಿ ಈ ಮೂಲವನ್ನು ವರ್ಣಿಸಲಾಗಿದೆ. ಬರನಿ ಮತ್ತು ಇಸಾಮಿಯರು ಸಮಕಾಲೀನರಲ್ಲ ಈ ಘಟನೆ ನಡೆದ ನಂತರ ಹೇಳಿದ ಹೇಳಿಕೆಗಳಿವು. ಮುಸ್ಲಿಂ ಬರಹಗಾರರಲ್ಲಿ ಇಂತಹ ಪಕ್ಷಪಾತ ಹೇಳಿಕೆಗಳು ಬಹಳ ದೊರೆಯುತ್ತವೆ. ವಿದ್ಯಾರಣ್ಯರು ಹರಿಹರ ಮತ್ತು ಬುಕ್ಕರ

ಸಮಕಾಲೀನರಲ್ಲವೆಂದು ಸಾಬೀತಾಗಿದೆ. ಮುಸ್ಲಿಂ ದಾಖಲೆಗಳಲ್ಲಿ ತಾಳೆಯಾಗದ ಅಸಂಬದ್ಧ ಅತಾರ್ಕಿಕ ವಿಷಯಗಳಿವೆ. ಕಾಕತೀಯರ ಇತಿಹಾಸದಲ್ಲಿ ಹರಿಹರ ಮತ್ತು ಬುಕ್ಕರ ಹೆಸರೇ ಬರುವುದಿಲ್ಲ ಅವರು ವಾರಂಗಲ್‌ನ ಸೇವೆಯಲ್ಲಿದ್ದರೆಂಬುದಕ್ಕೂ ಆಧಾರಗಳಿಲ್ಲ ಅಲ್ಲದೆ ಕಾಕತೀಯರಿಗೂ ಮತ್ತು ಕಂಪಿಲ ರಾಜರಿಗೂ ವೈರತ್ವವಿರುವಾಗ ಹರಿಹರ ಮತ್ತು ಬುಕ್ಕರು ಕಂಪಿಲಿಗೆ ಬಂದಿದ್ದು ಮತ್ತು ಅತ್ಯಲ್ಪ ಕಾಲದಲ್ಲಿ ರಾಜ್ಯ ಕಟ್ಟಿದರು ಎಂಬುದು ಕಾಲ್ಪನಿಕವೇ ಹೊರತು ಸತ್ಯವಲ್ಲ. ಅವರು ಇಸ್ಲಾಂ ಸ್ವೀಕರಿಸಿದ್ದರು ಮತ್ತು ದಖನ್‌ಗೆ ರಾಜ್ಯಪಾಲರಾಗಿ ಬಂದರು ಎನ್ನುವುದಾದರೆ ದಖನ್ನಿನ ಹಿಂದೂಗಳು ಅವರ ನಾಯಕತ್ವವನ್ನು ಒಪ್ಪಿಕೊಂಡರೆ? ಎಂಬ ಪ್ರಶ್ನೆ ಏಳುತ್ತದೆ. ಅವರು ಆಂಧ್ರದಿಂದ ಬಂದವರಾಗಿದ್ದರೆ ಒಮ್ಮೆಯಾದರೂ ತೆಲುಗು ಗ್ರಂಥಗಳಲ್ಲಿ ಇಲ್ಲವೆ ಶಾಸನಗಳಲ್ಲಿ ಹೇಳಿಕೊಳ್ಳುತ್ತಿದ್ದರು. ಆದರೆ ಹೇಳಿಕೊಂಡಿಲ್ಲ. ಈ ಅತ್ಯಲ್ಪ ಮಿಥ್ಯಾಂಶಗಳಿಂದ ಸತ್ಯಕ್ಕೆ ವಿರುದ್ಧವಾದ ತೆಲುಗು ವಾದವನ್ನು ಕೈಬಿಡಲಾಗಿದೆ[30].

**2. ಕಂಪಿಲಿ ಮೂಲ:**

ಇಬನ್ ಬತೂತ್ ಎಂಬ ಸಮಕಾಲೀನ ಮುಸ್ಲಿಂ ಚರಿತ್ರೆಕಾರನ ಪ್ರಕಾರ ವಿಜಯನಗರ ಸಾಮ್ರಾಜ್ಯ ಸ್ಥಾಪಕರ ತಂದೆ ಸಂಗಮರು ಆನೆಗೊಂದಿಯ ಕಂಪಿಲಿ ಆಸ್ಥಾನದಲ್ಲಿದ್ದು ಅವನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರು ಸಹ ಕಂಪಿಲಿಯಲ್ಲಿದ್ದರು. ಮಹ್ಮದ–ಬಿನ–ತೂಘಲಕ್‌ನು ಕಂಪಿಲಿಯನ್ನು ಆಕ್ರಮಿಸಿ ಕಂಪಿಲ ರಾಜನನ್ನು ಕೊಂದು ಅವನ 11 ಮಂದಿ ಮಕ್ಕಳನ್ನು ಬಂಧಿಸಿ ದೆಹಲಿಗೆ

ಕೊಂಡೊಯ್ದನು ಮತ್ತು ಇಸ್ಲಾಂಗೆ ಮತಾಂತರಿಸಿದನು. ಇವರಲ್ಲಿ ಹರಿಹರ ಮತ್ತು ಬುಕ್ಕರು ಸೇರಿದ್ದರು. ಅವರಿಬ್ಬರೂ ಸುಲ್ತಾನನಿಗೆ ನಿಷ್ಠೆಯಿಂದ ಇದ್ದು ಸುಲ್ತಾನನ ಮೆಚ್ಚುಗೆಗೆ ಪಾತ್ರರಾದರು. ಅವರನ್ನು ಕಂಪಿಲ ರಾಜ್ಯದ ಪ್ರಾಂತ್ಯಾಧಿಕಾರಿಗಳಾಗಿ ನೇಮಿಸಲಾಯಿತು. ಹೇಗೆ ದಕ್ಷಿಣಕ್ಕೆ ಬಂದ ಅವರು ಸುಲ್ತಾನನ ವಿರುದ್ಧ ದಂಗೆ ಎದ್ದು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇಸಾಮಿಯೂ ಸಹ ಇದೇ ಕತೆಯನ್ನೇ ಹೇಳಿದ್ದಾನೆ.

ಕುಮಾರರಾಮನ ಕಥೆ ಎಂಬ ಕೃತಿಯಲ್ಲಿ ನಂಜುಂಡ ಕವಿ ಕಂಪಿಲವಾದವನ್ನು ಟೀಕಿಸಿದ್ದಾನೆ. ಕಂಪಿಲ ರಾಯನ ಮಕ್ಕಳು ಮಹ್ಮದಿಯರ ವಿರುದ್ಧ ಹೋರಾಡುತ್ತಲೇ ನಿಧನರಾದರು. ಹಾಗಿರುವಾಗ ಅವರನ್ನು ಮತಾಂತರಿಸಲಾಯಿತು ಎಂಬ ಪ್ರಮೇಯವೇ ಬರುವುದಿಲ್ಲ. ಅಲ್ಲದೆ ಹರಿಹರ ಮತ್ತು ಬುಕ್ಕರು ಕಂಪಿಲರಾಯನ ಮಕ್ಕಳೇ ಅಲ್ಲ ಅವರು ಸಂಗಮನ ಪುತ್ರರು ಎಂದು ಹೇಳಿದ್ದಾನೆ.

ರಾಬರ್ಟ್ ಸಿವೆಲ್ ಹೇಳಿರುವಂತೆ ಸಂಗಮರು ಕುರುಬ ಜಾತಿಗೆ ಸೇರಿದವರು. ಅವರಲ್ಲಿ ಒಬ್ಬನು ದಿನವೂ ಬ್ರಾಹ್ಮಣನಿಗೆ ಊಟ ತರುತ್ತಿದ್ದನು. ಅವನೊಮ್ಮೆ ಕುರಿ ಕಾಯುತ್ತಿದ್ದಾಗ ಮೊಲ ನಾಯಿಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದುದನ್ನು ಕಂಡನು. ಈ ವಿಚಾರವನ್ನು ಆತ ವಿದ್ಯಾರಣ್ಯರ ಬಳಿ ಹೇಳಿದಾಗ ಇದು ವೀರಭೂಮಿ ಎಂದು ಹೇಳಿ ರಾಜ್ಯ ಕಟ್ಟಲು ಇದು ಸೂಕ್ತ ಸ್ಥಳವೆಂದು ಹೇಳಿದರು. ವಿದ್ಯಾರಣ್ಯರು ಸಂಗಮ ಸಹೋದರರಿಗೆ ರಾಜ್ಯ ಸ್ಥಾಪಿಸಲು ಧನ ಸಹಾಯ ನೀಡಿದರು[31].

೩. ಕನ್ನಡ ಮೂಲ:

ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ ಸಂಗಮ ವಂಶದ ಹರಿಹರ ಮತ್ತು ಬುಕ್ಕರು ಶುದ್ಧ ಕನ್ನಡಿಗರು ಕರ್ನಾಟಕದವರು. ಅವರು ಹೊಯ್ಸಳರೊಂದಿಗೆ ರಕ್ತ ಸಂಬಂಧ ಹೊಂದಿದ್ದರು. ಹೊಯ್ಸಳ ದೊರೆ ೩ನೇ ಬಲ್ಲಾಳನ ಸೋದರಳಿಯ ಬಳ್ಳಪ್ಪ ದಂಡನಾಯಕನು ಹರಿಹರನ ಸೋದರಿಯನ್ನು ವಿವಾಹವಾಗಿದ್ದು. ಈ ಸಂಗಮ ಸಹೋದರರು ಹೊಯ್ಸಳರ ಸೇವೆಯಲ್ಲಿದ್ದರು. ಅವರು ಆರಂಭದಲ್ಲಿ ಹೊಯ್ಸಳರ ಮಾಂಡಲಿಕರಾಗಿದ್ದು ಹೊಯ್ಸಳ ರಾಜ್ಯ ಪತನವಾದ ನಂತರ ಸ್ವತಂತ್ರ್ಯರಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದರು. ದಕ್ಷಿಣದಲ್ಲಿ ಮಹ್ಮದಿಯರ ಧಾಳಿಗಳ ವಿರುದ್ಧ ಹೋರಾಡುತ್ತಿದ್ದ ೩ನೇ ಬಲ್ಲಾಳ ತನ್ನ ರಾಜ್ಯವನ್ನು ರಕ್ಷಿಸಿಕೊಳ್ಳಲು ಹರಿಹರನನ್ನು ತನ್ನ ರಾಜ್ಯದ ಉತ್ತರ ಗಡಿಗಳ ರಕ್ಷಣೆಗೆ ರಾಜ್ಯಪಾಲನಾಗಿ ನೇಮಿಸಿದನು. ಅಲ್ಲದೆ ತನ್ನ ಮಗ ವಿರೂಪಾಕ್ಷನ ಹೆಸರಿನಲ್ಲಿ ವಿಜಯ ವಿರೂಪಾಕ್ಷ ನಗರವನ್ನು ತುಂಗಭದ್ರಾ ನದಿದಡದಲ್ಲಿ ನಿರ್ಮಿಸಿದನು. ಅದಕ್ಕೆ ಹರಿಹರನನ್ನು ನೇಮಿಸಿದನು. ಅದೇ ಮುಂದೆ ವಿಜಯನಗರವಾಯಿತು. ೩ನೇ ಬಲ್ಲಾಳನು ಕೊಲೆಯಾದ ಮೇಲೆ ಅರಸನಾದ ಅವನ ಮಗ ೪ನೇ ವೀರ ಬಲ್ಲಾಳನು ಅಸಮರ್ಥನಾಗಿದ್ದನು. ಆಗ ಹರಿಹರ ಮತ್ತು ಬುಕ್ಕರು ಸ್ವತಂತ್ರ್ಯಗೊಂಡು ಹಿಂದೂ ಧರ್ಮದ ರಕ್ಷಣೆಗಾಗಿ ಶೃಂಗೇರಿಯ ಜಗದ್ಗುರು ವಿದ್ಯಾರಣ್ಯರ ಪ್ರೇರಣೆಯಿಂದ ವಿಜಯನಗರ ಸಾಮ್ರಾಜ್ಯವನ್ನು ಏಪ್ರಿಲ್ ೧೮, ೧೩೩೬ರಂದು ಸ್ಥಾಪಿಸಿದರು. ಆರಂಭದಲ್ಲಿ ವಿಜಯನಗರವನ್ನು “ವಿದ್ಯಾರಣ್ಯ ನಗರ” ಎಂದು ಕರೆದಿದ್ದು ಅದನ್ನು

ತುಂಗಭದ್ರಾ ನದಿಯ ದಕ್ಷಿಣ ದಂಡೆಯಲ್ಲಿ ಸ್ಥಾಪಿಸಲಾಗಿತ್ತು. ಈ ಸಿದ್ಧಾಂತದ ವಾದಕರು ಪಿ.ಬಿ. ದೇಸಾಯಿ, ಬಿ.ಎ. ಸಾಲತೊರೆ, ಫಾದರ್ ಹೆರಾಸ್, ಶ್ರೀಕಂಠಯ್ಯ, ಫೇರಿಸ್ತಾ ಮೊದಲಾದವರು. ಪ್ರಸ್ತುತ ಎಲ್ಲರೂ ನಂಬಿರುವ ವಾದವೂ ಇದಾಗಿದೆ.

ಈ ವಾದವನ್ನು ಹಲವಾರು ಸಾಹಿತ್ಯ ಆಧಾರಗಳು ಬೆಂಬಲಿಸಿವೆ. ಅವುಗಳೆಂದರೆ;

1. ಸಂಗಮರ ರಾಜಧಾನಿಯಾದ ವಿಜಯನಗರ ಹೊಯ್ಸಳ ಸಾಮ್ರಾಜ್ಯದಲ್ಲಿತ್ತು.
2. ಫೇರಿಸ್ತಾನು ವಿಜಯನಗರ ಅರಸರನ್ನು 'ಕರ್ನಾಟಕದ ರಾಯ'ರು ಎಂದು ಕರೆದಿದ್ದಾನೆ. 1571ರ ವರೆಗೂ ವಿಜಯನಗರದ ಅರಸರು ತಮ್ಮನ್ನು 'ಕರ್ನಾಟಕ ಸಿಂಹಾಸನಾಧೀಶ್ವರ'ರು ಎಂದು ಕರೆಸಿಕೊಳ್ಳುತ್ತಿದ್ದರು.
3. ತೆಲುಗು ಕವಿಗಳಾದ ವಲ್ಲಭಾಚಾರ್ಯ, ಶ್ರೀನಾಥರು ಸಂಗಮ ಸಹೋದರರನ್ನು 'ಕರ್ನಾಟಕ ಕ್ಷಿತಿನಾಥ' ಎಂದು ವರ್ಣಿಸಿದ್ದಾರೆ.
4. ಗಂಗಾದೇವಿ ಬುಕ್ಕನನ್ನು 'ಕರ್ನಾಟಕದ ಕುಲಕೀರ್ತಿ' ಎಂದು ಚಿತ್ರಿಸಿದ್ದಾಳೆ.
5. ಕೃಷ್ಣದೇವರಾಯನನ್ನು ತೆಲುಗು ಕವಿ ಪೆದ್ದನ್ನನು ಕನ್ನಡ ರಾಜ್ಯ ರಮಾರಮಣಿ ಎಂದು ಕರೆದಿದ್ದಾರೆ. ರಾಯರೂ ಸಹ ತನ್ನನ್ನು 'ಕನ್ನಡರಾಯ' ಎಂದು ಕರೆದುಕೊಂಡಿದ್ದಾರೆ. ಅವರು ಹೊಂದಿರುತ್ತಿದ್ದ 'ಶ್ರೀಕರ್ನಾಟಕ ಮಹಿಷ ಕೃಷ್ಣದೇವರಾಯ' ಎಂಬ ಬಿರುದು ಕನ್ನಡದ್ದೇ.
6. ಹೊಯ್ಸಳರಿಗೆ ನಿಷ್ಠೆಯಿಂದ ಇದ್ದ ಹರಿಹರನು 'ಮಹಾಮಂಡಳೇಶ್ವರ' ಎಂಬ ಬಿರುದು ಇಟ್ಟುಕೊಂಡಿದ್ದನು.

7. ವಿಜಯನಗರದ ನಾಣ್ಯಗಳಲ್ಲಿ 'ಶ್ರೀ ವಿಜಯ ವಿರೂಪಾಕ್ಷ' ಎಂಬ ಅಂಕಿತವಿದ್ದು ಅದು ಕನ್ನಡದಲ್ಲಿದೆ. ಹಾಗೆಂದು ಅವರು ಸಹಿ ಹಾಕುತ್ತಿದ್ದರು. ಚಾಳುಕ್ಯರಂತೆ ಅವರದು ವರಹ ಲಾಂಛನ. ಅವರು ಕರ್ನಾಟಕದ ದೇವರುಗಳಾದ ಬೇಲೂರಿನ ಚೆನ್ನಕೇಶವ ಮತ್ತು ಹಂಪಿಯ ಕುಲದೇವರಾದ ವಿರೂಪಾಕ್ಷನ ಅರಾಧಕರಾಗಿದ್ದರು. ವಿರೂಪಾಕ್ಷನು ಸಂಗಮರ ಕುಲದೇವರಾಗಿದ್ದರು. ಸಂಗಮ ರಾಜರು ಹೆಚ್ಚಾಗಿ ಕನ್ನಡ ಕವಿಗಳನ್ನು ಪೋಷಿಸಿದರು.
8. ವಿಜಯನಗರದ ಕಾಲಕ್ಕೆ ಸೇರಿದ ೫೦೦೦ಕ್ಕೂ ಅಧಿಕ ಶಾಸನಗಳಲ್ಲಿ ಬಹುತೇಕವು ಕನ್ನಡದಲ್ಲಿವೆ. ಆಂಧ್ರ, ತಮಿಳುನಾಡುಗಳಲ್ಲಿ ದೊರೆತಿರುವ ಹೆಚ್ಚಿನ ಶಾಸನಗಳೂ ಸಹ ಕನ್ನಡದಲ್ಲಿವೆ.
9. ಗಂಗಾಬಿಕೆ ಮಧುರಾ ವಿಜಯಂನಲ್ಲಿ ಬುಕ್ಕನನ್ನು 'ಕರ್ನಾಟಕಲೋಕ ನಯನೋತ್ಸವ ಪೂರ್ಣಚಂದ್ರನೆಂದು', ಕಂಪಣನನ್ನು 'ಕರ್ನಾಟಕ ಕುಲಪ್ರದೀಪ'ನೆಂದು ಸ್ತುತಿಸಿದ್ದಾಳೆ. ಆಕೆ ವಿಜಯನಗರ ಸೈನ್ಯವನ್ನು 'ಕರ್ನಾಟಕ ಸೇನೆ' ಎಂದು ಕರೆದಿದ್ದಾಳೆ.
10. ಆರಂಭದಲ್ಲಿ ಹರಿಹರನಿಗೆ 'ಮಹಾಮಂಡಳೇಶ್ವರ' ಎಂಬ ಬಿರುದು ಇದ್ದು ೩ನೇ ಬಲ್ಲಾಳನ ಮರಣದ ನಂತರ ಆತ 'ಪರಮೇಶ್ವರ', 'ವೀರ ಪ್ರತಾಪ ಮಹಾರಾಜ' ಎಂಬ ಸಾರ್ವಭೌಮ ಸೂಚಕ ಬಿರುದುಗಳನ್ನು ಧರಿಸಿದನು. ಇದು ಸಂಗಮನು ಹೊಯ್ಸಳರ ಸಾಮಂತನಾಗಿದ್ದನೆಂದು ದೃಢಪಡಿಸುತ್ತದೆ.

ಮೇಲಿನ ಪುರಾವೆಗಳಿಂದ ವಿಜಯನಗರ ಸಂಸ್ಥಾಪಕರು ಕನ್ನಡಿಗರೆಂದು ಸಾಬೀತಾಗುತ್ತದೆ[32].

**ಅಧ್ಯಯನದ ಉದ್ದೇಶ:**

ಈ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದಂತೆ ಇರುವ ಸಾಕಷ್ಟು ಮೂಲಾಧರಗಳಿವೆ. ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳ ಕುರಿತು ಕೆಲವೊಂದು ತುಂಡು ತುಂಡಾದ ವಿಷಯಗಳನ್ನು ನೀಡುತ್ತವೆಯಾದರು ಅವರ ಸಮಗ್ರವಾದ ವ್ಯಕ್ತಿತ್ವದ ಪರಿಚಯವನ್ನು ನೀಡುವುದಿಲ್ಲ. ಹೆಚ್ಚಿನ ಕೃತಿಗಳು ಅವರ ಕಾಲದಲ್ಲಿ ನಿರ್ಮಾಣವಾಗಿರುವ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಸೀಮಿತವಾಗಿದ್ದರೆ, ಇನ್ನೂ ಕೆಲವು ಕೃತಿಗಳು ವಿದೇಶಿಯರು ಕಂಡಂತೆ ವಿಜಯನಗರದ ಇತಿಹಾಸ ಮಾತ್ರ ಉಲ್ಲೇಖಿಸುತ್ತವೆ. ಹೀಗಾಗಿ "ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳ" ಸಮಗ್ರ ಇತಿಹಾಸ ಕುರಿತು ಕೃತಿ ಇದುವರೆಗೆ ಹೊರ ಬಂದಿಲ್ಲ. ಆದ್ದರಿಂದ ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವುದು ಅವಶ್ಯವಾಗಿದೆ. ಅವರ ಕಾಲದ ಸಾಮಾಜಿಕ ಸ್ಥಿತಿಗತಿಗಳು, ಸಾಹಿತ್ಯ, ವಾಸ್ತುಶಿಲ್ಪ ಮತ್ತು ಆಡಳಿತ ಇತರ ನಿರ್ಮಿತಿಗಳನ್ನು ಮುಖ್ಯ ಆಧಾರವಾಗಿಟ್ಟುಕೊಂಡು ಅವರ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನರ ರಚಿಸುವುದೆ, ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

**ಆಕರ ಸಾಮಗ್ರಿಗಳು:**

ಒಂದು ಪ್ರದೇಶದ ಇತಿಹಾಸವನ್ನು ಪುನರ ರಚಿಸುವಾಗ ಆ ಕಾಲದ ಪ್ರಾಚ್ಯವಶೇಷಗಳು ಮತ್ತು ಕೃತಿಗಳು ಮಾಹಿತಿಯನ್ನು ನೀಡುತ್ತವೆ. ಪುರಾತತ್ವ ಅವಶೇಷಗಳಾದ ಸ್ಮಾರಕಗಳು, ಮೂರ್ತಿಶಿಲ್ಪಗಳು, ನಾಣ್ಯಗಳು ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಆಧಾರಗಳಾಗಿವೆ. ಇದಲ್ಲದೆ ಸಮಕಾಲಿನ ಸಾಹಿತ್ಯ ಕೃತಿಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳುತ್ತದೆ.

**ಸ್ಮಾರಕಗಳು:**

ಸ್ಮಾರಕಗಳು ನಾಡಿನ ಅಮೂಲ್ಯ ಸಂಪತ್ತು ಒಂದು ನಾಡಿನ ಸಾಂಸ್ಕೃತಿಕ ಪ್ರತಿನಿಧಿಗಳೆಂದರೆ ಸ್ಮಾರಕಗಳು. ಶಾಸನ ಮತ್ತು ಸಾಹಿತ್ಯಕ ಕೃತಿಗಳಿಂದ ತಿಳಿಯದೇ ಇರುವ ವಿಷಯವನ್ನು ಸ್ಮಾರಕಗಳ ಅಧ್ಯಯನದಿಂದ ತಿಳಿಯಬಹುದು. ಕಳೆದು ಹೋದ ಹಣವನ್ನು ಮತ್ತು ಭೂಮಿಯನ್ನು ಮರಳಿ ಪಡೆಯಬಹುದು, ಆದರೆ ನಮ್ಮ ಸಂಸ್ಕೃತಿ ನಾಶವಾದರೆ ಅದನ್ನು ಪುನ: ಪಡೆಯುವುದು ಕಷ್ಟಸಾಧ್ಯ. ಈ ದೃಷ್ಟಿಯಲ್ಲಿ ಪ್ರಾಚೀನ ಸಂಸ್ಕೃತಿಯನ್ನು ಪರಿಚಯಿಸುವ ಸ್ಮಾರಕಗಳು ಸಂಸ್ಕೃತಿಯ ಜ್ಞಾನ ನಿದಿಯಾಗಿವೆ ಎಂದರೆ ತಪ್ಪಾಗದು. ವಿಜಯನಗರದ ಸಂಗಮ ವಂಶ ಕಾಲದ ಸಂಸ್ಕೃತಿಯನ್ನು ಪುನರ ನಿರ್ಮಿಸಬೇಕಾದರೆ ಅವರ ಕಾಲದಲ್ಲಿ ನಿರ್ಮಾಣವಾಗಿರುವ ಧಾರ್ಮಿಕ ಸ್ಮಾರಕಗಳು, ಲೌಕಿಕ ಸ್ಮಾರಕಗಳು ಅರಮನೆಗಳು, ಬಾವಿಗಳು, ಗಜಶಾಲೆ, ಕೋಟೆಗಳು. ಹೀಗೆ ಅವರ ಕಾಲದಲ್ಲಿ ವಿಜಯನಗರ ಮತ್ತು ಬೇರ ಬೇರೆ

ಸ್ಥಳಗಳಲ್ಲಿ ನಿರ್ಮಾಣವಾಗಿರುವ ಸ್ಮಾರಕಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಶಾಸನಗಳು**:

ಶಾಸನಗಳು ಚರಿತ್ರೆಯ ಪುನರ ರಚನೆಯಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಭಾರತ ದೇಶದ ಹಲವು ಶತಮಾನಗಳ ಇತಿಹಾಸ ರಚನೆಯ ಸ್ವರೂಪಕ್ಕೆ ಶಾಸನಗಳೇ ಜೀವನಾಡಿ ಎನಿಸಿವೆ. ಅವು ಪ್ರಾಚೀನ, ಮಧ್ಯ ಹಾಗೂ ಆಧುನಿಕ ಕಾಲದ ಜನರ ಬದುಕಿನ ಸಮಸ್ತ ಸಂವೇದನೆ ಹಾಗೂ ಪ್ರಾಮಾಣಿಕ ಧ್ವನಿಗಳಾಗಿವೆ. ಅದಕ್ಕಾಗಿಯೇ ಶಾಸನಗಳು ಐತಿಹಾಸಿಕ ಸಂಶೋಧನೆಯ ಪ್ರತಿಯೊಂದು ಹಂತದಲ್ಲಿ ಅಧಿಕೃತ ಭೂಮಿಕೆಯಾಗಿ ನಿಲ್ಲುತ್ತವೆ. ಸಂಗಮರ ಕಾಲದ ಅರಸರ ಶಾಸನಗಳು ಈ ಅಧ್ಯಯನಕ್ಕಾಗಿ ಬಳಸಲಾಗಿದೆ.

**ನಾಣ್ಯಗಳು**:

ಇತಿಹಾಸ ಪುನರ ರಚನೆಯಲ್ಲಿ ನಾಣ್ಯಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ನಾಣ್ಯಗಳು ಆರ್ಥಿಕ ಇತಿಹಾಸದ ಪುನರ ರಚನೆಯಲ್ಲಿ ಬಹು ಮುಖ್ಯ ಆಕರಗಳಾಗಿವೆ. ಅವು ವಿವಿಧ ಕಾಲಾವಧಿಯಲ್ಲಿ ಪ್ರಚಲಿತದಲ್ಲಿದ್ದ ವಿವಿಧ ಬಗೆಯ ಲೋಹಗಳು, ಸಮಕಾಲೀನ ಆರ್ಥಿಕ, ಧಾರ್ಮಿಕ, ಸಾಮಾಜಿಕ ವ್ಯವಸ್ಥೆ ಮತ್ತು ಸಂಸ್ಕೃತಿಯನ್ನು ಪರಿಚಯಿಸುವುದು ಕೆಲವು ಅರಸು ಮನೆತನಗಳ ಮತ್ತು ಅರಸರ ಆಳ್ವಿಕೆಯ ಕಾಲಮಾನವನ್ನು ಪರಿಚಯಿಸುವುದು, ನಿರ್ದಿಷ್ಟವಾಗಿ ಗುರುತಿಸಲು

ತುಂಬಾ ಉಪಯುಕ್ತವಾಗಿವೆ. ವಿಜಯನಗರದ ಸಂಗಮ ವಂಶಗಳ ಇತಿಹಾಸಕ್ಕೆ ಸಂಬಂಧಿಸಿದಂತೆ ಅವರ ನಾಣ್ಯಗಳು ಸಾಕಷ್ಟು ದೊರೆತಿದ್ದು ಅವುಗಳಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಪ್ರಮೂಖವಾಗಿವೆ. ಎ. ವಿ. ನರಸಿಂಹಮೂರ್ತಿ, ರವರ *"ಋಜ ಅಠಟ ಔಜ ಏಚಿಡಿಟಚಿಣಚಿಞಾಚಿ"* ಅವರದೇ ಇನ್ನೊಂದು *ಕೃತಿಯಾದ " ಕರ್ನಾಟಕ ನಾಣ್ಯ ಪರಂಪರೆ"* ಗಳಲ್ಲಿ ಪ್ರಕಟಗೊಂಡಿದ್ದು, ಇವುಗಳನ್ನು ಅಧ್ಯಯನಕ್ಕೆ ಉಪಯೋಗಿಸಲಾಗಿದೆ.

**ಸಾಹಿತ್ಯ:**

ಸಾಹಿತ್ಯ ಕೃತಿಗಳು ನಿತ್ಯ ಜೀವನದ ಪ್ರತಿಬಿಂಬವಾಗಿದ್ದು, ಅವು ಆಯಾ ಕಾಲದ ಜನರ ಜೀವನದ ಪ್ರತಿಬಿಂಬವಾಗಿವೆ. ಸಾಹಿತ್ಯದಲ್ಲಿ ದೇಶಿಯ ಮತ್ತು ವಿದೇಶಿಯ ಸಾಹಿತ್ಯ ಎಂಬ ಎರಡು ಭಾಗಗಳಿದ್ದು, ದೇಶಿಯ ಸಾಹಿತ್ಯವು ರಾಜರ ಆಸ್ಥಾನದ ಕವಿಗಳು, ಇತಿಹಾಸಕಾರರು ರಚಿಸಿದಂತಹ ಕೃತಿಗಳು ಮತ್ತು ವಿದೇಶಿಯ ಸಾಹಿತ್ಯವು ಪರದೇಶದಿಂದ ಬಂದ ಪ್ರವಾಸಿಗರು, ತಾವು ಕಣ್ಣಾರೆ ಕಂಡು ಕೇಳಿದ ವಿಷಯಗಳನ್ನು ನಮೂದಿಸಿ ರಚಿಸಿದಂತಹ ಬರಹಗಳನ್ನು ಒಳಗೊಂಡಿರುತ್ತದೆ. ಪ್ರಾಕ್ತನ ಶಾಸ್ತ್ರೀಯ ಆಕರಗಳಿಗೆ ಹೋಲಿಸಿದರೆ ಇತಿಹಾಸ ಪುನರ ರಚನೆಯ ಆಕರಗಳಾಗಿ ಸಾಹಿತ್ಯ ಕೃತಿಗಳು ಶತಪ್ರತಿಶತ ವಿಶ್ವಾಸಾರ್ಹವೆನ್ನಲಾಗುವುದಿಲ್ಲ. ಒಮ್ಮೊಮ್ಮೆ ವ್ಯಕ್ತಿನಿಷ್ಠ ಧೋರಣೆಗಳು, ಧಾರ್ಮಿಕ ಮತ್ತಿತರ ಪೂರ್ವಗ್ರಹಗಳು ಅವುಗಳಲ್ಲಿ ಬೆರೆತಿರುವುದರಿಂದ ವಿಮರ್ಶೆಗೊಳಪಡಿಸದೆ ಅವುಗಳ ವಿವರಗಳನ್ನು ಚಾರಿತ್ರಿಕ ಸತ್ಯವೆಂದು ಇಡಿಯಾಗಿ ಒಪ್ಪಲಾಗುವುದಿಲ್ಲ.

ಈ ಅಧ್ಯಯನದಲ್ಲಿ ಸಮಕಾಲಿನ ಹಾಗೂ ಆಧುನಿಕ ಗ್ರಂಥಗಳ ಸಹಾಯ ಪಡೆದಿದೆಯಾದರೂ, ಈ ವಿಜಯನಗರದ ಸಾಮ್ರಾಜ್ಯಕ್ಕೆ ಸಂಬಂಧಿಸಿದ ವಿದೇಶಿ ಬರವಣಿಗೆಗಳನ್ನು ಸ್ವಲ್ಪ ಹೆಚ್ಚಾಗಿ ಅವಲಂಬಿಸಿದೆ.

**ಅಧ್ಯಯನದ ವಿಧಾನ**:

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮತ್ತು ವಿಷಯ ವಿಶ್ಲೇಣೆಯಲ್ಲಿ ಐತಿಹಾಸಿಕ ವಿಧಿ-ವಿಧಾನಗಳನ್ನು ಅನುಸರಿಸಲಾಗಿದೆ. ವಿಜಯನಗರದ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡುಗೆಗಳ ಕುರಿತು ಈವರೆಗೆ ಪ್ರಕಟವಾಗಿರುವ ಗ್ರಂಥಗಳನ್ನು, ಲೇಖನಗಳನ್ನು ಸಂಗ್ರಹಿಸಿ ಅವುಗಳಲ್ಲಿದ್ದ ವಿಷಯಗಳನ್ನು ಕ್ರೋಢಿಕರಿಸಿ ಅವುಗಳಲ್ಲಿ ಆ ಕಾಲಾವಧಿಯ ಆಕರ ಕೃತಿಗಳ ಪಟ್ಟಿಯನ್ನು ತಯಾರಿಸಲಾಗಿದೆ. ಅನಂತರ ಕ್ಷೇತ್ರ ಕಾರ್ಯದ ಮೂಲಕ ಅವರ ಕಾಲದಲ್ಲಿ ನಿರ್ಮಾಣವಾಗಿರುವಂತಹ ದೇವಾಲಯ, ಕೋಟೆ, ಬಾವಿ, ಮಹದ್ವಾರ ಮೊದಲಾದ ಪುರಾತತ್ವ ಅವಶೇಷಗಳ ಸಂಪೂರ್ಣ ವಿವರವಾದ ದಾಖಲೆಗಳೊಂದಿಗೆ ಛಾಯಾ ಚಿತ್ರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಹೀಗೆ ಮಾಹಿತಿಯನ್ನು ಸಂಗ್ರಹಿಸಲು ಈಗ ಅನುಸರಿಸಿಕೊಂಡು ಬಂದಿರುವ ಕಾರ್ಡಮಾದರಿಯಲ್ಲಿ ಗ್ರಂಥದ ಲೇಖಕ, ಪ್ರಕಾಶಕರು, ಪ್ರಕಟನೆಯ ವರ್ಷ ಮುಂತಾದವುಗಳನ್ನು ಬರೆದುಕೊಂಡು ವಿಷುಯವನ್ನು ಸ'ಂಗ್ರಹಿಸಲಾಗಿದೆ. ಅವುಗಳನ್ನು ಪ್ರತಿಯೊಂದು ಅಧ್ಯಾಯಕ್ಕೆ ಸರಿಹೊಂದುವಂತೆ ವಿಭಾಗಿಸಿಕೊಂಡು ಅಂತರ್ಶಿಸ್ತೀಯ ಅಧ್ಯಯನದ ಮೂಲಕ ಪ್ರಸ್ತುತ ಪ್ರಬಂಧವನ್ನು ಬರೆಯಲಾಗಿದೆ.

**ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ:**

ಈ ಅಧ್ಯಯನವು ವಿಜಯನಗರ ಇತಿಹಾಸಕ್ಕೆ ಸಂಗಮ ವಂಶದ ಸಾಂಸ್ಕೃತಿಕ ಕೊಡಗೆಗಳನ್ನು ಒಳಗೊಂಡಿರುವದರಿಂದ ಅದರ ವ್ಯಾಪ್ತಿಯು ಕ್ರಿ. ಶ. 1336 ರಿಂದ ಕ್ರಿ. ಶ. 1485 ರವರೆಗೆ ಇದೆ. ಆದರೂ ಕೆಲವು ಸಂದರ್ಭಗಳಲ್ಲಿ ಅದರಿಂದ ಹೊರಗಡೆಯು ವ್ಯಾಪಿಸುತ್ತದೆ.

ಅಧ್ಯಯನದ ಅನಕೂಲತೆಗಾಗಿ ಪ್ರಬಂಧವನ್ನು ಆರು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

1. ಒಂದನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಆಕರಗಳು ಮತ್ತು ಅಧ್ಯಯನದ ವಿಧಾನ ಮತ್ತು ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ ಕುರಿತು ವಿವರಿಸಲಾಗಿದೆ.
2. ಎರಡನೆಯ ಅಧ್ಯಾಯದಲ್ಲಿ ವಿಜಯನಗರದ 'ಸಂಗಮ ವಂಶರ ರಾಜಕೀಯ' ಇತಿಹಾಸ ಕುರಿತು ವಿವರಿಸಲಾಗುವುದು.
3. ಮೂರನೆ ಅಧ್ಯಾಯದಲ್ಲಿ 'ಧಾರ್ಮಿಕ ಮತ್ತು ಸಾಮಾಜಿಕ' ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗುವುದು.
4. ನಾಲ್ಕನೆಯ ಅಧ್ಯಾಯದಲ್ಲಿ 'ಶಿಕ್ಷಣ ಮತ್ತು ಸಾಹಿತ್ಯ' ಕುರಿತು ವಿವರಿಸಲಾಗುವುದು.
5. ಐದನೆಯ ಅಧ್ಯಾಯದಲ್ಲಿ ಕಲೆ, ಮತ್ತು ವಾಸ್ತು ಶಿಲ್ಪ ವಿಷಯಗಳನ್ನು ವಿವರಿಸಲಾಗುವುದು.

6. ಆರನೆಯ ಅಧ್ಯಾಯದಲ್ಲಿ ಇಡಿ ಮಹಾಪ್ರಬಂಧದ ಸಮಾರೋಪ ವಿವರಿಸಲಾಗಿದೆ.

**ಅಡಿಟಿಪ್ಪಣಿಗಳು:**

1. ಏ.ಂ. ಖಚಿಣಡಿು, *೦ ಊಚಿಡಿಥಿ ಡಿ ಖಚಿಚಿು ಖಿಟಿಜಚಿ*, ಠಿ. 144
2. *ಅದೇ,* ಪು.145
3. *ಅದೇ,* ಪು.146
4. *ಅದೇ,* ಪು.147
5. *ಅದೇ,* ಪು.148
6. ಖಚಿಥಿಚಿಡಿಣ ಖಚಿಜಚಿಟ, *೦ ಈಡಿಚಿಚಿಣಜಚಿ ಇಟಿಜಿಚಿಜ,* ಠಿ. 32
7. *ಅದೇ,* ಪು.33
8. *ಅದೇ,* ಪು.34
9. *ಅದೇ,* ಪು.35
10. *ಅದೇ,* ಪು.36
11. ಎ.ಎಸ್. ನಂಜುಂಡ ಸ್ವಾಮಿ, *ವಿಜಯನಗರದ ಇತಿಹಾಸ,* ಪು. 36
12. *ಅದೇ,* ಪು.37

13. *ಅದೇ,* ಪು.38

14. *ಗಿಲಿಚಿಥಿಚಿಟಿಚಿಡಿ ಛಿಜಾಛಿಜಾಣಜಾಚಿಡಿಥಿ ಗಿಠಟಿಣಜಿ ನಲ್ಲಿ ಖಿಜಾಡಿಜ ಛಿಠಟಿಛಿಜಾಡಿಟಿಟಿಂ ಡಿಔಡಿ ಡಿಜಿ ಗಿಲಿಚಿಥಿಚಿಟಿಚಿಡಿ ಎಂಬ ಅವರ ಲೇಖನವಿದೆ. ಅಲ್ಲಿ ಇದನ್ನು ಚರ್ಚಿಸಿದ್ದಾರೆ ಮತ್ತು ಈ ವಿಷಯವನ್ನು ಕುರಿತು ಹಿಂದೆ ತಾವು ಬರೆದ ಲೇಖನವನ್ನು ನಿರ್ದೇಶಿಸಿದ್ದಾರೆ.*

15. *ಅದೇ,* ಪು.31

16. *ಅದೇ,* ಪು.32

17. ಡಾ. ಎಚ್. ತಿಪ್ಪೇರುದ್ರಸ್ವಾಮಿ, *ಕರ್ನಾಟಕ ಸಂಸ್ಕೃತಿ ಸಮೀಕ್ಷೆ,* ಪು. 137

18. *ಅದೇ,* ಪು.137

19. *ಅದೇ,* ಪು.138

20. *ಅದೇ,* ಪು.139

21. *ಅದೇ,* ಪು.140

22. ಡಾ. ಎಂ. ವ್ಹಿ. ಕೃಷ್ಣರಾವ ಮತ್ತು ಕೇಶವಭಟ್ಟ, *ಕರ್ನಾಟಕ ಇತಿಹಾಸ ದರ್ಶನ,* ಪು. 241

23. *ಅದೇ,* ಪು.241

24. *ಅದೇ,* ಪು.242

25. ಆರ್.ಡಿ.ಜಿ., *ವಿಜಯನಗರ ಸಾಮ್ರಾಜ್ಯ,* ಪು. 77

26. *ಅದೇ,* ಪು.78

27. ಈ. ಎನ್. ದಿಕ್ಷಿತ ಮತ್ತು ಎಂ. ವ್ಹಿ. ವಿಶ್ವೇಶ್ವರ, *ಸಂಗಮರ ಕಾಲದ ವಿಜಯನಗರ*, ಪು. 44

28. ಅದೇ, ಪು.45

29. ಡಾ. ಎಚ್. ತಿಪ್ಪೇರುದ್ರಸ್ವಾಮಿ, *ಕರ್ನಾಟಕ ಸಂಸ್ಕೃತಿ ಸಮೀಕ್ಷೆ*, ಪು. 144

30. *ಅದೇ,* ಪು.145

31. *ಅದೇ,* ಪು.146

32. *ಅದೇ,* ಪು.147

# ಅಧ್ಯಾಯ 2

## ಸಂಗಮ ವಂಶದ ರಾಜಕೀಯ ಇತಿಹಾಸ

**ವಿಜಯನಗರ ಸ್ಥಾಪನೆ:**

ತುಂಗಭದ್ರಾ ತಟದಲ್ಲಿ ಪ್ರಧಾನ ದುರ್ಗನಗರವನ್ನೂ ಹೊರಪಾಳೆಯವನ್ನಾಗಿ ಆನೆ ಗೊಂದಿಯನ್ನೂ ನಿರ್ಮಿಸಿದ ಆ ಚಿರಸ್ಮರಣೀಯ ಕಾಲ ಯಾವುದು? ಆ ನಿರ್ಮಾಪಕರು ಯಾರು? ಎಂಬ ವಿಚಾರದಲ್ಲಿ ವಿದ್ವಾಂಸರೊಂದಿಗೆ ಒಮ್ಮತವಿಲ್ಲ. ಕ್ರಿ.ಶ. 1336ರಲ್ಲಿ ವಿಜಯನಗರದ ಸ್ಥಾಪನೆ ಯಾಯಿತೆಂಬ ಭಾವನೆ ಸರ್ವತ್ರ ಬೇರೂರಿರುವುದು ನಿಜ; ಆದರೆ ಈ ತೀರ್ಮಾನಕ್ಕೆ ಭಾದಕವಾಗಿರುವ ಹಲವಾರು ಅಂಶಗಳಿವೆ. ಸರ್ವಸಂಗಪರಿತ್ಯಾಗಿಯಾಗಿ ತಪಃಪ್ರಭಾವದಿಂದ ಚಿನ್ನದ ಮಳೆಗರೆದ ಶ್ರೀ ವಿದ್ಯಾರಣ್ಯರೇ ವಿಜಯನಗರ ಧರ್ಮರಾಜ್ಯದ ಸಂಸ್ಥಾಪಕರೆಂಬ ಕಲ್ಪನೆ ಸರ್ವಸಾಮಾನ್ಯವಾಗಿ ನೆಲಸಿದೆ, ಆದರೆ, ಆ ಕಲ್ಪನೆಯನ್ನೂ ನಿರಾಕರಿಸುವ ಹಲವಾರು ಸಂಗತಿಗಳು ಬೆಳಕಿಗೆ ಬಂದಿವೆ. ಈ ಸಮಸ್ಯಗಳ ಸ್ಥೂಲಾವ ಲೋಕನ ಇಲ್ಲಿ ಅಪ್ರಸ್ತುತವಾಗಲಾರದು[1].

ಕ್ರಿ.ಶ. 1327-28ರಲ್ಲಿ ಮಹಮ್ಮದ್ ಬಿನ್ ತುಘಲಕ್‌ನು ಕಂಪಲಿ ರಾಜ್ಯವನ್ನು ಮಣ್ಣುಗೂಡಿಸಿದನಷ್ಟೆ. ಈ ಸಂದರ್ಭದಲ್ಲಿ ವೀರಬಲ್ಲಾಳನು, ಉತ್ತರದ ಮಹಮ್ಮದೀಯ ರಾಜರಿಗೆ ಗೋಚರವಾಗದಂತೆ, ಸ್ವಶಕ್ತಿವರ್ಧನೆಗೆ ತೊಡಗಿರಬೇಕು. ಆ ದುರ್ಗಮ ದುರ್ಗ ಸ್ಥಾಪನೆಗೆ ವೀರಬಲ್ಲಾಳನು ಶೃಂಗೇರಿ ಮಠಾಧೀಶರಾದ ವಿದ್ಯಾತೀರ್ಥರ ಆಶೀರ್ವಾದವನ್ನು ಯಾಚಿಸಿದ್ದರೂ ಇರಬಹುದು. ವಿಜಯನಗರ

ದುರ್ಗಸ್ಥಾಪನೆಯ ಕೆಲಸ ಹೀಗೆ ರಹಸ್ಯವಾಗಿ ನಡೆದು, ಮಧುರೆಯ ಸುಲ್ತಾನನ ದಂಗೆ ಕೊನೆಗೊಂಡೊಡನೆ ಪ್ರಾಕಟ್ಯಕ್ಕೆ ಬಂದಿರಬೇಕು[2]. ವಿಜಯನಗರವು ಕ್ರಿ.ಶ. 1336ರಲ್ಲಿ ಸ್ಥಾಪಿತವಾಯಯಿತೆಂಬ ದಂತ ಕಥೆಗೆ ಅದುವೇ ಕಾರಣವಾಗಿದ್ದರೂ ಇರಬಹುದು. ಈ ಕಥೆಯನ್ನು ಸಮರ್ಥಿಸ ಬಲ್ಲ ಸಮರ್ಪಕ ಚಾರಿತ್ರಿಕಾಧಾರಗಳು ಇದುವರೆಗೆ ದೊರೆತಿಲ್ಲ. ಮಹಮ್ಮದಿಯಾಕ್ರಮಣಗಳನ್ನು ತಡೆಗಟ್ಟುವ ಸಲುವಾಗಿ ಹೊಯ್ಸಳ ಬಲ್ಲಾಳನು ಕ್ರಿ.ಶ. 1335 ರಿಂದ 1342ರ ವರೆಗೆ ನಡೆಸಿದ ಪ್ರಯತ್ನ ಸಫಲವಾಗದೆ ಹೋದ ಮೇಲೆ, ಅವನ ಉತ್ತರಾಧಿಕಾರಿಗಳು ಈ ಹೊಣೆ ಹೊತ್ತಿರಬೇಕು. ಅತಿ ಮಹತ್ತ್ವದ ಉತ್ತರಗಡಿಯ ರಕ್ಷಣೆಯನ್ನು ಹಕ್ಕ ಬುಕ್ಕರೆಂಬ ನಿಷ್ಠಾವಂತ ಸೋದರರು ವಹಿಸಿಕೊಂಡ ಮೇಲೆ, ಸ್ವಧರ್ಮರಕ್ಷಣೆಗೂ ಅವರು ಬದ್ಧಕಂಕಣರಾಗಿದ್ದಿರಬೇಕು. ಕ್ರಿ.ಶ. 1340ರಲ್ಲಿ ಯುವರಾಜ್ಯಾಭಿಕ್ತನಾದ ನಾಲ್ಮಡಿ ಬಲ್ಲಾಳನು ಮೂರನೆಯ ಬಲ್ಲಾಳ ಮರಣಾನಂತರ ಮೂರು ನಾಲ್ಕು ವರ್ಷಗಳೊಳಗೆ ನಾಮಾವಶೇಷನಾದ ಮೇಲೆ ಉತ್ತರ ಗಡಿಯ ಸಂರಕ್ಷಕರಾಗಿ ನಿಂತಿದ್ದ ಈ ಸಹೋದರರೇ ಸಾಮ್ರಾಜ್ಯ ರಕ್ಷಣೆಯ ಅಧ್ವರ್ಯುಗಳಾಗಿ ಇತಿಹಾಸ ಪ್ರಸಿಧ್ಧರಾದರು. ನಾಲ್ಮಡಿ ಬಲ್ಲಾಳನ ಮರಣಕ್ಕೆ ಕಾರಣವೇನು? ಅವನಿಗೆ ಉತ್ತರಾಧಿಕಾರಿಗಳಾಗಬಲ್ಲ ಔರಸಪುತ್ರರಿರಲಿಲ್ಲವೆ? ಅದೊಂದೂ ತಿಳಿಯದು ಹರಿಹರ ಬುಕ್ಕರೆಂಬ ಈ ಸಹೋದರರ ಹೆಸರುಗಳು ಕ್ರಿ.ಶ. 1346ರ ತರುವಾಯ, ಗುಲಬರ್ಗಾ ರಾಜ್ಯ ಸ್ಥಾಪನೆಗೆ ನಿಕಟ ಪೂರ್ವದಲ್ಲಿ, ಎಂದರೆ ಮಹಮ್ಮದ್‌ನ ದಕ್ಷಿಣ ರಾಜ್ಯಗಳು ದಂಗೆಯೇಳುವ ಕಾಲದಲ್ಲಿ, ಪ್ರಸಿದ್ಧಿಗೆ ಬಂದುವು ಆದರೆ ಈ ದಕ್ಷಿಣ ಪ್ರಾಂತಗಳಲ್ಲಿ ಏನೇ ನಡೆದರೂ ಮಹಮ್ಮದ್‌ನು ಉತ್ತರದಿಂದ ಈ ರಾಜ್ಯಗಳ ರಕ್ಷಣೆಗೆ ಬರುವ

ಸ್ಥಿತಿಯಲ್ಲಿರಲಿಲ್ಲ. ಹೀಗೆ ಬಲ್ಲಾಳನ ರಾಜ್ಯ ರಕ್ಷಣೆಯಿಂದ ಹಿಡಿದು, ಕಟ್ಟಕಡೆಗೆ ಮಹಮ್ಮದೀಯರ ದಾಳಿಗಳನ್ನು ಪ್ರಬಲವಾಗಿ ವಿರೋಧಿಸಬಲ್ಲ ಸುಭದ್ರ ಹಿಂದೂ ರಾಜ್ಯ ಸ್ಥಾಪನೆಯಾಗುವ ವರೆಗೆ, ಹಲವಾರು ಘಟನೆಗಳು ಕಾರ್ಯಕಾರಣ ಪೂರ್ವಕವಾಗಿ, ಒಂದರ ಹಿಂದೊಂದಾಗಿ ಸಂಭವಿಸಿರುವುದು ವ್ಯಕ್ತವಾಗಿದೆ. ಈ ನಾನಾ ಪರಿಣಾಮ ರಮಣೀಯ ಘಟನೆಗಳ ಫಲವೇ ವಿಜಯನಗರದ ಸ್ಥಾಪನೆ[3].

ಮಹಮ್ಮದೀಯರ ದಾಳಿಗಳನ್ನು ಶಕ್ತಿಮಿರಿ ಪ್ರತಿಭಟಿಸಿದ ಓರಂಗಲ್ಲಿನ ಕಾಕತೀಯ ಪರ್ರತಾಪರುದ್ರದೇವನು ಕ್ರಿ.ಶ. 1323ರಲ್ಲಿ ಸೋತು ಮೃತನಾದನು. ಆಗ ಅವನ ಆಶ್ರಯದಲ್ಲಿದ್ದ ಹರಿಹರನು ತನ್ನ ಸಹೋದರರೊಡನೆ ವೀರ ಬಲ್ಲಾಳನ ಸಹಾಯರ್ಥವಾಗಿ ಬಂದನಷ್ಟೆ. ಬಂದೊಡನೆ, ಅವರನ್ನು ವೀರಬಲ್ಲಾಳನು ತನ್ನ ರಾಜ್ಯದ ಗಡಿಯುದ್ದಕ್ಕೂ ದೇಶರಕ್ಷಣೆಗಾಗಿ ನಿಯೋಜಿಸಿದನು, ಇವರೆಲ್ಲರೂ ಹೊಯ್ಸಳ ಸಾಮ್ರಾಜ್ಯದ ಮಾಂಡಲಿಕರಾಗಿ ನಿಂತು ತುರುಷ್ಕರ ವಿರುದ್ಧವಾಗಿ ಕತ್ತಿಹಿಡಿದು ನಿಂತರು; ವೈರಿಗಳ ದಾಳಿಗಳನ್ನು ತಡೆದು ವಿಜಯಿಗಳಾದರು. ಈ ಘಟನೆ ಸುಮಾರು ಕ್ರಿ.ಶ. 1346ರಲ್ಲಿ ನಡೆಯಿತು. ವಿಜಯಸ್ಮಾರಕವಾಗಿ ಬಲ್ಲಾಳನ ಆಸ್ಥಾನದಲ್ಲಿ ನಡೆದ ಸಮಾರಂಭದಲ್ಲಿ ಹರಿಹರನು ಕೊಡಿಸಿದ ಒಂದು ದಾನಶಾಸನವು ಅವನನ್ನು "ಶ್ರೀ ಮನ್ಮಹಾಮಂಡಲೇಶ್ವರಂ" ಎಂದು ನಿರ್ದೇಶಿಸಿದೆ. ಇದರಿಂದ ಹರಿಹರನು ಆ ಕಾಲಕ್ಕೂ ಸ್ವತಂತ್ರ ಮಹಾರಾಜನಾಗಿರಲಿಲ್ಲವೆಂದು ಖಚಿತವಾಗುವುದು, ಆದುದರಿಂದ, ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದವನು ಅವನಲ್ಲವೆಂದೂ ಸ್ಫುಟವಾಗುವುದು. ಆದುದರಿಂದ, ಕ್ರಿ.ಶ. 1346ರಲ್ಲಿ ಲಿಖಿತವಾದ ಆ ಶಾಸನದಲ್ಲಿ ವಿಜಯನಗರದ ಉಲ್ಲೇಖವೂ ಇಲ್ಲದ ಕಾರಣ, ಕ್ರಿ.ಶ. 1336ರಲ್ಲಿ

ವಿಜಯನಗರ ಸ್ಥಾಪನೆಯಾಗಿರಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ, ವಿಜಯನಗರವು ತರುವಾಯ ಯಾವ ಪ್ರಾಂತ್ಯವನ್ನು ಒಳಗೊಂಡಿತ್ತೋ ಆ ಪ್ರಾಂತ್ಯಕ್ಕೆ ಕ್ರಿ.ಶ. 1339ರಲ್ಲಿ ಮೂರನೆಯ ವೀರ ಬಲ್ಲಾಳನು ಸ್ವತಂತ್ರಾಧಿಪತಿಯಾಗಿದ್ದನು. ಕ್ರಿ.ಶ. 1340ರಲ್ಲಿ ಅವನು ತನ್ನ ಮಗನಾದ ವೀರ ವಿಜಯ ವಿರೂಪಾಕ್ಷನಿಗೆ ಯೌವರಾಜ್ಯಾಭಿಷೇಕ ಮಾಡಿ ಹಂಪೆಗೆ 'ವಿಜಯನಗರ' ಎಂಬ ಹೆಸರಿಟ್ಟನೆಂದು ಫೇರಿಸ್ತಾ ಹೇಳುತ್ತಾನೆ. ಕ್ರಿ.ಶ. 1342ರಲ್ಲಿ ವೀರಬಲ್ಲಾಳನ ಮರಣಾನಂತರ ವೀರ ವಿರೂಪಾಕ್ಷನು ಹೊಯ್ಸಳ ಚಕ್ರವರ್ತಿಯಾದ ಮೇಲೆ, ಕ್ರಿ.ಶ. 1346ರಲ್ಲಿ ಹೊರಟ ಶೃಂಗೇರಿ ಶಾಸನ ಕಾಲದಲ್ಲಾಗಲಿ, ಕ್ರಿ.ಶ. 1356ರಲ್ಲಾಗಲಿ, ಹರಿಹರಾದಿ ಸಹೋದರರು ಮಾಂಡಲಿಕರಾಗಿದ್ದರೇ ಹೊರತು, ರಾಜ್ಯಸಂಸ್ಥಾಪಕರೆಂದು ಎಲ್ಲೂ ಸ್ತುತರಾಗಿಲ್ಲ[4]. ಕ್ರಿ.ಶ. 1356ರಲ್ಲಿ ಹರಿಹರನು ಕಾಲಾಧೀನನಾದಾಗಲೂ ಅವನು ಮಾಂಡಲಿಕನಾಗಿಯೇ ಇದ್ದನು. ಅವನು ವಿಜಯನಗರದ ಸ್ಥಾಪಕನಾಗಿ, ಚಕ್ರವರ್ತಿಯಾಗಿ ರಾಜ್ಯವಾಳಿದ್ದರೆ, ಅವನ ತಮ್ಮಂದಿರು ಅವನ ಮಾಂಡಲಿಕರಾಗಿಯೇ ಆಳುಬಹುದಾಗಿತ್ತು. ವಸ್ತುಸ್ಥಿತಿಹಾಗಿಲ್ಲ; ಅವರು ಬಲ್ಲಾಳ ರಾಜನ ಮಾಂಡಲಿಕರಾಗಿಯೇ ರಾಜ್ಯರಕ್ಷಣೆ ಮಾಡಿದವರಾಗಿದ್ದರು.

ಕ್ರಿ.ಶ. 1356ರಲ್ಲಿ ಒಂದನೆಯ ಹರಿಹರನು ಮೃತನಾಗುತ್ತಲೂ ಅವನ ಉತ್ತರಾಧಿಕಾರಿಯಾಗಿ ಬಂದವನು ಅವನ ತಮ್ಮನಾದ ಬುಕ್ಕರಾಜ. ಹರಿಹರನು ಪಾಂಡವ ಜ್ಯೇಷ್ಠನಾದ ಯುಧಿಷ್ಠಿರನಂತಿದ್ದನೆಂದೂ, ಬುಕ್ಕನು ಪಾಂಡವ ಮಧ್ಯನಾದ ಅರ್ಜುನನ ಸಮಾನನಾಗಿದ್ದನೆಂದೂ ಕೊಪ್ಪದ 25ನೆಯ ಶಾಸನವು ತಿಳಿಸಿದೆ. "ಬುಕ್ಕಭೂಪತಿಃ ಪ್ರಚಂಡ ವಿಕ್ರಮೋ ಪಾಂಡವಾನಾಮಿವಾರ್ಜುನಃ" ಈ

ಬುಕ್ಕರಾಜನೇ ವಿಜಯನಗರ ಸಾಮ್ರಾಜ್ಯಕ್ಕೆ ಬೀಜಾವಾಪ ಮಾಡಿದವನೆಂದು ಇತ್ತೀಚೆಗಿನ ಅನ್ವೇಷಣೆಗಳಿಂದ ತಿಳಿದುಬಂದಿದೆ. ಅವನ ಕುಲಗುರುವಾಗಿದ್ದ ಕ್ರಿಯಾಶಕ್ತಿ ದೇಶಿಕರು ವಿಜಯನಗರದ ಸ್ಥಾಪನೆಗೆ ಮೂಲಪ್ರೇರಕರಾಗಿದ್ದರು. ಅವರ ಸಹೋದರನಾದ ಆಂಗಿರಸ ಗೋತ್ರದ ಮಾಧವ ಮಂತ್ರಿಯೂ ಬುಕ್ಕನ ನಾನಾ ಯುದ್ಧ ವಿಜಯಗಳಿಗೆ ಮೂಲಕಾರಣನಾಗಿದ್ದನು. ಈ ಮಾಧವನ ಸಹಾಯದಿಂದ ಬುಕ್ಕ ಭೂಪತಿಯು ಸುಮಾರು ಕ್ರಿ.ಶ. 1368ರಲ್ಲಿ ವಿಜಯನಗರವನ್ನು ರಾಜಧಾನಿಯಾಗಿ ಸ್ಥಾಪಿಸಿಕೊಂಡನೆಂದು ಶಾಸನಾಧಾರಗಳಿಂದ ತಿಳಿದುಬರುವುದಾಗಿದೆ. ಇದಕ್ಕಿಂತ ಎಷ್ಟೋ ಪೂರ್ವದಲ್ಲಿ ಬಲ್ಲಾಳ ರಾಜ್ಯವು ಪತನ ಹೊಂದಿದ್ದರೂ, ಬುಕ್ಕನು ವಿಷ್ಣುವರ್ಧನ ಪ್ರತಾಪ ಹೊಯ್ಸಳ ರಾಜನ ಮಾಂಡಲಿಕನಾಗಿದ್ದನೆಂದೂ ಶಾಸನೋಕ್ತವಾಗಿದೆ. ಹೀಗೆ, ಬುಕ್ಕರಾಜನು ವಿಜಯನಗರವನ್ನು ಸ್ಥಾಪಿಸಿದುದೇನೋ ನಿಜ; ವಿಜಯನಗರದ ಸರ್ವಾಂಗ ಸದುನ್ನತಿಗಾಗಿ ತನ್ನ ತನ್ಮನೋಧನಗಳನ್ನು ಧಾರೆಯೆರೆದುದೂ ನಿಜ. ಆದರೆ, ಅದನ್ನು ಸ್ವತಂತ್ರ ಚಕ್ರವರ್ತಿಯಾಗಿ ಆಳಿದವನು ಅವನಲ್ಲ – ಅವನ ಮಗನಾದ ಇಮ್ಮಡಿ ಹರಿಹರ[5].

ಹಾಗಿದ್ದರೆ, ವಿಜಯನಗರದ ಚರಿತ್ರೆಯಲ್ಲಿ ಶ್ರೀ ವಿದ್ಯಾರಣ್ಯರ ಸ್ಥಾನವೇನು, ಪಾತ್ರವೇನು? ಇಮ್ಮಡಿ ಹರಿಹರನು ಕ್ರಿ.ಶ. 1327 ರಿಂದ 1404ರ ವರೆಗೆ ರಾಜ್ಯಭಾರದಲ್ಲಿದ್ದ ನಷ್ಟೆ. ಶೃಂಗೇರಿಯಲ್ಲಿದ್ದ ಭಾರತೀತೀರ್ಥರು ಸುಮಾರು ಕ್ರಿ.ಶ. 1374ರಲ್ಲಿ ದೈವಾಧೀನರಾದರು. ಆ ಕಾಲದಲ್ಲಿ ಶ್ರೀ ವಿದ್ಯಾರಣ್ಯರು ಹಂಪೆಯಲ್ಲಿದ್ದರು. ಇಮ್ಮಡಿ ಹರಿಹರನು ಭಾರತೀತೀರ್ಥರ ಮರಣಾನಂತರ ಶ್ರೀ ವಿದ್ಯಾರಣ್ಯರನ್ನು

ಹಂಪೆಯಿಂದ ಶೃಂಗೇರಿ ಮಠಕ್ಕೆ ಕರೆಸಿ ಮಠವನ್ನು ಕಟ್ಟಿಸಿ, ಆ ಗುರುಪೀಠವನ್ನು ಅವರಿಗೋಪ್ಪಿಸಿದನೆಂದು ಈಗಿನ ಊಹೆ. ಅವರಿಗೆ ಪೂರ್ವದಲ್ಲಿ 'ಕ್ರಿಯಾಶಕ್ತಿ' ಎಂಬ ಹೆಸರಿದ್ದಿತು. ಬುಕ್ಕನಿಂದ ಸ್ಥಾಪಿತವಾದ ವಿಜಯನಗರದ ಸಂಘಟನೆಗೆ ಶ್ರೀ ವಿದ್ಯಾರಣ್ಯರು ಅಪಾರ ಸಹಾಯ ಮಾಡಿದವರಾಗಿದ್ದರು. ಸುಮಾರು ಕ್ರಿ.ಶ. 1380 ರಿಂದ 1386ರ ವರೆಗೂ ಶ್ರೀ ವಿದ್ಯಾರಣ್ಯರು ಶೃಂಗೇರಿ ಮಠಾಧೀಶರಾಗಿದ್ದರು[6].

ಈ ನೂತನ ರಾಜ್ಯಸ್ಥಾಪನೆಯ ಮೂಲೋದ್ದೇಶವೇನು? ದಕ್ಷಿಣ ಭಾರತದಲ್ಲೂ ಸನಾತನ ಧರ್ಮವು ಕುಸಿದು ಬೀಳುವಂತಿದ್ದ ಆ ವಿಷಮಸಂಧಿಯಲ್ಲಿ, ಹಿಂದೂ ಜನರು ಸಂಘಟಿತರಾಗದೆ, ದೇಶಾಭಿಮಾನ ಪ್ರೇರಿತರಾಗದೆ, ಅವರು ವಿಧರ್ಮಿಯರ ಆಕ್ರಮಣವನ್ನು ತಡೆಗಟ್ಟಲು ಶಕ್ತರಾಗುವಂತಿರಲಿಲ್ಲ; ಧಾರ್ಮಿಕ ಸ್ವಾರ್ಥಲಾಲಸೆಯನ್ನು ತ್ಯಜಿಸದೆ, ಅನ್ಯಾಕ್ರಮಣವನ್ನು ನಿಗ್ರಹಿಸುವ ದೃಢಸಂಕಲ್ಪವಿಲ್ಲದೆ, ಅವರು ಸನಾತನ ಧರ್ಮದ ಗತವೈಭವವನ್ನು ಪುನಃ ಪ್ರತ್ಯಕ್ಷೀಕರಿಸಲು ಸಮರ್ಥರಾಗುವಂತಿರಲಿಲ್ಲ. ಮಹಮ್ಮದೀಯರು ದಕ್ಷಿಣದ ಒಂದೊಂದೇ ರಾಜ್ಯವನ್ನು ಕಬಳಿಸುತ್ತಾ ಬಂದಂತೆ, ಹಿಂದೂ ರಾಜರ ಭ್ರಾಂತಿವಿಲಾಸವು ಮಂಜಿನಂತೆ ಹಾರಿಹೋಯಿತು. ಹಿಂದೂ ಧರ್ಮದ ಒಳಗವಲುಗಳಲ್ಲಿ ಎಷ್ಟೇ ಭಿನ್ನತೆಗಳಿದ್ದರೂ, ಆ ಸನಾತನ ಧರ್ಮವು ವಿಚಾರ ಸ್ವಾತಂತ್ರ್ಯ, ಧರ್ಮ ಸ್ವಾತಂತ್ರ್ಯಗಳ ಪ್ರತೀಕ, ಎಂಬ ವಿವೇಕೋದಯ ಸರ್ವರಲ್ಲೂ ಮೂಡಿತು. ಈ ಬಗೆಯ ಜ್ಞಾನೋದಯವಾದೊಡನೆ ಯೋಧಾಗ್ರಣಿಗಳಾದ ಹಿಂದೂ ನರೇಂದ್ರರು ಭಾವಲೋಕದಿಂದ ಭೂಲೋಕಕ್ಕೆ ಅವತರಿಸಿದರು; ವಿಲಾಸಭೋಗವನ್ನು ಬಿಟ್ಟು ಕರ್ಮಯೋಗವನ್ನೇ ಕೈಕೊಂಡರು; ಅದೃಷ್ಟ

ವಾದವನ್ನು ಕೈಬಿಟ್ಟು ಪುರುಷ ಪ್ರಯತ್ನವನ್ನೇ ಬಿಗಿಹಿಡಿದರು. ಧರ್ಮಗ್ಲಾನಿಯನ್ನು ತಡೆಗಟ್ಟುವ ಘನಸಂಕಲ್ಪದಿಂದ ಪ್ರೇರಿತನಾದ ವೀರ ಬಲ್ಲಾಳನು ತನ್ನ ಪ್ರಯತ್ನದ ಮೊದಲ ಹಂತವಾಗಿ, ದಕ್ಷಿಣದಲ್ಲಿ ಮಹಮ್ಮದೀಯ ರಾಜ್ಯಗಳನ್ನು ಸದೆಬಡಿದು ಕಣ್ಣನೂರು ಸೇನಾನಿವೇಶವನ್ನು ನಾಶಮಾಡಿದನು. ಅದಾದ ಮೇಲೆ, ಉತ್ತರದ ಮಹಮ್ಮದೀಯರ ಅಪಾಯವಿಲ್ಲದೆ ಹೋದರೂ, ವಿಂಧ್ಯಾದಕ್ಷಿಣದ ಬಹಮನಿ ಸುಲ್ತಾನರ ದಾಳಿಯ ಸ್ತಂಭನಕ್ಕೆ ತುಂಗಭದ್ರಾ ಕೃಷ್ಣಾನದಿಗಳ ರಕ್ಷಣೆಗೆ ಟೊಂಕಕಟ್ಟಿದವರು ಆ ಪ್ರಸಿದ್ಧ ಸಹೋದರರಾದ ಹರಿಹರ ಬುಕ್ಕರು. ಬಹಮನಿ ಸುಲ್ತಾನನು ದಕ್ಷಿಣ ಗಡಿಯ ಮೇಲೇರಿ ಬಂದಾಗ ಹರಿಹರನೂ ಕಂಪಣನೂ ನೂತನ ರಾಜ್ಯರಕ್ಷಣೆಗೆ ಪ್ರಾಣದಾಸೆ ತೊರೆದು ಕಾದಾಡಿದವರಾಗಿದ್ದರು. ಆಗ ವೀರ ಬಲ್ಲಾಳನ ಹೆಸರು ಗತಕಾಲಕ್ಕೆ ಸೇರಿಹೋಗಿದ್ದಿತು. ಬಲ್ಲಾಳನು ನಿರ್ವಹಿಸಬೇಕಾಗಿದ್ದ ಹೊಣೆಯನ್ನು ಈ ಅಣ್ಣತಮ್ಮಂದಿರು ಯಶಸ್ವಿಯಾಗಿ ನಿರ್ವಹಿಸಿದವರಾಗಿದ್ದರು. ಅಂತಹ ಸಂದುಗಟ್ಟಿನಕಾಲದಲ್ಲಿ ಹೊಯ್ಸಳ ರಾಜನೂ ಅವನ ಅಧಿಕಾರ ವರ್ಗವೂ ಯಾವ ತಕ್ಷಣ ವ್ಯವಸ್ಥೆಗಳನ್ನು ಕೈಗೊಳ್ಳಬಹುದಾಗಿತ್ತೋ ಅದೇ ಬಗೆಯ ಏರ್ಪಾಡುಗಳನ್ನು ಈ ಸಹೋದರರೂ ಅಣಿಗೊಳಿಸಿದವರಾಗಿದ್ದರು[7]. ಹೊಯ್ಸಳ ರಾಜ್ಯವನ್ನು ಪ್ರಳಯದಿಂದ ಪಾರುಮಾಡಿದ ಈ ವೀರಯೋಧರು ಮನೆಮಾರಿಲ್ಲದೆ, ಶರಣಾರ್ಥಿಗಳಾಗಿ, ಬಂದವರೆಂದು ನಂಬುವುದು ಕಷ್ಟವೇ ಸರಿ. ಕ್ರಿ.ಶ. ೧೩೫೦ರಲ್ಲಿ, ಈ ನೂತನ ರಾಜ್ಯವು ಅಭಿವೃದ್ಧಿ ತೊಡಗಿದ ಕಾಲದಲ್ಲಿ ಹೊಯಿಸಳ ರಾಜ್ಯವು ಹಲವಾರು ಮಂಡಲಗಳಾಗಿ ವಿಂಗಡಣೆ ಹೊಂದಿ, ಒಂದೊಂದು ಮಂಡಲಕ್ಕೂ ಒಬ್ಬೊಬ್ಬರಂತೆ ಆ ನಿಷ್ಠಾವಂತ ಸೋದರರು ನಿಯುಕ್ತರಾಗಿದ್ದರು. ಪಶ್ಚಿಮ

ಕರಾವಳಿಯಿಂದ ಬಂಗಾಳ ಕೊಲ್ಲಿಯ ವರೆಗಿನ ಸಮಗ್ರ ಸೀಮಾ ಪ್ರದೇಶವೂ ಈ ಸಹೋದರರ ರಕ್ಷಣಾಧಿಕಾರಕ್ಕೆ ಒಳಪಟ್ಟಿದ್ದಿತು. ಪೂರ್ವಮಂಡಲವಾದ ಉದಯಗಿರಿ ಮಹಾರಾಜ್ಯವು ಎರಡನೆಯವನಾದ ಕಂಪನ ಅಧಿಕಾರದದಲ್ಲಿದ್ದಿತು. ಹಳೇಬೀಡು, ಪೇನುಕೊಂಡೆ ದುರ್ಗಗಳಿದ್ದ ಮಧ್ಯಭಾಗವನ್ನು ಪ್ರಸಿದ್ಧ ಬುಕ್ಕನು ಕಾಪಿಟ್ಟಿದ್ದನು[8]. ಸಮುದ್ರಾಂತವಾದ ಪಶ್ಚಿಮ ಭಾಗವು ಹರಿಹರನ ಆಳ್ವಿಕೆಯಲ್ಲಿದ್ದಿತು. ಈ ಸೀಮಾ ಪ್ರದೇಶಕ್ಕೆ ಬೆಂಗಾವಲಾಗಿ ಪ್ರಬಲವಾಗಿತ್ತು.

ಮೈಸೂರಿನ ಶಿವಮೊಗ್ಗ ಜಿಲ್ಲೆಯ ಅರಗವು ಅದರ ಮುಖ್ಯ ಪಟ್ಟಣವಾಗಿದ್ದಿತು. ಇದು ಇನ್ನೊಬ್ಬ ಸೋದರನ ಆಡಳಿತಕ್ಕೊಳಪಟ್ಟಿದ್ದಿತು. ಹರಿಹರ, ಬುಕ್ಕ, ಕಂಪ, ಮಾರಪ್ಪ, ಮುದಪ್ಪ, ಈ ಐವರು ಸಂಗಮ ವಂಶೀಯ ಸೋದರರೇ ವಿಜಯನಗರ ಮಹಾರಾಜ್ಯದ ಸ್ಥಾಪನೆಗೆ ತಳಹದಿ ಹಾಕಿ, ಮಹಮ್ಮದೀಯರ ಆಕ್ರಮಣಗಳನ್ನು ತಡೆಗಟ್ಟಿ, ಹಿಂದೂ ಧರ್ಮ ನಿಸ್ತಾರಕರೆಂದು ಖ್ಯಾತರಾದ ಮಹಾನುಭಾವರು[9].

ಹೀಗೆ ಸ್ಥಾಪಿತವಾದ ನೂತನ ಹಿಂದೂ ರಾಜ್ಯವು ಅನುಕ್ರಮವಾಗಿ ಸಂಗಮ ವಂಶ, ಸಾಳುವ ವಂಶ, ತುಳುವ ವಂಶ, ಅರವೀಡು ವಂಶ – ಎಂಬ ನಾಲ್ಕು ರಾಜವಂಶಗಳ ಪ್ರಭುತ್ವಕ್ಕೊಳಪಟ್ಟಿತು. ಅವುಗಳಲ್ಲಿ ಸಂಗಮನ ಮಕ್ಕಳಾದ ಹರಿಹರ ಬುಕ್ಕರಿಂದ ನಿರ್ಮಿಸಿದ ಸಂಗಮ ವಂಶವೇ ಮೊದಲನೆಯದು.

**1ನೇಯ ಹರಿಹರ:**

ವೀರ ಬಲ್ಲಾಳನ ಮಾಂಡಲಿಕನಾಗಿ ರಾಜ್ಯಸ್ಥಾಪನೆಯ ಪರಿಕರ ಸಾಮಗ್ರಿಗಳನ್ನು ಒದಗಿಸಿದ ಒಂದನೆಯ ಹರಿಹರನು ರಾಜ್ಯದ ಆಡಳಿತವನ್ನು

ಸುವ್ಯವಸ್ಥೆಗೆ ತರಲು ಅಪಾರವಾಗಿ ಶ್ರಮಿಸಿದವನಾಗಿದ್ದನು. ಅವನ ರಾಜ್ಯವ್ಯವಸ್ಥೆ ಕಾಕತೀಯ ರಾಜ್ಯ ಪದ್ಧತಿಯ ಪ್ರತಿರೂಪವಾಗಿದ್ದಂತೆ ಭಾಸವಾಗುವುದು. ಸಾಯಣ ಮಾಧವ ಅವನ ಮಂತ್ರಿಯಾಗಿದಂತೆ ತೋರುವುದು. ಹರಿಹರನು ರಾಜ್ಯವನ್ನು "ಸ್ಥಳ"ಗಳಾಗಿಯೂ "ಮಂಡಲ"ಗಳಾಗಿಯೂ ವಿಂಗಡಿಸಿ, ರಾಜಕುಟುಂಬದವರನ್ನು ಮಂಡಲಾಧಿಪತಿಗಳಾಗಿ ನಿಯಮಿಸಿದನು; ಅದುವರೆಗೂ ಅಕ್ಕಸಾಲಿಗರನ್ನು ಶ್ಯಾನುಭೋಗನ್ನಾಗಿ ನೇಮಿಸುತ್ತಿದ್ದ ಪದ್ಧತಿಯನ್ನು ನಿಲ್ಲಿಸಿ, ಬ್ರಾಹ್ಮಣರನ್ನು ಆ ಸ್ಥಾನಕ್ಕೆ ನೇಮಿಸಿದನು; ದತ್ತಮಂಡಲ ಜಿಲ್ಲೆಯಲ್ಲಿ ಹಲವಾರು ಭೂಮಿಗಳನ್ನು ಕೃಷಿ ಮಾಡಿಸಿದನು. ಕ್ರಿ.ಶ. 1346ರಲ್ಲಿ ತಮ್ಮನಾದ ಬುಕ್ಕನನ್ನು ಸಹ ರಾಜನಾಗಿ ನೇಮಿಸಿಕೊಂಡುದಲ್ಲದೆ, ತನ್ನ ಉತ್ತರಾಧಿಕಾರಿಯೆಂದೂ ಘೋಷಿಸಿದನು. ಒಂದನೆಯ ಹರಿಹರನು ಸುಮಾರು ಕ್ರಿ.ಶ. 1346ರ ಅಂತ್ಯದಲ್ಲಿ ಮೃತನಾಗಿರಬೇಕು[10].

**ಬುಕ್ಕ:**

ಸುಮಾರು ಕ್ರಿ.ಶ. 1346ರಲ್ಲಿ ಪಟ್ಟಕ್ಕೆ ಬಂದ ಒಂದನೆಯ ಬುಕ್ಕನ ರಾಜ್ಯಭಾರವು ಇಪ್ಪತ್ತು ವರ್ಷ ಕಾಲ ನಡೆಯಿತು. ಸಂಗಮ ವಂಶದರಸರಲ್ಲಿ ಬುಕ್ಕನಷ್ಟು ವಿಖ್ಯಾತಿಗೆ ಬಂದವರು ಬೇರಾರೂ ಇಲ್ಲ. ಬುಕ್ಕನ ಕೀರ್ತಿ ವಿದೇಶಗಳಿಗೆ ಹಬ್ಬಿದ್ದಿತು. ಚೀನಾ ದೇಶದ ಮಿಂಗ್ ರಾಜನ ಆಸ್ಥಾನಕ್ಕೂ ಬುಕ್ಕನು ಕ್ರಿ.ಶ. 1374ರಲ್ಲಿ ಒಂದು ರಾಜನಿಯೋಗವನ್ನು ಕಳುಹಿಸಿದನೆಂದು ತಿಳಿದುಬಂದಿದೆ. ಅವನ ಕಾಲದಲ್ಲಿ ವಿಜಯನಗರಕ್ಕೂ ಬಹಮನಿ ರಾಜ್ಯಕ್ಕೂ ನಡುವೆ ನಿರಂತರವಾಗಿ ಯುದ್ಧ

ನಡೆಯುತ್ತಲೇ ಇದ್ದಿತು. ಶಾಂತಿಪ್ರಿಯನಾದ ಎರಡನೆಯ ಮಹಮ್ಮದನು ಕ್ರಿ.ಶ. 1378ರಲ್ಲಿ ಕಲಬುರ್ಗಿಯಲ್ಲಿ ಪಟ್ಟಕ್ಕೆ ಬರುವವರೆಗೂ ಈ ಯುದ್ಧಗಳು ನಿಲುಗಡೆಗೆ ಬಂದಿರಲಿಲ್ಲ[11].

ಬುಕ್ಕನ ರಾಜ್ಯಭಾರ ಕಾಲದ ವಿಶೇಷ ಘಟನೆಯೆಂದರೆ ಮಧುರೆ ಸುಲ್ತಾನನ ಪದೋಚ್ಚಾಟನೆ. ಬುಕ್ಕನ ಮಗನಾದ ಇಮ್ಮಡಿ ಕಂಪನೇ ಇದನ್ನು ಸಾಧಿಸಿದ ವೀರಪುರಷ. ಕಂಪಣನು ತಂದೆಯ ರಾಜ್ಯಭಾರದ ಪ್ರಾರಂಭದಿಂದಲೂ ವಿಜಯನಗರ ರಾಜ್ಯದ ದಕ್ಷಿಣ ಭಾಗದ ಉಪರಾಜನಾಗಿದ್ದನು. ಗೋಪಣ, ಸಾಳುವ ಮಂಗು, ಮೊದಲಾದ ಸಮರ್ಥ ದಂಡಾಧಿಕಾರಿಗಳು ಕಂಪಣನ ಬಲಗೈ ಎಡಗೈಗಳಾಗಿದ್ದರು. ಉತ್ತರ ಆರ್ಕಾಡು ಮತ್ತು ದಕ್ಷಿಣ ಆರ್ಕಾಡು ಪ್ರಾಂತಗಳ ಶಾಂಬವರಾಯರನ್ನು ಮೊದಲು ಜಯಿಸಿದ ಕಂಪಣನು, ಮತ್ತೆ ಅವರ ನೆರವಿನಿಂದಲೇ ಮಧುರೆಯ ಸುಲ್ತಾನನ್ನು ಇದಿರಿಸಲು ಸನ್ನದ್ಧನಾದನು. ಈ ದಂಡಾಚರಣೆಯ ಪೂರ್ಣ ವಿವರಗಳು ಇನ್ನೂ ದೊರೆತಿಲ್ಲ. ಅವನ ವಲ್ಲಭೆಯಾದ ಗಂಗಾದೇವಿಯು ಸುಪ್ರಸಿದ್ಧ ಸಂಸ್ಕೃತ ಕವಯಿತ್ರಿ. ಆಕೆ ರಚಿಸಿದ "ಮಧುರಾ ವಿಜಯಮ್" ಎಂಬ ಕಾವ್ಯದಲ್ಲಿ ಕಂಪಣನ ಸಾಹಸ ಕಾರ್ಯಗಳು ಮನಸೆಳೆಯುವಂತೆ ವರ್ಣಿತವಾಗಿವೆ. ಈ ಕದನ ಮುಗಿದ ಮೇಲೆ ಬಹಮನಿ ರಾಜ್ಯದೊಡನೆ ಯುದ್ಧಾರಂಭವಾಗಿ ಜಯಾಪಜಯಗಳು ಪರ್ಯಾಯವಾಗಿ ಬರತೊಡಗಿದುವು[12].

ಬುಕ್ಕನು ಹರಿಹರನ ಮೇಲ್ಪಂಕ್ತಿಲ್ಲೇ ನಡೆದು ರಾಜ್ಯ ಸಂಘಟನೆಯ ಕಾರ್ಯವನ್ನು ಮುಂದುವರಿಸಿದನು. ಅವನ ಕಾಲದಲ್ಲಿ ಸಾಮ್ರಾಜ್ಯವು ಅನೇಕ

‘ರಾಜ್ಯಗಳಾಗಿ’ ವಿಂಗಡಣೆ ಹೊಂದಿದುವು. ರಾಜ ವಂಶಿಯರೂ ಸಮರ್ಥ ದಳಪತಿಗಳೂ ಈ ‘ರಾಜ್ಯಗಳ’ ಪ್ರಶಾಸಕರಾಗಿದ್ದರು. ನೆಲ್ಲೂರು ಮತ್ತು ಕಡಪಾ ಪ್ರಾಂತಗಳಿಗೆ ಉದಯಗಿರಿ ರಾಜ್ಯವೆಂಬ ಹೆಸರಾಗಿದ್ದಿತು. ಬಳ್ಳಾರಿ, ಅನಂತಪುರ ಮತ್ತು ಉತ್ತರ ಮೈಸೂರು ಪ್ರಾಂತಗಳು ಪೆನುಗೊಂಡೆ ರಾಜ್ಯದಲ್ಲಿ ಅಡಕವಾಗಿದ್ದುವು. ಮೈಸೂರಿನ ಬೇರೆ ಕೆಲವು ಭಾಗಗಳು ಸೇಲಂ, ದಕ್ಷಿಣ ಆರ್ಕಾಡು ಪ್ರಾಂತಗಳೂ ಮುಲವಾಯಿ ರಾಜ್ಯವಾಗಿ ರೂಪಿತವಾಗಿದ್ದುವು. ಬನವಾಸಿ, ಚಂದ್ರಗುತ್ತಿ ಮತ್ತು ಗೋವಾ ಪ್ರಾಂತಗಳಿಗೆ ಅರಗ ಇಲ್ಲವೆ ಮಲೆಹ ರಾಜ್ಯ ಎಂಬ ನಾಮಧೇಯವಾಗಿದ್ದಿತು. ಬಾರ್ಕೂರು ಮಂಗಳೂರು ಪ್ರಾಂತಗಳಿಗೆ ತುಳು ರಾಜ್ಯವೆಂಬ ಹೆಸರಿನ ಮುಂತಾದ ರಾಜ್ಯಗಳಿದ್ದುವು[13].

ವೀರಕಂಪಣರಾಯನ ಯುದ್ಧ ಕಾರ್ಯಾಚರಣೆಯೂ, ಬುಕ್ಕನ ರಾಜ್ಯಭಾರಾವಧಿಯೂ ಒಟ್ಟೊಟ್ಟಿಗೇ ಮುಕ್ತಾಯಕ್ಕೆ ಬಂದವು. ಈ ಕೊನೆಯ ಹಂತದಲ್ಲಿ ಕಂಪಣನು ಹಿಂದೂ ರಾಜ್ಯದ ಪುನಃಸ್ಥಾಪನೆಯ ಸೂಚಕವಾಗಿ ಎರಡು ಘನಕಾರ್ಯಗಳನ್ನು ನಿರ್ವಹಿಸಿದನು; ಮೊದಲನೆಯದು, ಶ್ರೀರಂಗ ದೇವಾಲಯದ ಪುನಃ ಪ್ರತಿಷ್ಠಾಪನೆ ಇನ್ನೊಂದು ನೆಲಸಮವಾಗಿದ್ದ ಮಧುರೆ ದೇವಾಲಯದ ಜೀರ್ಣೋದ್ಧಾರ. ಇವೆರಡೂ ಧರ್ಮಕಾರ್ಯಗಳು ಹಿಂದೂ ಧರ್ಮದ ಪುನರುತ್ಥಾನದ – ಲೋಕವಿಧ್ವಂಸಕ ಇಸ್ಲಾಂ ಧರ್ಮವಿಸ್ತಾರಣದ ಸ್ತಂಭನದ – ಮುಖ್ಯ ಪ್ರಸ್ಥಾನಗಳಾಗಿದ್ದುವು. ಸುಮಾರು 17ನೆಯ ಶತಮಾನದಲ್ಲಿ ಹೊರಟ ಮಧುರೆ ದೇವಾಲಯದ ಶಾಸನವೊಂದರಲ್ಲಿ ಈ ಧರ್ಮೋದ್ಧಾರಕನಾದ ಕಂಪಣನು ಹೊಯ್ಸಳ ರಾಜನ ‘ದೌವಾರಿಕ’ನೆಂದು ಸ್ತುತನಾಗಿದ್ದಾನೆ.

ವಿಜಯನಗರ ರಾಜ್ಯದ ಸಂಘಟನೆಗೆ ಅಪಾರವಾಗಿ ಶ್ರಮಿಸಿದ ಒಂದನೆಯ ಬುಕ್ಕನು ಕ್ರಿ.ಶ. 1377ರಲ್ಲಿ ಮೃತನಾದನು.

**ಇಮ್ಮಡಿ ಹರಿಹರ (ಕ್ರಿ.ಶ. 1378 – 1404):**

ಒಂದನೆಯ ಬುಕ್ಕನ ತರುವಾಯ ಅವನ ಮಗನಾದ ಇಮ್ಮಡಿ ಹರಿಹರನು ಸುಮಾರು ಕ್ರಿ.ಶ. 1378ರಲ್ಲಿ ಪಟ್ಟಕ್ಕೆ ಬಂದನು. ಇಮ್ಮಡಿ ಹರಿಹರನೇ ವಿಜಯನಗರ ಸಾಮ್ರಾಜ್ಯದ ಪ್ರಥಮ ಸಮ್ರಾಟನೆಂದು ಇತ್ತೀಚೆಗೆ ಅನ್ವೇಷಣೆಗಳಿಂದ ವ್ಯಕ್ತವಾಗಿದೆ. ಇಮ್ಮಡಿ ಹರಿಹರನಿಗೆ ಸೋದರರೂ ಕೆಲವರಿದ್ದರು.

ಇಮ್ಮಡಿ ಹರಿಹರನ ಕಾಲದಲ್ಲಿ ವಿದ್ಯಾರಣ್ಯರು ಜೀವಂತರಾಗಿದ್ದರೆಂದು ಭಾವಿಸಲು ಸಾಕಷ್ಟು ಅಧಾರವಿದೆ. ಆದರೆ, ಈ ವಿದ್ಯಾರಣ್ಯರೆಂದರೆ ಯಾರು? ಸಾಯಣನ ಸೋದರನಾದ ಭಾರದ್ವಾಜ ಗೋತ್ರದ ಮಾಧವನೋ ಅಥವಾ ಅನ್ಯವಂಶೀಯನಾದ ಅಂಗಿರಸ ಗೋತ್ರದ ಮಾಧವ ಮಂತ್ರಿಯೋ? ಸಕುಟುಂಬನಾಗಿದ್ದುದರಿಂದ ಅವನೇ ವಿದ್ಯಾರಣ್ಯರಾಗಲು ಶಕ್ಯವಿದ್ದಿತೆ? ಎಂದು ಮೊದಲಾದ ತರ್ಕವಿತರ್ಕಗಳೆದ್ದಿವೆ. ಇದರ ಜತೆಗೆ ನಾಥ ಪಂಥಕ್ಕೆ ಸೇರಿದ ಅಬಾಲ ಬ್ರಹ್ಮಚಾರಿಯಾದ ಕ್ರಿಯಾಶಕ್ತಿಯೇ ವಿದ್ಯಾರಣ್ಯರಾಗಿರಬಹುದೆಂದು ಉಹಿಸಲು ಬಲವತ್ತರವಾದ ಶಾಸನಧಾರಗಳಿವೆ.

ಒಂದನೆಯ ಹರಿಹರನಿಗೆ ಮಕ್ಕಳಿದ್ದರೇ ಇಲ್ಲವೇ, ತಿಳಿಯದು. ಇಮ್ಮಡಿ ಹರಿಹರನು ಮುಂದೆ ತನ್ನ ದೂರ ಬಾಂಧವರಿಂದ ಸಾಮ್ರಾಜ್ಯಕ್ಕೆ ಸಂಭವಿಅಬಹುದಾದ ಅಪಾಯವನ್ನು ನಿವಾರಿಸುವ ಉದ್ದೇಶದಿಂದ ತನ್ನ ಜ್ಞಾತಿಗಳ

ಬದಲಾಗಿ ತನ್ನ ಮಕ್ಕಳನ್ನೇ ಮಂಡಲಾಧಿಪತಿಗಳಾಗಿ ನಿಯೋಜಿಸಿದ್ದನು. ಇದರಿಂದ ಇಮ್ಮಡಿ ಹರಿಹರನ ಮಗನಾದ ಒಂದನೆಯ ದೇವರಾಯನು ಉದಯಗಿರಿ ರಾಜ್ಯದ ಮಂಡಲಾಧಿಪತಿಯಾಗಿದ್ದನು[14].

ಇಮ್ಮಡಿ ಹರಿಹರನ ಪಟ್ಟಾರೋಹಣವು ಶಾಂತವಾಗಿಯೇ ನಡೆಯಿತು. ಆದುದರಿಂದ, ಪಟ್ಟಕ್ಕೇರಿದೊಡನೆ ಅವನು ಯುದ್ಧನಿರತನಾಗಬೇಕಾದ ಪ್ರಮೇಯವೇನೂ ಇಲ್ಲದೆ, ನೂತನ ವಿಜಯನಗರ ರಾಜ್ಯದ ಸಂಘಟನೆಗೆ ತನ್ನ ಸರ್ವಸ್ವವನ್ನೂ ಧಾರೆಯೆರೆದು ಆ ನೂತನ ಸಾಮ್ರಾಜ್ಯದ ಪ್ರಥಮ ಚಕ್ರವರ್ತಿಯೆಂದು ಪ್ರಕಟವಾದನು. ಆದರೆ ಒಳಗೊಳಗೇ ಪ್ರತ್ಯಂತ ರಾಜರು ಕತ್ತಿಮಸೆಯಲು ಪ್ರಾರಂಭಿಸಿದರು. ಬಹಮನಿ ರಾಜ್ಯವು ವಿಜಯನಗರಕ್ಕೆ ಸದಾ ಬದ್ಧ ವಿರೋಧಿಯಾಗಿದ್ದಿತು. ಇಮ್ಮಡಿ ಹರಿಹರನ ಮಗನಾದ ಇಮ್ಮಡಿ ಬುಕ್ಕನು ಕ್ರಿ.ಶ. 1390ರಲ್ಲಿ ಓರುಂಗಲ್ಲು ರಾಜ್ಯದ ಮೇಲೆ ಎರಡು ಸಲ ಅಭಿಯೋಗ ಕೈಕೊಂಡು, ಎರಡು ಸಲವೂ ಪರಾಜಿತನಾದನು ಆದರೆ ಕ್ರಿ.ಶ. 1397ರಲ್ಲಂತೂ ಪನಗಲ್ ಪ್ರಾಂತವು ಇಮ್ಮಡಿ ಹರಿಹರನ ಕೈವಶವಾಯಿತು. ಮುಂದಿನ ಕಾರ್ಯಾಚರಣೆಗಳಿಗೆ ಪನಗಲ್ ಪ್ರಾಂತವು ಮುಖ್ಯ ಕೇಂದ್ರವಾಗಿದ್ದುದರಿಂದ, ಪನಗಲ್ ವಿಜಯವು ಮಹತ್ತ್ವಪೂರ್ಣವಾಗಿದ್ದಿತು. ಆದರೆ ಮುಂದೆ ಕೆಲಕಾಲದಲ್ಲಿ ಅದೂ ನಷ್ಟವಾಯಿತು[15].

ಹೀಗಿದ್ದರೂ ಏನು? ಅಲ್ಲಿ ಅಪಜಯವಾದರೂ ಪಶ್ಚಿಮ ಕರಾವಳಿಯಲ್ಲಿ ಮುಸ್ಲಿಂರ ವಶದಲ್ಲಿದ್ದ ಗೋವೆ, ಚಾಗೋಲಿ, ದಾಬೋಲಿ ಮೊದಲಾದ ರೇವುಪಟ್ಟಣ ಪ್ರಾಂತಗಳು ಇಮ್ಮಡಿ ಹರಿಹರನ ಕರಗತವಾದುವು. ಕೃಷ್ಣಾನದಿ ಕೊಂಚಕಾಲ

ವಿಜಯನಗರದ ಉತ್ತರ ಸೀಮೆಯಾಯಿತು. ಕೊಂಡವೀಡು ರೆಡ್ಡಿಗಳ ಪ್ರಭುತ್ವಕ್ಕೊಳಪಟ್ಟಿದ್ದ ಕರ್ನೂಲು, ನೆಲ್ಲೂರು, ಗುಂಟೂರು ಪ್ರಾಂತಗಳು ವಿಜಯನಗರಕ್ಕೆ ಸೇರಿದುವು. ಇಮ್ಮಡಿ ಹರಿಹರನ ಕುಮಾರ ವಿರೂಪಾಕ್ಷನು ದಕ್ಷಿಣದಲ್ಲಿ ಸಿಂಹಳದ ವರೆಗೂ ಒತ್ತರಿಸಿಕೊಂಡು ಹೋಗಿ ಅಲ್ಲಿಯೂ ವಿಜಯನಗರದ ವಿಜಯದುಂಧುಬಿ ಮೊಳಗಿಸಿದನು.

ವಿಜಯನಗರಕ್ಕೂ ಬಹಮನಿ ರಾಜ್ಯಕ್ಕೂ ಕ್ರಿ.ಶ. 1398 – 99ರಲ್ಲಿ ಇನ್ನೊಂದು ಭೀಕರ ಸಂಗ್ರಾಮ ಸಂಭವಿಸಿತು. ಈ ಯುದ್ಧದಲ್ಲಿ ಬಹಮನಿಯ ಫಿರೋಜ ಶಾಹ ಸುಲ್ತಾನನು ಇಮ್ಮಡಿ ಹರಿಹರನ ಸೇನೆಗಳನ್ನು ಕೃಷ್ಣಾನದೀ ತಟದಿಂದ ರಾಜಧಾನಿಯವರೆಗೂ ಬೆನ್ನಟ್ಟಿದನು. ಮುಸ್ಲಿಂ ಸೇನೆಗಳು ಜನರನ್ನು ಕಗ್ಗೊಲೆ ಮಾಡಿದವು. ಕೊನೆಗಂತೂ ಹರಿಹರನು ಸಂಧಿಗೊಪ್ಪಲೇಬೇಕಾಯಿತು. ಸಂಧಿ ನಿಯಮಗಳಂತೆ ಇಕ್ಕಡೆಯ ರಾಜ್ಯ ಸೀಮೆಗಳೂ ಯುದ್ಧ ಪೂರ್ವದಲ್ಲದ್ದಂತೆಯೇ ಇರುವುದಾಗಿಯೂ ಇಮ್ಮಡಿ ಹರಿಹರನು ಮಹಮ್ಮದೀಯರಿಗೆ ವಾರ್ಷಿಕವಾಗಿ ಕಪ್ಪಸಲ್ಲಿಸತಕ್ಕುದೆಂದೂ ನಿರ್ಧಾರವಾಯಿತು. ಇದೇ ಕಾಲದಲ್ಲಿ ದಕ್ಷಿಣಾ ಪಥದ ಬಹುಭಾಗದಲ್ಲಿ ಸಂಭವಿಸಿದುರಿಂದ, ಜನರು ಅಸಹ್ಯ ಸಂಕಟಯಾತನೆಗಳಿಗೆ ಗುರಿಯಾದರು. ಎರಡು ವರ್ಷಗಳ ತರುವಾಯ ಮಾಳವ ಹಾಗೂ ಘೂರ್ಜರ ರಾಜ್ಯಗಳ ಸುಲ್ತಾನರುಗಳು ಹರಿಹರನ ಮಿತ್ರರಾದರು. ಒಡನೆಯೇ ಅವನು ಫಿರೋಜ ಶಾಹ ಸುಲ್ತಾನನಿಗೆ ವರ್ಷಂಪ್ರತಿ ಸಲ್ಲಿಸಬೇಕಾದ ಕಪ್ಪವನ್ನು ನಿಲ್ಲಿಸಿಬಿಟ್ಟನು. ಇಮ್ಮಡಿ ಹರಿಹರನು ಕ್ರಿ.ಶ. 1404ರಲ್ಲಿ ಮೃತನಾದನು. ಒಡನೆಯೇ ರಾಜ್ಯಾಧಿಕಾರಕ್ಕಾಗಿ ಅವನ ಮಕ್ಕಳೊಳಗೆ ಯಾದವೀ ಕಲಹ

ಪ್ರಾರಂಭವಾಯಿತು. ಈ ಕಲಹದ ಫಲವಾಗಿ ಹಿರಿಯ ಮಗನಾದ ವಿರೂಪಾಕ್ಷನು ತಮ್ಮಂದಿರನ್ನು ಮೂಲೆಗೆ ತಳ್ಳಿ ಪಟ್ಟವೇರಿದನು. ಆದರೆ, ಅವನ ಆಳ್ವಿಕೆ ಹೆಚ್ಚುಕಾಲ ಬಾಳದಾಯಿತು. ಬಲುಬೇಗನೆ, ಎಂದರೆ ಕ್ರಿ.ಶ. 1405ರಲ್ಲಿ, ಅವನ ತಮ್ಮನಾದ ಇಮ್ಮಡಿ ಬುಕ್ಕನು ಅಣ್ಣನನ್ನು ಮೂಲೆಗೆ ತಳ್ಳಿ, ಪಟ್ಟವನ್ನು ಸ್ವಾಧೀನ ಪಡಿಸಿಕೊಂಡನು. ಆದರೆ ಅವನ ರಾಜ್ಯಭಾರಕಾಲವೂ ಎರಡು ವರ್ಷಗಳೊಳಗೆ ಅಂತ್ಯವಾಯಿತು. ಕ್ರಿ.ಶ. 1406ನೆಯ ಇಸವಿ ನವೆಂಬರು 5 ರಂದು ಅವನ ತಮ್ಮನಾದ ಒಂದನೆಯ ದೇವರಾಯನು ಚಕ್ರವರ್ತಿಯಾಗಿ ಬಂದನು[16].

**ಒಂದನೆಯ ದೇವರಾಯ (ಕ್ರಿ.ಶ. 1404 – 1422):**

ಒಂದನೆಯ ದೇವರಾಯನು ಪಟ್ಟಕ್ಕೆ ಬಂದೊಡನೆ ಬಹಮನಿಯ ಫಿರೋಜ ಶಾಹ ಸುಲ್ತಾನನೊಡನೆ ಯುದ್ಧ ಸಂಭವಿಸಿತು. ಸ್ತ್ರೀ ಸಂಬಂಧವಾಗಿ ಈ ಯುದ್ಧ ನಡೆಯಿತೆಂದು ಫೆರಿಸ್ತಾ ಹೇಳುತ್ತಾನೆ. ಬಹಮನಿ ಸುಲ್ತಾನನ ಧರ್ಮಯುದ್ಧಾಸಕ್ತಿಯೇ ಈ ಯುದ್ಧಕ್ಕೆ ಕಾರಣವೆಂದು ಇತರರ ಹೇಳಿಕೆ. ಕಾರಣವೇನೇ ಇದ್ದರೂ, ಘೋರಸಮರ ನಡೆದುದಂತೂ ನಿಜ. ಮೊದಮೊದಲು ವಿಜಯನಗರ ಸೈನ್ಯಗಳು ಗೆಲ್ಲುವ ಲಕ್ಷಣ ಕಂಡುಬಂದರೂ ಕೊನೆಗೆ ಮಹಮ್ಮದೀಯರೇ ಮೇಲ್ಗೈಯಾದರು ಫಿರೋಜ ಶಾಹ ಸುಲ್ತಾನನು ವಿಜಯನಗರ ಸೈನ್ಯಗಳನ್ನು ಸದೆಬಡಿದು ಸಂಧಿಪತ್ರವನ್ನು ತನ್ನ ಇಷ್ಟಾನುಸಾರ ಬರೆಯಿಸಿದನು. ಆ ಸಂಧಿಯಂತೆ ದೇವರಾಯನ ಬಂಕಾಪುರವನ್ನು ಬಹಮನಿ ರಾಜ್ಯಕ್ಕೆ ಕೊಡುವುದಲ್ಲದೆ ತನ್ನ ಮಗಳೊಬ್ಬಳನ್ನು ಸುಲ್ತಾನನಿಗೆ "ನಿಕಾ" ಮಾಡಿಸಬೇಕಾಯಿತು[17].

ಫಿರೋಜ ಶಾಹ ಸುಲ್ತಾನನೊಡನೆ ಸೇರಿಕೊಂಡಿದ್ದ ಕೊಂಡವೀಡು ರೆಡ್ಡಿಗಳೂ ಇದೇ ಕಾಲಕ್ಕೆ ಉದಯಗಿರಿ ರಾಜ್ಯವನ್ನು ಆಕ್ರಮಿಸಿ ಅದರ ಕೊಂಚ ಭಾಗವನ್ನು ಸೆಳೆದುಕೊಂಡರು. ಅಲ್ಲ ಕ್ರಿ.ಶ. 1413ರ ವರೆಗೂ ಅವರು ಭದ್ರವಾಗಿ ತಳವೂರಿದ್ದರು.

ಕೃಷ್ಣಾ ಗೋದಾವರಿ ನದಿಗಳ ನಡುವಣ ಪ್ರಾಂತದಲ್ಲಿದ್ದ ತೆಲಗು-ಚೋಳ ವಂಶದ ಅಣ್ಣದೇವನೂ ಫಿರೋಜ ಶಾಹನ ಮಿತ್ರವರ್ಗಕ್ಕೆ ಸೇರಿದವನಾಗಿದ್ದನು. ರಾಜಮಹೇಂದ್ರದ ರೆಡ್ಡಿ ನಾಯಕನಾದ ಕಾಟಯವೇಮನು ಅಣ್ಣ ದೇವನ ಭಾವನಾಗಿದ್ದನು. ಅಣ್ಣದೇವನ ಪ್ರಭಾವವನ್ನು ತಗ್ಗಿಸುವ ಸಲುವಾಗಿ ದೇವರಾಯನು ಕಾಟಯವೇಮನೊಡನೆ ಒಪ್ಪಂದ ಮಾಡಿಕೊಂಡು, ಅಣ್ಣ ವೇಮನೊಡನೆ ಕ್ರಿ.ಶ. 1405ರಲ್ಲಿ ಯುದ್ಧಕ್ಕಿಳಿದನು. ಅಣ್ಣದೇವನು ಪರಾಜಿತನಾಗುವಂತೆ ಕಂಡುಬಂದಾಗ ಫಿರೋಜ ಶಾಹನು ಅವನ ನೆರವಿಗೆ ಬಂದನು. ಕಾಟಯವೇಮನು ರಣರಂಗದಲ್ಲಿ ಪ್ರಾಣ ನೀಗಿದನು. ದೇವರಾಯನ ಸೈನ್ಯಗಳು ಹಿಮ್ಮೆಟ್ಟಿದುವು. ಫಲವಾಗಿ ಫಿರೋಜ ಶಾಹನ ಸಂಪರ್ಕ ಮಾರ್ಗವನ್ನು ನಿರೋಧಿಸುವ ಸಲುವಾಗಿ ಪನಗಲ್ ಪ್ರಾಂತವನ್ನು ಹಿಡಿದುಕೊಂಡನು. ಫಿರೋಜ ಶಾಹನು ಪನಗಲ್ ನಗರಕ್ಕೆ ಎರಡು ವರ್ಷಕಾಲ ಮುತ್ತಿಗೆ ಹಾಕಿದನು[18]. ಅದುವರೆಗೂ ಬಹಮನಿಯರಸರ ಮಿತ್ರರಾಗಿದ್ದ ರಾಜಕೊಂಡದ ವೇಲಮರು ದೇವರಾಯನನ್ನು ಸೇರಿಕೊಂಡುದರಿಂದ, ಬಹಮನಿ ಸೈನ್ಯಗಳ ಬಲ ಕುಂಠಿತವಾಯಿತು. ಇದೇ ಕಾಲಕ್ಕೆ ಪ್ಲೇಗ್ ರೋಗವೂ ಹರಡಿ, ಮುಸ್ಲಿಂ ಸೈನಿಕರ ತ್ರಾಣವನ್ನು ಮತ್ತಷ್ಟು ಕುಂದಿಸಿತು. ದೇವರಾಯನಿಗೆ ವಿಜಯವಾಯಿತು. ಈ ವಿಜಯಪ್ರಾಪ್ತಿಯ ಕಾಲ ಕ್ರಿ.ಶ. 1419. ಕಾಟಯವೇಮನ ಸೇನಾಪತಿಯಾದ ಅಲ್ಲಾಡನ ಸ್ಥಿರ ಪ್ರಯತ್ನದಿಂದ ರಾಜಮಹೇಂದ್ರಿಯ ರೆಡ್ಡಿ

ರಾಜ್ಯವು ಚೇತರಿಸಿಕೊಂಡಿತು. ಕೊಂಡವಿಡು ರಾಜ್ಯವಾದರೋ ದೇವರಾಯನಿಗೂ ರಾಜಕೊಂಡದ ವೇಲಮರಿಗೂ ಹಂಚಿಹೋಗಿ ನಿಷ್ಪ್ರಭಾವವಾಯಿತು. ಇವೆಲ್ಲ ಯದ್ಧಗಳಲ್ಲಿ ದೇವರಾಯನಿಗೆ ಅವನ ಮಗನಾದ ವೀರ ವಿಜಯರಾಯನೂ ಮಂತ್ರಿ ಲಕ್ಷ್ಮೀಧರನೂ ಅಮೂಲ್ಯ ಸಹಾಯ ನೀಡಿದ್ದರು[19].

ಇಮ್ಮಡಿ ಬುಕ್ಕನಂತೆ ಒಂದನೆಯ ದೇವರಾಯನೂ ವಿಜಯನಗರ ಪಟ್ಟಣವನ್ನು ಬಹಳವಾಗಿ ವಿಸ್ತರಿಸಿದನು; ಹಲವಾರು ನೂತನ ಪ್ರಾಸಾದಗಳನ್ನು ನಿರ್ಮಿಸಿದನು; ಅನೇಕ ಕೋಟೆ ಕೊತ್ತಳಗಳನ್ನೂ ಕಟ್ಟಿಸಿದನು – ಎಂದು ಪೋರ್ಚ್‌ಗೀಸ್ ಪ್ರವಾಸಿ ನ್ಯೂನಿಸ್ ಹೇಳುತ್ತಾನೆ. ಅದೂ ಅಲ್ಲದೆ ದೇವರಾಯನು ತುಂಗಭದ್ರೆಯಲ್ಲಿ ಒಂದು ಭಾರಿ ಆಣೆಕಟ್ಟನ್ನು ರಚಿಸಿದ್ದನಂತೆ; ಜತೆಗೆ ಈ ನದಿಯಿಂದ ನಗರದವರೆಗೂ ಹೋಗುವ ಹದಿನೈದು ಮೈಲಿ ಉದ್ದದ ಒಂದು ಮೇಲ್ಗಾಲುವೆಯನ್ನೂ ರಚಿಸಿದ್ದನು. ಹಳೆಯ ನಗರದ ಬಹುಭಾಗದಲ್ಲಿರುವ ಅನೇಕಾನೇಕ ಹೊಲಗಳಿಗೆ ಇಂದಿಗೂ ನೀರಿನ ಪೂರೈಕೆ ಮಾಡುತ್ತಿರುವುದು ಅದೇ ಕಾಲುವೆಯಾಗಿದ್ದರೆ, ನಿಜವಾಗಿಯೂ ಅದು ಅಸಾಧರಣ ಶಿಲ್ಪವೇ ಸರಿ. ಮೈಲಿಗಳ ವರೆಗೆ ಬೆಟ್ಟಗಳ ಬುಡದ ಬಂಡೆಕಲ್ಲಿನಲ್ಲೇ ಇದನ್ನು ಕೊರೆದಿದೆ. 'ಭಾರತದಲ್ಲಿ ನಿರ್ಮಿತವಾಗಿರುವ ನೀರಾವರಿ ಕಾಮಗಾರಿಗಳಲ್ಲಿ ಇದು ಅತ್ಯದ್ಭುತವಾಗಿದೆ' (ಸಿವೆಲ್)[20].

ದೇವರಾಯನ ರಾಜ್ಯಭಾರ ಕಾಲದಲ್ಲಿ ಇಟಲಿದೇಶದ ನಿಕೋಲೋ ಕೊಂತಿ ಎಂಬ ಪ್ರವಾಸಿಯು ವಿಜಯನಗರವನ್ನು ಸಂದರ್ಶಿಸಿದ್ದನು.

ದೇವರಾಯನು ಕ್ರಿ.ಶ. 1422ರಲ್ಲಿ ಮೃತನಾದನು. ದೇವರಾಯನ ಮರಣಾನಂತರ ಅವನ ಮಗನಾದ ರಾಮಚಂದ್ರನು ಪಟ್ಟಕ್ಕೆ ಬಂದನು. ಆದರೆ ಅವನ ಆಳ್ವಿಕೆ ಕೆಲವೇ ತಿಂಗಳಲ್ಲಿ ಮುಗಿಯಿತು. ಅವನ ತರುವಾಯ ದೇವರಾಯನ ಇನ್ನೊಬ್ಬ ಮಗನಾದ ವೀರ ವಿಜಯರಾಯನು ಪಟ್ಟವೇರಿದನು.

ನ್ಯೂನಿಸ್ ಹೇಳಿರುವಂತೆ ವೀರ ವಿಜಯರಾಯನು ಅಷ್ಟೇನೂ ಪ್ರಸಿದ್ಧ ರಾಜನಾಗಿರಲಿಲ್ಲ. ಅವನ ಮಗನಾದ ಇಮ್ಮಡಿ ದೇವರಾಯನು ಪ್ರಾರಂಭದಿಂದಲೇ ರಾಜ್ಯಭಾರದಲ್ಲಿ ತಂದೆಯೊಡನೆ ಸಹಭಾಗಿಯಾಗಿದ್ದನು. ಬಹಮನಿ ರಾಜರಿಗೂ ವಿಜಯನಗರಕ್ಕೂ ಇದ್ದ ಪರಂಪರಾಗತ ವೈರವು ವೀರ ವಿಜಯರಾಯನ ಕಾಲದಲ್ಲೂ ಮುಂದುವರಿಯಿತು. ಆಗಿನ ಬಹಮನಿ ರಾಜ ಎರಡನೆಯ ಅಲ್ಲಾವುದ್ದೀನನ ಮಗನಾದ ಅಹ್ಮದ ಶಾಹನು ವಿಜಯನಗರದ ಮೇಲೇರಿ ಬಂದನು. ಎರಡು ರಾಜ್ಯಗಳ ಸೈನ್ಯಗಳು ತುಂಗಭದ್ರಾ ತಟದಲ್ಲಿ ಸಂಧಿಸಿದುವು. ವಿಜಯನಗರದ ಸೈನಿಕರು ತಮ್ಮ ಶಿಬಿರಗಳಲ್ಲಿ ನಿದ್ರಿಸುತ್ತಿದ್ದ ಕಾಲಕ್ಕೆ ಮುಂಜಾವದಲ್ಲಿ ಬಹಮನಿ ಸೈನ್ಯಗಳು ಅವರನ್ನು ಹಠಾತ್ತಾಗಿ ಬಂದು ಮುತ್ತಿದವು. ಇದರಿಂದ ದಿಗ್ಭ್ರಾಂತರಾದ ವಿಜಯನಗರ ಸೈನಿಕರು ಚೆಲ್ಲಾಪಿಲ್ಲಿಯಾಗಿ ಚದರಿದರು. ವೀರ ವಿಜಯರಾಯನು ಹೇಗೋ ತಲೆತಪ್ಪಿಸಿಕೊಂಡು ಸಮೀಪದ ಕಬ್ಬಿನ ತೋಟದಲ್ಲಿ ಅವಿತುಕೊಂಡನು. ಅಲ್ಲಿಗೂ ಬೆನ್ನಟ್ಟಿಬಂದ ಬಹಮನಿ ಸೈನಿಕರು ಅವನನ್ನು ಕಂಡರೂ, ಅವನು ಯಾರೋ ಕೂಲಿಯಾಳಿರಬೇಕೆಂದು ಭ್ರಮಿಸಿದರು. ಸುಲ್ತಾನನ ಜಯವಾರ್ತೆ ಬರುತ್ತಲೂ[21], ಅವರು ಅವನನ್ನು ಅಲ್ಲೇಬಿಟ್ಟು ತಮ್ಮೊಡೆಯನನ್ನು ಸೇರಿಕೊಂಡರು. ಅಹ್ಮದ ಶಾಹನು ವಿಜಯೋನ್ಮತ್ತನಾಗಿ ನಗರವನ್ನೆಲ್ಲಾ

ಕೊಳ್ಳೆಹೊಡೆದು ಧ್ವಂಸ ಮಾಡಿದನು; ಈ ಯುದ್ಧದಲ್ಲಿ ನೂರಾರು ವಿಜಯನಗರ ಸೈನಿಕರು ಸೆರೆಯಾಳುಗಳಾದರು. ಅವರಲ್ಲಿ ಬ್ರಾಹ್ಮಣ ವಿದ್ವಾಂಸರೂ ಹಲವರಿದ್ದರು. ಕೊನೆಗೆ ಅಪಾರ ಧನವನ್ನು ಪರಿಹಾರ ನೀಡಿ ವೀರ ವಿಜಯರಾಯನು ಶಾಂತಿ ಸ್ಥಾಪನೆ ಮಾಡಬೇಕಾಯಿತು. ವೀರ ವಿಜಯರಾಯನು ಸುಮಾರು ಕ್ರಿ.ಶ. 1426ರಲಿ ಮೃತನಾದನು.

**ಇಮ್ಮಡಿ ದೇವರಾಯ (ಕ್ರಿ.ಶ. 1426 – 1446):**

ವೀರ ವಿಜಯರಾಯನು ಮೃತನಾಗುತ್ತಲೂ ಅವನ ಮಗನಾದ ಇಮ್ಮಡಿ ದೇವರಾಯನು ಪಟ್ಟಕ್ಕೆ ಬಂದನು. ಅವನಿಗೆ ಪೌಢದೇವರಾಯ ಎಂಬ ಇನ್ನೊಂದು ಹೆಸರು ಇದ್ದಿತು. ಇಮ್ಮಡಿ ದೇವರಾಯನ ಆಳ್ವಿಕೆಯು ವಿಜಯನಗರದ ಧವಳ ಕೀರ್ತಿಯನ್ನು ದಿಗ್ದೇಶಗಳಿಗೆ ಹರಡಿಸಿದ ಕಾಲವೆಂದರೆ ಅತ್ಯುಕ್ತಿಯಾಗುವಂತಿಲ್ಲ.

ಕ್ರಿ.ಶ. 1420ರಲ್ಲಿ ಕೊಂಡವೀಡು ಅರಸನಾದ ಪೆದ್ದ ಕೋಮಟಿ ವೇಮನು ಮೃತನಾದ ಮೇಲೆ ಆ ರಾಜ್ಯವು ನಿರ್ವೀರ್ಯವಾಗಿ ವಿಘಟಿತಾವಸ್ಥೆಗೆ ಬಿದ್ದಿತ್ತು. ಹಾಗೆ ಅರಾಜಕವಾಗಿದ್ದ ರಾಜ್ಯವನ್ನು ಇಮ್ಮಡಿ ದೇವರಾಯನು ಕ್ರಿ.ಶ. 1428ರಲ್ಲಿ ಜಯಸಿಕೊಂಡನು[22].

ಕೊಂಡವೀಡು ಹೀಗೆ ಕೈಸೇರಿದೊಡನೆ, ಇಮ್ಮಡಿ ದೇವರಾಯನು ಓಢ್ರ (ಬಂಗಾಳ) ದೇಶದ ಗಜಪತಿ ರಾಜ್ಯವನ್ನು ಆಕ್ರಮಿಸಿದನು. ಕೊಂಡವೀಡನ್ನು ಸೂರೆಮಾಡಿದ ಕಾರಣ ಇಮ್ಮಡಿ ದೇವರಾಯನು ಗಜಪತಿಯ ಸಾಮಂತರೊಡನೆ ಘರ್ಷಣೆಗೆ ಬಂದಿರಬೇಕು. ಈ ಘರ್ಷಣೆಯೇ ಗಜಪತಿ ರಾಜ್ಯದ ಆಕ್ರಮಣಕ್ಕೂ

ಕಾರಣವಾಗಿರಬೇಕು. ಯುದ್ಧವು ನಿರ್ಣಾಯಕ ಹಂತಕ್ಕೆ ಬರುವ ಮೊದಲೇ ರಾಜಮಹೇಂದ್ರಿಯ ಅಲ್ಲಾಡ ರೆಡ್ಡಿಯು ಈ ವ್ಯಾಜ್ಯಕ್ಕೆ ಮಧ್ಯಸ್ಥನಾಗಿ ಬಂದು ಇಕ್ಕಡೆಗಳಿಗೂ ಸಂಧಿ ಕುದುರಿಸಿದನು. ಆದರೆ ಮತ್ತೆ ಬಹುಬೇಗನೆ ಅಲ್ಲಾಡ ರೆಡ್ಡಿ ಮೃತನಾದನು: ಅವನ ಮಕ್ಕಳಾದ ವೇಮನೂ ವೀರಭದ್ರನೂ ತಂದೆಯ ಆಕ್ರಮಣ ನೀತಿಯನ್ನೇ ಮುಂದುವರಿಸಿ, ಕಳಿಂಗ ರಾಜ್ಯಕ್ಕೆ ನುಗ್ಗಿಬಂದರು. ಕ್ರಿ.ಶ. 1435ರಲ್ಲಿ ಕಪಿಲೇಶ್ವರನೆಂಬ ಸಹಾಸಿಯು ಕಳಿಂಗ ರಾಜ್ಯದ ಪಟ್ಟಕ್ಕೆ ಬಂದೊಡನೆ ಗಜಪತಿಯು ರಾಜಮಹೇಂದ್ರಿಯನ್ನು ಮುತ್ತಿದನು. ರಾಜಮಹೇಂದ್ರಿಯ ಅರಸರು ವಿಜಯನಗರದರಸರೊಡನೆ ರಾಜಕೀಯ ಸಂಬಂಧ ಮಾತ್ರವಲ್ಲ ರಕ್ತಸಂಬಂಧವೂ ಉಳ್ಳವರಾಗಿದ್ದ ಕಾರಣ ಅವರು ವಿಜಯನಗರದ ಸಹಾಯಯಾಚನೆ ಮಾಡಿದರು. ಒಡನೆ ಇಮ್ಮಡಿ ದೇವರಾಯನ ಸಹಾಯ ಸಿದ್ಧವಾಗಿಯೇ ಬಂದಿತು. ವಿಜಯನಗರದ ಸೈನ್ಯಗಳು ಕಳಿಂಗ ಸೇನೆಗಳನ್ನು ಹಿಮ್ಮೆಟ್ಟಿಸಿ ರಾಜಮಹೇಂದ್ರಿಯ ಸೇನೆಗಳಿಗೆ ಕೊಂಚ ವಿಶ್ರಾಂತಿ ನೀಡಿದುವು. ಆದರೆ ದೇವರಾಯನ ಮರಣಾನಂತರ ಕಪಿಲೇಶ್ವರನು ರಾಜಮಹೇಂದ್ರಿಯನ್ನು ಕಬಳಿಸಿದನು.

ಇಮ್ಮಡಿ ದೇವರಾಯನು ಕೇರಳಕ್ಕೂ ಸೈನ್ಯಸಮೇತನಾಗಿ ವಿಜೃಂಭಿಸಿಕೊಂಡು ಬಂದನು. ಕ್ವಿಲಾನ್ ಮತ್ತು ಬೇರೆ ನಾಡುಗಳ ಅರಸರನ್ನೂ ಆಕ್ರಮಿಸಿದನು. ಕಲ್ಲಿಕೋಟೆಯ ಝಾಮೋರಿನ್ ಮಾತ್ರ ದೇವರಾಯನಿಗೆ ಸುಲಭವಾಗಿ ಮಣಿಯುವಂತಿಲ್ಲ. ಅವನ ಸ್ವಾತಂತ್ರ್ಯಕ್ಕೆ ಹೆಚ್ಚಿನ ಭಂಗ ತಟ್ಟಿರಲಿಲ್ಲ. ಝಾಮೋರಿನನು ಇಮ್ಮಡಿ ದೇವರಾಯನ ಪ್ರಭುತ್ವಕ್ಕೆ ಆಧೀನನಾಗಿಲ್ಲದಿದ್ದರೂ, ದೇವರಾಯನಲ್ಲಿ ಭಯ ಭೀತಿಗಳುಳ್ಳವನಾಗಿದ್ದನೆಂದೂ, ಫಾರಸೀ ದೇಶದ

ರಾಯಭಾರಿಯನ್ನು ತನ್ನಲ್ಲಿಗೆ ಕಳುಹಿಸಿಕೊಡಬೇಕೆಂದು ದೇವರಾಯನಿಂದ ನಿರೂಪ ಬಂದೊಡನೆ ಅದನ್ನು ಒಡನೆಯೇ ಶಿರಸಾವಹಿಸಿದನೆಂದೂ ದೇವರಾಯನ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತಕ್ಕೆ ಬಂದ ಅಬ್ದುಲ್ ರಝಾಕ್ ಬರೆದಿರುತ್ತಾನೆ. ಇಮ್ಮಡಿ ದೇವರಾಯನು ದಕ್ಷಿಣ ಭಾರತದ ಸಾರ್ವಭೌಮ ಪ್ರಭುವಾಗಿದ್ದನೆಂದೂ, ಸಿಂಹಳದಿಂದ ಕಲಬುರ್ಗಿಯವರೆಗೂ, ಬಂಗಾಳದಿಂದ ಮಲಬಾರಿನವರೆಗೂ ಅವನ ರಾಜ್ಯವು ಪ್ರಸರಿಸಿದ್ದಿತೆಂದೂ ಸಹ ಅಬ್ದುಲ್ ರಝಾಕ್ ಹೇಳುತ್ತಾನೆ. ಕ್ವಿಲಾನ್, ಪುಲಿಕಾಟ್, ಪೆಗು ಮೊದಲಾದ ರಾಜ್ಯಗಳಿಂದಲೂ ಇಮ್ಮಡಿ ದೇವರಾಯನು ಕಪ್ಪ ಸಂಗ್ರಹಿಸಿದ್ದನೆಂದು ನ್ಯೂನಿಸ್ ಹೇಳುತ್ತಾನೆ[23].

ಬಹಮನಿ ರಾಜ್ಯಕ್ಕೂ ಇಮ್ಮಡಿ ದೇವರಾಯನಿಗೂ ಎಂದೂ ಸ್ನೇಹ ಕುದುರಿರಲಿಲ್ಲವೆಂದು ತೋರುವುದು. ಕ್ರಿ.ಶ. 1436ರಲ್ಲಿ ಎರಡನೆಯ ಅಲ್ಲಾವುದ್ದೀನನು ಬಹಮನಿ ಸುಲ್ತಾನನಾಗುತ್ತಲೂ, ಪೊಗದಿ ಬಾಕಿಯ ವಸೂಲಿಗಾಗಿ ಇಮ್ಮಡಿ ದೇವರಾಯನ ಮೇಲೇರಿ ಹೋದನು. ದೇವರಾಯನು ಸೋತು ಪೊಗದಿ ಸಲ್ಲಿಸಬೇಕಾಯಿತು. ಹೀಗೆ ಹೋದಲ್ಲಿ, ಬಂದಲ್ಲಿ, ಎಲ್ಲೆಲ್ಲೂ ಬಹಮನಿ ಸೈನ್ಯಗಳೇ ಜಯಿಸುವುದನ್ನು ಕಂಡು ದಿಗ್ಭ್ರಮೆಗೊಂಡ ಇಮ್ಮಡಿ ದೇವರಾಯನು ತನ್ನ ಅಸ್ಥಾನದ ಸಾಮಂತ ಮನ್ನೆಯರನ್ನೂ ಸೇನಾಧಿಪತಿಗಳನ್ನೂ ಕರೆಯಿಸಿ ಮಹಮ್ಮದೀಯರ ವಿರೋಧವನ್ನು ತಡೆಗಟ್ಟುವ ವಿಧಾನವನ್ನು ಕುರಿತು ಅಭಿಪ್ರಾಯ ವಿನಿಮಯ ನಡೆಸಿದನು. ಈ ಸಭೆಯಲ್ಲಿ ಕೈಕೊಂಡ ನಿರ್ಣಯದಂತೆ ಮಹಮ್ಮದೀಯರಿಗೆ ಅದುವರೆಗೂ ಇದ್ದ ಕುಂದುಕೊರತೆಗಳು ಅಂದಿನಿಂದ ಮಾಯವಾದುವು. ಸೈನ್ಯದಲ್ಲಿ ಅಧಿಕಾರಿಗಳಾಗಿ ಮುಸ್ಲಿಂರೂ ನಿಯುಕ್ತರಾದರು.

ಅವರ ಧರ್ಮಾಧಿಕಾರಕ್ಕೆ ಗೌರವ ಲಭಿಸಿತು. ಮಹಮ್ಮದೀಯರು ತನಗೂ ಅವರ ಧರ್ಮ ಗ್ರಂಥಕ್ಕೂ ಏಕಕಾಲದಲ್ಲೇ ವಂದಿಸಲಾಗುವಂತೆ ಇಮ್ಮಡಿ ದೇವರಾಯನ ತನ್ನ ಸಿಂಹಾಸನದ ಮುಂದುಗಡೆ ಒಂದು ಕುರಾನ ಗ್ರಂಥವನ್ನಿರಿಸಿದನು[24].

ಕ್ರಿ.ಶ. 1443ರಲ್ಲಿ ಇಮ್ಮಡಿ ದೇವರಾಯನು ಕಲ್ಲಿಕೋಟೆಯಲ್ಲಿದ್ದಾಗ ಭೋಜನ ಸಮಾರಂಭವೊಂದರಲ್ಲಿ ಅವನ ಕೊಲೆ ಮಾಡುವ ಪ್ರಯತ್ನ ನಡೆಯಿತೆಂದು ಅಬ್ದುಲ್ ರಝಾಕ್ ಹೇಳುತ್ತಾನೆ. ಅನಾರೋಗ್ಯ ಕಾರಣವನ್ನು ಮುಂದೊಡ್ಡಿ ಇಮ್ಮಡಿ ದೇವರಾಯನು ಸಮಾರಂಭದಿಂದ ತಪ್ಪಿಸಿಕೊಂಡುದರಿಂದ, ಕೊಲೆಯ ಪ್ರಯತ್ನವು ವಿಫಲವಾಯಿತು. ಆದರೂ ಅವನ ಹಲವರು ಸರದಾರರು ಈ ಹಂಚಿಕೆಗೆ ಬಲಿಯಾದರು. ಬಹಮನಿಯ ಇಮ್ಮಡಿ ಅಲ್ಲಾವುದೀನನು ಈ ಹಂಚಿಕೆಯನ್ನು ಬಲ್ಲವನಾಗಿದ್ದನು. ಆದುದರಿಂದ, ಈ ಕೋಲಾಹಲದ ಪ್ರಯೋಜನ ಪಡೆಯಲೆಳಸಿ, ದೇವರಾಯನು ಏಳು ಲಕ್ಷ ವರಹಗಳನ್ನು ಸಲ್ಲಿಸಬೇಕೆಂದು ಅಲ್ಲಾವುದೀನನು ಆಗ್ರಹ ಹಿಡಿದನು. ದೇವರಾಯನಾದರೋ ಈ ಕೋರಿಕೆಯನ್ನು ತಿರಸ್ಕರಿಸುವುದಷ್ಟೇ ಅಲ್ಲದೇ, ರಾಯಚೂರು ದೋಆಬ್ ಪ್ರಾಂತವನ್ನು ಆಕ್ರಮಿಸಿದನು. ಮೊದಮೊದಲು ದೇವರಾಯನಿಗೆ ಗೆಲವಾಗುವ ಸೂಚನೆ ಕಂಡುಬಂದಿತು – ಮುದ್ಗಲವು ಅವನ ಕೈವಶವಾಯಿತು; ರಾಯಚೂರು, ಬಂಕಾಪುರ ನಗರಗಳೂ ಅವನ ಕೈಸೇರಿದುವು. ಬಿಜಾಪುರದ ವರೆಗಿನ ಪ್ರಾಂತವೆಲ್ಲವೂ ನೆಲಸಮವಾಯಿತು. ಆದರೇ ಕೊನೆಕೊನೆಗೆ ಮುಸ್ಲಿಂರ ಸೇನೆಗಳು ಸುಸಂಘಟಿತವಾಗಿ ದ್ವಿಗುಣಿತೋತ್ಸಾಹ ದಿಂದ ಕಾದಿದುವು. ಫಲವಾಗಿ ದೇವರಾಯನು ಮುದ್ಗಲಕ್ಕೆ ಹಿಂಜರಿಯಬೇಕಾಯಿತು. ಯುದ್ಧದ ಕೊನೆಯ ಮೂರು

ಹಂತಗಳಲ್ಲಿ ದೇವರಾಯನ ಹಿರಿಯ ಮಗನು ಮೃತನಾದನು. ಅವನ ಸೇನೆಗಳು ಮುದ್ಗಲ ಕೋಟೆಗೆ ಹಿಂಜರಿದುವು. ಹೀಗಿದ್ದರೂ ದೇವರಾಯನು ಇಬ್ಬರು ಮುಸ್ಲಿಂ ಸೇನಾನಿಗಳನ್ನು ಸೆರೆಹಿಡಿದನು. ಅವರನ್ನು ಬಂಧಮುಕ್ತಗೊಳಸಿದೆ ಹೋದರೆ, ವಿಜಯನಗರದ ಜನಸಮುದಾಯ ಸಮಸ್ತವನ್ನೂ ಕಗ್ಗೊಲೆ ಮಾಡುವುದಾಗಿ ಸುಲ್ತಾನನು ಬೆದರಿಸಿದನು. ಅವನ ತರ್ಜನವನ್ನು ಇದಿರಿಸಲು ಇಮ್ಮಡಿ ದೇವರಾಯನಿಗೆ ಧೈರ್ಯ ಸಾಲದಾಯಿತು[25].

ಇಮ್ಮಡಿ ದೇವರಾಯನಿಗೆ ಇಬ್ಬರು ರಾಣಿಯರಿದ್ದರು. ಪೊನ್ನಾಲದೇವಿ ಮತ್ತು ಭೀಮಾದೇವಿ ಎಂದು ಅವರ ಹೆಸರು. ಭೀಮಾದೇವಿಯಲ್ಲಿ ರಾಜನಿಗೆ ಸಂತತಿ ಪ್ರಾಪ್ತಿಯಾಗಿರಲಿಲ್ಲ. ಪೊನ್ನಾಲದೇವಿಯಲ್ಲಿ ಮಲ್ಲಿಕಾರ್ಜುನನೆಂಬ ಪುತ್ರನು ಜನಿಸಿದನೆಂದು ತೋರುವುದು. ಕ್ರಿ.ಶ. 1443ರಲ್ಲಿ ಕಲಬುರ್ಗಿ ವಿರುದ್ಧವಾಗಿ ಹೂಡಿದ ಯುದ್ಧದಲ್ಲಿ ಇಮ್ಮಡಿ ದೇವರಾಯನ ಜ್ಯೇಷ್ಠ ಪುತ್ರನು ಮೃತನಾದನೆಂದು ಚರಿತ್ರ ಲೇಖಕ ಫರಿಸ್ತನು ಹೇಳುತ್ತಾನೆ. ಆದರೆ ಡಾ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ ಅಭಿಪ್ರಾಯದಂತೆ, ಮಲ್ಲಕಾರ್ಜುನ ಆ ಯುದ್ಧದಲ್ಲಿ ಗಾಯಗೊಂಡನೇ ಹೊರತು ಮೃತನಾಗಿರಲಿಲ್ಲ; ಇಮ್ಮಡಿ ದೇವರಾಯನ ಮರಣಾನಂತರ, ಮಲ್ಲಿಕಾರ್ಜುನನೇ ರಾಜ್ಯಕ್ಕೆ ಉತ್ತರಾಧಿಕಾರಿಯಾಗಿ ಬಂದನು. ಇಮ್ಮಡಿ ದೇವರಾಯನಿಗೆ ಪ್ರೌಢದೇವರಾಯನೆಂಬ ತಮ್ಮನೊಬ್ಬನಿದ್ದನು. ಅವನು ಕ್ರಮವಾಗಿ ಮುಳಬಾಗಲು, ಮರಕತನಗರ, ಪೆನುಕೊಂಡೆ ಪ್ರಾಂತಗಳ ಮಾಂಡಲಿಕನಾಗಿದ್ದನು. ಇಮ್ಮಡಿ ದೇವರಾಯನಿಗೆ ಹರಿಣಾ ಎಂಬ ತಂಗಿಯೊಬ್ಬಳಿದ್ದಳು. ಈಕೆ ಮತ್ತಿನ ರಾಜ್ಯಾಪಹಾರಕನಾದ ಒಂದನೆಯ ನರಸಿಂಹನ ಕುಟುಂಬದ ಸಾಳುವ

ತಿಪ್ಪರಾಜನನ್ನು ವರಿಸಿದ್ದಳು. ಇಮ್ಮಡಿ ದೇವರಾಯನ ಭಾವನಾದ ಈ ತಿಪ್ಪರಾಜನು "ಮಹಾಮಂಡಲೇಶ್ವರ", "ಕಠಾರಿಸಾಳುವ", "ತ್ರಿಭುವನರಾಯ", "ಶಂಭುರಾಯ ಪ್ರತಿಷ್ಠಾಪಕ", "ದಕ್ಷಿಣ ಸುರಾಷ್ಟ್ರ" ಇತ್ಯಾದಿಯಾಗಿ ಶಾಸನಗಳಲ್ಲಿ ವರ್ಣಿತನಾಗಿದ್ದಾನೆ. ತಿಪ್ಪರಾಜನ ಮಗನಾದ ಗೋಪರಾಜನು ಸುಮಾರು ಕ್ರಿ.ಶ. 1431ರಲ್ಲಿ ತೇಕ್ಕಲಕೋಟೆಯನ್ನು ಪುನಃ ಸ್ವಾಧೀನಪಡಿಸಿಕೊಂಡನೆಂದು ಕೀರ್ತಿತನಾಗಿದ್ದಾನೆ.

ಇಮ್ಮಡಿ ದೇವರಾಯನು 1446ನೆಯ ಇಸವಿ ಮೇ 24ರಂದು ಮೃತನಾದನು. ದೇವರಾಯನು ಮೃತನಾದೊಡನೆ "ಮಹಾರಾಜಕ" ಪದವಿಗೇರಿದನಂತೆ[26].

**ಇಮ್ಮಡಿ ದೇವರಾಯನ ಕೀರ್ತಿ ವೈಭವ:**

ವಿಜಯನಗರ ಚರಿತ್ರೆಯಲ್ಲಿ ಇಮ್ಮಡಿ ದೇವರಾಯನ ರಾಜ್ಯಭಾರ ಕಾಲವು ನಿಜಕ್ಕೂ ಒಂದು ಯುಗಪ್ರವರ್ತಕ ಕಾಲ. ಇತಿಹಾಸ ಪ್ರಸಿದ್ಧ ಕೃಷ್ಣದೇವರಾಯನ ಕಾಲದ ಸತ್ತ್ವ ಮಹಿಮೆಯೂ, ಸಾಂಸ್ಕೃತಿಕ ವೈಭವವೂ ಇಮ್ಮಡಿ ದೇವರಾಯನ ರಾಜ್ಯಭಾರದಿಂದ ಅನುಸ್ಯೂತವಾಗಿ ಬಂದ ಪರಿಣಾಮ. ದಕ್ಷಿಣ ಭಾರತದ ಚರಿತ್ರೆಯಲ್ಲಿ 16ನೆಯ ಶತಮಾನದಲ್ಲಿ ಕೃಷ್ಣದೇವರಾಯನಿಗೆ ಯಾವ ಬಗೆಯ ಉನ್ನತಸ್ಥಾನವಿದ್ದಿತೋ ಅದೇ ಬಗೆಯ ಗೌರವಸ್ಥಾನವು 15ನೆಯ ಶತಮಾನದಲ್ಲಿ ಇಮ್ಮಡಿ ದೇವರಾಯನಿಗಿದ್ದಿತು. ಕೃಷ್ಣದೇವರಾಯನು ಬಹಮನಿ ರಾಜ್ಯಗಳ ಮೇಲೆ ಕೈಕೊಂಡ ದಿಗ್ವಿಜಯಾಡಂಬರವೂ ಆಕ್ರಮಣ ನೀತಿಯೂ ಇಮ್ಮಡಿ ದೇವರಾಯನ

ವಿಜಯ ಸಾಧನೆಗಳ ಪುನರಾವರ್ತನೆಯಲ್ಲದೆ ಬೇರೇನೂ ಅಲ್ಲ. ಕಟ್ಟುನಿಟ್ಟಾದ ರಾಜಧರ್ಮಾನುಷ್ಠಾನದಿಂದ ಇಮ್ಮಡಿ ದೇವರಾಯನು ಭಾರತದ ವಿಖ್ಯಾತರಾಜರೊಡನೆ ಸಮಾನಸ್ಕಂಧನಾಗಿದ್ದಾನೆ[27].

ಇಮ್ಮಡಿ ದೇವರಾಯನು ಪ್ರಜಾನುರಾಗಿಯಾದ ಮಹಾ ಚಕ್ರವರ್ತಿ. ಹಲವಾರು ಶಾಸನಗಳು ಅವನ ಉದಾತ್ತ ಗುಣಗಳನ್ನೂ, ಅವನ ರಾಜೋಚಿತ ರೀತಿನೀತಿಗಳನ್ನೂ ಹಲವು ಬಗೆಯಾಗಿ ಶ್ಲಾಘಿಸಿವೆ. ಸಂಸ್ಕೃತ, ಕನ್ನಡ, ತೆಲುಗು, ತಮಿಳು ಕವಿಗಳೆಲ್ಲರೂ ಒಕ್ಕೊರಲಿನಿಂದ ಅವನ ಗುಣಗಾನ ಮಾಡಿದ್ದಾರೆ. ಚಂದ್ರಗುಪ್ತ 18 ಕಂಪಣದ ಗುರಿಕಾರನಾದ ಪೃಥ್ವೀಸೆಟ್ಟಿ ಎಂಬವನು ಇಮ್ಮಡಿ ದೇವರಾಯನ ಮರಣವಾರ್ತೆಯಿಂದ ಎದೆಬಿರಿದು, ಕೋಡಕಣೆಗೆ ತೆರಳಿ, ಅಲ್ಲಿ ದೇವಸನ್ನಿಧಿಯಲ್ಲಿ, "ಭಗವತ್ಪಾದಾರವಿಂದ"ಕ್ಕೆ ಸೇರಿದನೆಂದು ಕ್ರಿ.ಶ. 1448ರ ಶಾಸನವೊಂದರಲ್ಲಿ ಹೇಳಿದೆ. ಪೃಥ್ವೀಸೆಟ್ಟಿಗೆ ತನ್ನ ಒಡೆಯನ ಮೇಲಿದ್ದ ಅಪಾರ ಭಕ್ತಿ ಗೌರವಗಳು ಈ ಹೇಳಿಕೆಯಿಂದ ವ್ಯಕ್ತವಾಗುವುವು. ಇಮ್ಮಡಿ ದೇವರಾಯನ ಲೋಕಪ್ರಿಯತೆಯನ್ನು ಶ್ರವಣಬೆಳ್ಗೊಳದ ಶಾಸನವೂ ಕೊಂಡಾಡಿ, ಅವನನ್ನು 'ಪ್ರತಾಪ ನಿಧಿ ದೇವರಾಟ್' ಎಂದೂ ಕೀರ್ತಿಸಿದೆ. ನಾಲ್ಕು ಪಾದಗಳ ಆ ಶ್ಲೋಕವನ್ನು ಇಲ್ಲಿ ಉದ್ಧರಿಸುವುದು ಸೂಕ್ತವಾಗಿದೆ.

ಕ್ಷಯಾಹ್ವಯ ಕುವತ್ಸರೇ ದ್ವಿತೀಯ ಯುಕ್ತ ವೈಶಾಖಕೇ
ಮಹೀತನಯವಾರಕೇಯುತ ಬಲಕ್ಷ ಪಕ್ಷೇತರೇ
ಪ್ರತಾಪನಿಧಿದೇವರಾಟ್ ಪ್ರಲಯಮಾಪಹಂತಾಸಮೋ
ಚತುರ್ದ್ದಶದಿನೇ ಕಥಂ ಪಿತೃಪತೇರ್ನಿವಾರ್ಯಾ ಗತಿಃ

ಇಮ್ಮಡಿ ದೇವರಾಯನು ಭವ್ಯಾಕಾರ ಸಂಪನ್ನನಾಗಿದ್ದನು. ಅವನ ದೇಹಬಲವು ಅವನ ನಾಣ್ಯಗಳಿಂದಲೇ ಸೂಚಿತವಾಗುವುದು. ಅವನ ತಾಮ್ರ ನಾಣ್ಯಗಳಲ್ಲಿ ಹೆಚ್ಚಾಗಿ, ಆನೆಯ ಚಿತ್ರವೂ ಯುದ್ಧಸಿದ್ಧನಾದ ರಾಜನ ಚಿತ್ರವೂ ಕಾಣಬರುತ್ತವೆ. ಪಳಗಿದ ಆನೆಯ ಚಿತ್ರವೂ ಅರ್ಥಪೂರ್ಣವಾಗಿದೆ. ಮದ್ದಾನೆಯೊಡನೆ ಏಕಾಂಗಿಯಾಗಿ ಹೋರಾಡಿ ಅದನ್ನು ಪಳಗಿಸುವ ಶಕ್ತಿ ಇಮ್ಮಡಿ ದೇವರಾಯನಿಗಿದ್ದಿತೆಂದು ಆ ನಾಣ್ಯ ಚಿತ್ರಗಳ ಸೂಚನೆಯಾಗಿದ್ದಿರಬಹುದು[28]. ಅದರಂತೆ ಅವನ 'ಗಜಬೇಂಟೆಕಾರ' ಎಂಬ ಬಿರುದೂ ಅರ್ಥವತ್ತಾಗಿದೆ. ಭೀಮಬಲನಾದ ಇಮ್ಮಡಿ ದೇವರಾಯನು ಅಪರಿಮಿತವಾದ ಆತ್ಮವಿಶ್ವಾಸವಿದ್ದವನಾದ ಕಾರಣ, ಯುದ್ಧ ಸೇನೆಗಳ ಮೇಲ್ವಿಚಾರಣೆಯನ್ನು ತಾನೇ ನಡೆಸುತ್ತಿದ್ದನು. ಪ್ರಬಲವಾದ ವ್ಯಕ್ತಿತ್ವ ಶಕ್ತಿಯಿದ್ದ ಇಮ್ಮಡಿ ದೇವರಾಯನು ಯುದ್ಧರಂಗದಲ್ಲಿ ಮಾತ್ರವಲ್ಲ, ಶಾಂತಿ ಕಾಲದಲ್ಲೂ ತನ್ನ ಧೀರ ನಿರ್ಭೀತ ವರ್ತನೆಯಿಂದ ಪ್ರಜೆಗಳ ಅನುರಾಗಕ್ಕೆ ಪಾತ್ರನಾಗಿದ್ದನು. ಇಮ್ಮಡಿ ದೇವರಾಯನಿ ಕೈಕೊಂಡ ಅಸಂಖ್ಯ ದಂಡಯಾತ್ರೆಗಳೂ, ಪ್ರಾಯಶಃ ಪ್ರತಿಯೊಂದರಲ್ಲೂ ಗಳಿಸಿದ ವಿಜಯವೂ ತನ್ನ ವೈರಿ ತನಗಿಂತಲೂ ಬಲಶಾಲಿಯಾಗಿದ್ದಾಗ ಸಾಧಿಸಿಕೊಂಡ ಗೌರವಯುತ ಸಂಧಿಯೂ ಅವನ ಶೌರ್ಯವನ್ನೂ, ಸಮಯ ಸ್ಫೂರ್ತಿಯನ್ನೂ, ಅನುದ್ವಿಗ್ನತೆಯನ್ನೂ ನಿದರ್ಶಿಸುತ್ತವೆ. ರಾಜನನ್ನು ಕೊಲ್ಲಲೂ ಒಳಸಂಚು ಮಾಡಿದ ವಿಶ್ವಾಸ ಘಾತಕಿಗಳಿಂದ ತಪ್ಪಿಸಿಕೊಂಡ ರೀತಿಯೂ ಅವನ ಸಮಯಸ್ಫೂರ್ತಿಯನ್ನು ವ್ಯಕ್ತಪಡಿಸುವುದಾಗಿದೆ. ಇಮ್ಮಡಿ ದೇವರಾಯನು ಈ ಸಂಶಪ್ತಕ ನಾಯಕರೊಡನೆ ಏಕಾಂಗಿಯಾಗಿ ಹೋರಾಡಬೇಕಾಯಿತೆಂದೂ ಹೋರಾಡಿ ಗೆದ್ದನೆಂದೂ ಅವನ

ಸಮಕಾಲೀನವಾದ ಅಬ್ದುಲ್ ರಝಾಕ್‌ನೂ ಹದಿನಾರನೆಯ ಶತಮಾನದ ನ್ಯೂನಿಸನೂ ಹೇಳಿದ್ದಾರೆ. ಇಮ್ಮಡಿ ದೇವರಾಯನನ್ನು ಕೊಲ್ಲಲೆಳಸಿದ ಕೂಟನಾಯಕನನ್ನು ಜನರೇ ಕೊಂದಿಕ್ಕಿದರೆಂಬುದು ಅವನ ಜನಪ್ರಿಯತೆಯನ್ನು ಮತ್ತಷ್ಟು ಸ್ಪಷ್ಟವಾಗಿ ಸೂಚಿಸುವುದು. ಹಲವಾರು ಏಟು ಬಿದ್ದ ಮೇಲೆ ಸಿಂಹಾಸನದ ಹಿಂಭಾಗದಲ್ಲಿ ಭೂಶಾಯಿಯಾಗಿ ಬಿದ್ದ ರಾಜನು ಮೃತನಾದನೆಂದು ಭಾವಿಸಿದ ಕೂಟನಾಯಕನು ಸಭಾಂಗಣದ ಮೆಟ್ಟಲಲ್ಲಿ ನಿಂತು, ತಾನೇ ರಾಜನೆಂದು ಒಪ್ಪಿಕೊಳ್ಳುವಂತೆ ಜನಸ್ತೋಮಕ್ಕೆ ಆಜ್ಞೆ ನೀಡಿದನೆಂದೂ ಆದರೆ ಕೊಂಚ ಹೊತ್ತಿನಲ್ಲೇ ಎದ್ದು ಬಂದ ರಾಜನು ಜನಸಂದಣಿಯ ಮುಂದೆ ಕಾಣಿಸಿಕೊಂಡಾಗ, ನೆರೆದ ಜನಸಮೂಹವೆಲ್ಲ ಆ ದ್ರೋಹಿ ರಾಜಕುಮಾರನ ಮೇಲೆ ಬಿದ್ದು ಅವನನ್ನು ಕೊಂದಿಕ್ಕಿತೆಂದೂ ಅಬ್ದುಲ್ ರಝಾಕ್ ಹೇಳುತ್ತಾನೆ[29]. ರಾಜನ ಸಹೋದರನ ಮಗನೂ ಮಂತ್ರಿಯೂ ಆದ ಆ ಕೂಟನಾಯಕನು ಇಮ್ಮಡಿ ದೇವರಾಯನ ಮಗನನ್ನು ಕೊಂದು, ಅರಮನೆಗೆ ತೆರಳಿ, ಅಲ್ಲಿ ರಾಜನು ತನ್ನ ಅರಸಿಯರೊಡನೆ ಚೆಲ್ಲಾಟವಾಡುತ್ತದ್ದ ಕಾಲಕ್ಕೆ ಅಲ್ಲಿಗೆ ಬಂದನೆಂದೂ, ಅವನೊಡನೆ ಕೂಟನಾಯಕನು ವಿಷಾಕ್ತ ಖಡ್ಗದಾರಿಯಾಗಿ ದ್ವಂದ್ವಯುದ್ಧಕ್ಕಿಳಿದನೆಂದೂ, ರಾಜನು ನಾನಾ ಯುಕ್ತಿಗಳಿಂದ ವಿರೋಧಿಯ ಅಘಾತಗಳನ್ನು ತಪ್ಪಿಸಿಕೊಂಡನೆಂದೂ, ಕೊನೆಗೆ ಅವನನ್ನು ಹೊಡೆದಿಕ್ಕಿದನೆಂದೂ ನ್ಯೂನಿಸನ ಹೇಳಿಕೆ. ಇವೆರಡು ಕಥೆಗಳಲ್ಲಿ ಯಥಾರ್ಥವಾದುದು ಯಾವುದೋ ತಿಳಿಯದು; ಆದರೆ ಇಮ್ಮಡಿ ದೇವರಾಯನ ಸಮಯಸ್ಫೂರ್ತಿಯನ್ನು ಇವೆರಡೂ ಹೇಳಿಕೆಗಳು ಸಮರ್ಥಿಸುತ್ತವೆ.

ಇಮ್ಮಡಿ ದೇವರಾಯನ ಕಾಲದಲ್ಲಿ ಸಾಹಿತ್ಯ ಕಲೆಗಳಿಗೆ ದೊರೆತ ಉದಾರಾಶ್ರಯವೂ ದೇವಾಲಯಗಳಿಗೂ ಮತೀಯ ಸಂಸ್ಥೆಗಳಿಗೂ ಅವನು ನೀಡಿದ ಉಂಬಳಿಗಳೂ ಪ್ರತಿಭಾಶಾಲಿಗಳಿಗೆ ಅವನು ನೀಡಿದ ದಾನವಿಶೇಷಗಳೂ, ತತ್ತ್ವಜ್ಞಾನ ಚಿಂತನೆಯಲ್ಲಿ ಅವನಿಗಿದ್ದ ಅಪಾರಾಸಕ್ತಿಯೂ ಅವನ ಸಾಂಸ್ಕೃತಿಕ ಜೀವನ ಮಹಿಮೆಗೆ ದ್ಯೋತಕವಾಗಿವೆ. ಇಮ್ಮಡಿ ದೇವರಾಯನ ಕಾಲವು ತೀವ್ರವಾದ ಸಾಹಿತ್ಯ ನಿರ್ಮಾಣದ ಕಾಲ. ವಿದ್ವಾಂಸರಿಗೂ ಕವಿಗಳಿಗೂ ತತ್ತ್ವಮಿಮಾಂಸಕರಿಗೂ ದಾರ್ಶನಿಕರಿಗೂ ಅವನ ಆಸ್ಥಾನವು ಸದಾ ಮುಕ್ತದ್ವಾರವಾಗಿತ್ತು. ಅಲ್ಲಿ ತಮ್ಮ ವಿದ್ವತ್ತೆಯನ್ನೂ ಕಾವ್ಯ ರಚನಾ ವೈದಗ್ಧ್ಯವನ್ನೂ ಪ್ರಕಟಪಡಿಸಿ ತಮ್ಮ ಶ್ರೇಷ್ಠತೆಯನ್ನು ಸುಸ್ಥಾಪಿಸಿಕೊಳ್ಳಲು ಅವರು ಸದಾ ಹೆಣಗುತ್ತಿದ್ದರು. ಆಸ್ಥಾನದಲ್ಲಿ ನಡೆಯುವ ವಾಕ್ಯಾರ್ಥ ಸಂಧರ್ಭಗಳಲ್ಲಿ ಸ್ವತಃ ರಾಜನೇ ಮಧ್ಯಸ್ಥನಾಗಿ, ವಾದಗಳಲ್ಲಿ ಅವರವರ ಯೋಗ್ಯತೆಯನ್ನು ನಿರ್ಣಯಿಸುತ್ತಿದ್ದನು. ತೆಲಗು ಕವಿಯಾದ ಶ್ರೀನಾಥನು ಇಮ್ಮಡಿ ದೇವರಾಯನ ಆಸ್ಥಾನ ಕವಿಯಾದ ದಂಡದಿಂಡಿಗನನ್ನು ವಾದದಲ್ಲಿ ಜಯಿಸಿದುದು ಪ್ರಸಿದ್ಧ ಘಟನೆಯಾಗಿತ್ತು. ವಾದದಲ್ಲಿ ಗೆದ್ದ ತೆಲಗು ಕವಿಯನ್ನು ಇಮ್ಮಡಿ ದೇವರಾಯನು ಸಮಸ್ತ ವಿದ್ವಜ್ಜನರ ಸಮ್ಮುಖದಲ್ಲಿ, ಸುಪ್ರಸಿದ್ಧ ಮುಕ್ತಾಭವನದಲ್ಲಿ[30], ಸ್ವರ್ಣತಟಾಕಗಳಲ್ಲಿ ಸ್ನಾನಮಾಡಿಸುವಂತೆ ಆಜ್ಞಾಪಿಸಿದನಂತೆ. ಕನ್ನಡ ಕವಿಗಳಾದ ಕುಮಾರ ವ್ಯಾಸನೂ ಚಾಮರಸನೂ ಇಮ್ಮಡಿ ದೇವರಾಯನ ಆಸ್ಥಾನದಲ್ಲಿದ್ದ ಕವಿಗಳು. ಇವರಿಬ್ಬರು ಕವಿಶ್ರೇಷ್ಠರ ಕೃತಿಗಳನ್ನು ಪರೀಕ್ಷೆಯ ಒರೆಗಲ್ಲಿನಲ್ಲಿ ಪರೀಕ್ಷಿಸಿ ನೋಡಿದ ಇಮ್ಮಡಿ ದೇವರಾಯನು ಅವರೊಳಗೆ ಚಾಮರಸನೇ ಶ್ರೇಷ್ಠ ಕವಿಯೆಂದು

ತೀರ್ಮಾನಿಸಿದನಂತೆ. ಇಮ್ಮಡಿ ದೇವರಾಯನೇ ಸ್ವತಃ ಉದ್ದಾಮ ಕವಿ; 'ಮಹಾನಾಟಕ ಸುಧಾನಿಧಿ' ಯನ್ನೂ ಬಾದರಾಯಣನ ಬ್ರಹ್ಮಸೂತ್ರಗಳ ಮೇಲೆ ಒಂದು ವ್ಯಕ್ತಿಯನ್ನು ಸಂಸ್ಕೃತದಲ್ಲಿ ರಚಿಸಿದ ಪಂಡಿತಶ್ರೇಷ್ಠ. ಹೀಗೆ ಇಮ್ಮಡಿ ದೇವರಾಯನು ಸ್ವತಃ ಸಾಹಿತ್ಯ ವಿದ್ಯಾಪಾರಂಗತನಾಗಿ, ವಿದ್ವಜ್ಜನರಿಗೆ ಯಥೇಚ್ಛ ಪುರಸ್ಕಾರಗಳನ್ನು ನೀಡಿದ ಪಂಡಿತ ಪಕ್ಷಪಾತಿಯಾದುದರಿಂದ, ಅವನ ಆಸ್ಥಾನಕ್ಕೆ ನಾನಾ ಕಡೆಗಳಿಂದ ವಿದ್ವತ್ಕವಿಗಳು ಅಪಾರ ಸಂಖ್ಯೆಯಲ್ಲಿ ಬರುತ್ತಿದ್ದರು. ಇತರ ರಾಜರ ಆಶ್ರಯದಲ್ಲಿದ್ದ ಕವಿಗಳು ನಾನಾ ದೇಶಗಳಿಗೆ ಹೋಗಿ ಅಲ್ಲಲ್ಲಿ ತಾವು ಪಡೆದ ಅನುಭವವನ್ನು ತಮ್ಮ ಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಅವರ ಕೃತಿಗಳಲ್ಲಿ ಅಂದಿನ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳು ಸ್ಪಷ್ಟವಾಗಿ ಚಿತ್ರಿತವಾಗಿವೆ. ಇಮ್ಮಡಿ ದೇವರಾಯನು ಯಾವ ಒಂದೇ ಪಂಥದ ಕವಿಗಳಿಗಾಗಲಿ, ಯಾವ ಒಂದೇ ಭಾಷೆಯ ಕವಿಗಳಿಗಾಗಲಿ, ಪಕ್ಷಪಾತ ತೋರಿದವನಲ್ಲ. ಇದರಿಂದ ಅವನ ಕಲಾಪ್ರೀತಿಯೂ, ಕಲಾಶಕ್ತಿ ಎಲ್ಲಿ ಯಾರಲ್ಲಿದ್ದರೂ ಅದಕ್ಕೆ ಮಾನ್ಯತೆ ನೀಡುವ ಅವನ ಹೃದಯವೈಶಾಲ್ಯವೂ ವ್ಯಕ್ತವಾಗುತ್ತವೆ[31].

ಇಮ್ಮಡಿ ದೇವರಾಯನ ಔದಾರ್ಯಕ್ಕೆ ಮಿತಿಯೇ ಇರಲಿಲ್ಲ. ಪ್ರಜೆಗಳ ಕುಂದು ಕೊರತೆಗಳನ್ನೂ ಕಷ್ಟನಿಷ್ಠುರಗಳನ್ನೂ ವಿಚಾರಿಸುವುದಕ್ಕೆ ಅವನು ಸದಾ ಸಿದ್ಧನಾಗಿದ್ದನು; ಕಷ್ಟಕಾಲದಲ್ಲಿ ಜನರಿಗೆ ಕರವಿಮುಕ್ತಿ ನೀಡುವುದಕ್ಕೆ ಅವನು ಎಂದೂ ಹಿಂದೂ ಮುಂದೂ ನೋಡಿದವನಲ್ಲ. ಇದರಿಂದ ಪ್ರಜೆಗಳ ಬಗೆಗೆ ಅವನಿಗಿದ್ದ ಅನುಕಂಪ ಮಾತ್ರವಲ್ಲ, ಅವನ ರಾಜಕೀಯ ದೂರದೃಷ್ಟಿಯೂ ಸೂಚಿತವಾಗುವುದು. ಇಮ್ಮಡಿ ದೇವರಾಯನು ತುಲಾಪುರುಷ ದಾನಗಳನ್ನು

ಮಾಡಿದವನೆಂದು, ಎಂದರೆ ತನ್ನನ್ನು ಚಿನ್ನದಲ್ಲಿ ತೂಗಿ, ಅಷ್ಟು ಚಿನ್ನವನ್ನೂ ಅಮೂಲ್ಯ ರತ್ನಾದಿಗಳನ್ನೂ ಬ್ರಾಹ್ಮಣರಿಗೂ ಬಡಬಗ್ಗರಿಗೂ ದಾನ ಮಾಡಿದವನೆಂದು ತೋರುವುದು. ಒಮ್ಮೆ ಇಮ್ಮಡಿ ದೇವರಾಯನು ಸ್ವರ್ಣಖಚಿತವಾದ ದನವೊಂದನ್ನು ಚಿನ್ನಾಭರಣಗಳಿಂದ ಅಲಂಕರಿಸಿ, ಅದನ್ನೂ ಒಂದು ಅಗ್ರಹಾರವನ್ನೂ ಬ್ರಾಹ್ಮಣರಿಗೆ ದಾನಕೊಟ್ಟನಂತೆ. ಈ ಘಟನೆಯು ಕ್ರಿ.ಶ. 1430ರ ಶಾಸನವೊಂದರಲ್ಲಿ ನಿರೂಪಿತವಾಗಿದೆ. ವಿಶೇಷ ಸಂದರ್ಭಗಳಲ್ಲಿ ಇಮ್ಮಡಿ ದೇವರಾಯನು ತನ್ನ ಮಂತ್ರಿಗಳಿಗೂ ಉನ್ನತಾಧಿಕಾರಿಗಳಿಗೂ ವಿಶಿಷ್ಟ ಸಂಭಾವನೆಗಳನ್ನು ಅನುಗ್ರಹಿಸುತ್ತಿದ್ದನು. ಅವನ ಆಸ್ಥಾನಕ್ಕೆ ಬಂದ ಫಾರಸೀ ರಾಯಭಾರಿಯಾದ ಅಬ್ದುಲ್ ರಝಾಕ್‌ನು ಆಸ್ಥಾನವನ್ನು ಬಿಟ್ಟು ಹೊರಡುವ ಕಾಲಕ್ಕೆ, ಇಮ್ಮಡಿ ದೇವರಾಯನು ಅವನ ಬಳಿಗೆ ಬಂದು, ತನ್ನ ಕೆಲವರು ಅಧಿಕಾರಿಗಳ ಕರ್ತವ್ಯಲೋಪದ ಫಲವಾಗಿ ಸಂಭವಿಸಿರ ಬಹುದಾದ ತೊಂದರೆಗಳನ್ನು ಮನ್ನಿಸಬೇಕೆಂದು ವಿನಂತಿಸಿಕೊಂಡನಂತೆ.

ಇಮ್ಮಡಿ ದೇವರಾಯನ ಕಾಲದಲ್ಲಿ ಕನ್ನಡ, ತೆಲಗು, ತಮಿಳು ಮೊದಲಾದ ದೇಶಭಾಷೆಗಳು ಅಭಿವೃದ್ಧಿಗೆ ಬಂದವು, ಕನ್ನಡ ಭಾಷೆಗೆ ವಿಶೇಷ ಪ್ರೋತ್ಸಾಹಲಭಿಸಿತು. ಇಮ್ಮಡಿ ದೇವರಾಯನು ದೇಶಭಾಷೆಗಳಿಗೆ ಪ್ರೋತ್ಸಾಹ ಕೊಟ್ಟಿದ್ದರೂ ಸಂಸ್ಕೃತ ಸಾಹಿತ್ಯಾಭಿವೃದ್ಧಿಯನ್ನು ಕಡೆಗಣಿಸಿರಲಿಲ್ಲ. ಅವನ ರಾಜ್ಯಭಾರ ಕಾಲದಲ್ಲಿ ದೇವಾಲಯ ನಿರ್ಮಾಣಕ್ಕೂ ಉತ್ತೇಜನ ದೊರೆತಿದ್ದಿತು[32].

ಇಮ್ಮಡಿ ದೇವರಾಯನ ಮತ ವಿಚಾರವು ಕುತೂಹಲದ ವಿಷಯವಾಗಿದೆ. ಕನ್ನಡ ಕವಿ ಚಾಮರಸನ "ಪ್ರಭುಲಿಂಗ ಲೀಲೆ"ಯು ಇಮ್ಮಡಿ ದೇವರಾಯನು

ವೀರಶೈವನಾಗಿ ಮತಾಂತರ ಹೊಂದಿದವನೆಂಬ ಊಹೆಗೆ ಅವಕಾಶ ಕೊಟ್ಟಿದೆ. ಅವನ ರಾಜ್ಯಭಾರ ಕಾಲವು ವೀರಶೈವ ಮತದ ಪ್ರಾದುರ್ಭಾವ ಕಾಲವಾಗಿದ್ದಿತು. ಇಮ್ಮಡಿ ದೇವರಾಯನು ಕ್ರಿ.ಶ. 1426ರಲ್ಲಿ ತನ್ನ ಅರಮನೆಗೆ ಸಮಿಪದಲ್ಲಿ ಜೈನ ಬಸದಿಯೊಂದನ್ನು ಕಟ್ಟಿಸಿದನು. ಇದರಿಂದ, ಅವನು ಜೈನನಂದೇ ಕೆಲವರು ತರ್ಕಿಸಿದ್ದಾರೆ. ಇಮ್ಮಡಿ ದೇವರಾಯನು ವಾಸ್ತವವಾಗಿ ಪಾಶುಪತ ಪಂಥದ ಶೈವಮತಕ್ಕೆ ಸೇರಿದ್ದನು; ಉತ್ಕಟ ಶೈವನಾದರೂ, ಅವನು ಪರಮತ ಸಹಿಷ್ಣುವಾದ ಸಮನ್ವಯವಾದಿ. ಒಂದನೆಯ ಹರಿಹರನ ಮತ್ತು ಅವನ ಉತ್ತರಾಧಿಕಾರಿಗಳ ಗುರುವಾಗಿದ್ದ ಕಾಶಿವಿಲಾಸ ಕ್ರಿಯಾಶಕ್ತಿಯೂ ಪಾಶುಪತ ಪಂಥದವನಾಗಿದ್ದನು[33]. ಅವನ ದೃಷ್ಟಿಯಲ್ಲಿ ಮಾನವರ ಉದ್ಧಾರವೇ ಸಕಲ ಧರ್ಮಗಳ ಮೂಲೋದ್ದೇಶ. ಇಂತಹ ಉದಾತ್ತ ದೃಷ್ಟಿಯಿಂದ ಅವನೂ ರಾಜಕುಟುಂಬದ ಇತರರೂ ಭಿನ್ನ ಭಿನ್ನ ಧಾರ್ಮಿಕ ಸಂಸ್ಥೆಗಳಿಗೂ ದೇವಾಲಯಗಳಿಗೂ ಉಂಬಳಿಕೊಟ್ಟ ಹಲವಾರು ಶಿಲಾಶಾಸನಗಳೂ ತಾಮ್ರ ಫಲಕಗಳೂ ಸಿಕ್ಕಿವೆ. ಅದ್ವೈತ ಮತ ಸ್ಥಾಪನಾಚಾರ್ಯರಾದ ಶಂಕರಾಚಾರ್ಯರು ಸ್ಥಾಪಿಸಿದ ಶೃಂಗೇರಿ ಮಠಕ್ಕೆ ಇಮ್ಮಡಿ ದೇವರಾಯನು ತನ್ನ ಪೂರ್ವಜರಂತೆ ಕಾಣಿಕೆ ಸಲ್ಲಿಸುತ್ತಿದ್ದನು. ವಿಜಯನಗರ ರಾಜ್ಯಸ್ಥಾಪನೆಯ ಪ್ರಾರಂಭ ಕಾಲದಲ್ಲಿ ಸಂಗಮ ವಂಶಕ್ಕೂ ಶೃಂಗೇರಿ ಮಠಕ್ಕೂ ನಿಕಟ ಸಂಬಂಧವಿದ್ದಿತು. ವಿಜಯನಗರದರಸರಲ್ಲಿ ಮಹ್ಮದೀಯರ ಬಗೆಗೂ ಪರಮತ ಸಹಿಷ್ಣುತೆಯನ್ನು ಮೊತ್ತಮೊದಲು ತೋರ್ಪಡಿಸಿದವನು ಇಮ್ಮಡಿ ದೇವರಾಯನೇ ಸರಿ. ಈ ನೀತಿಯ ರಾಜಕೀಯ ಮಹತ್ತ್ವವೇನೇ ಇರಲಿ; ಮಹಮ್ಮದೀಯರು ತಮ್ಮ ಧರ್ಮ ನಿಷ್ಠೆಗೆ ಭಂಗತಾರದೆ ತನಗೂ

ವಂದಿಸಲಾಗುವಂತೆ ಇಮ್ಮಡಿ ದೇವರಾಯನು ರಾಜ ಸಿಂಹಾಸನದ ಮುಂಗಡೆಯಲ್ಲಿ ಕುರಾನ್ ಗ್ರಂಥವನ್ನು ಇರಿಸಿದ್ದನೆಂಬ ವಿಚಾರವನ್ನು ಹಿಂದೆಯೇ ಹೇಳಿದೆಯಷ್ಟೆ. ಇದರಿಂದ ಮಹಮ್ಮದೀಯರ ಮತ ಪ್ರವಣತೆಗೆ ಇಮ್ಮಡಿ ದೇವರಾಯನು ಎಷ್ಟೊಂದು ಗೌರವ ನೀಡಿದ್ದನೆಂದು ಸೂಚಿತವಾಗುವುದು. ಇದೂ ಅಲ್ಲದೆ ಅವನು ರಾಜಧಾನಿಯಲ್ಲಿ ಒಂದು ಮಸೀದಿಯನ್ನು ನಿರ್ಮಿಸಿ, ರಾಜ್ಯಾಧಿಕಾರಿಗಳಿಂದಲೇ ಆಗಲಿ ಪ್ರಜಾವರ್ಗದವರಿಂದಲೇ ಆಗಲಿ, ಮಹಮ್ಮದೀಯರ ಧರ್ಮಾಚರಣೆಗೆ ಯಾವ ಬಗೆಯಲ್ಲೂ ಆತಂಕವುಂಟಾಗತಕ್ಕುದಲ್ಲವೆಂದು ವಿಧಿಸಿದ್ದನು. ಧರ್ಮವಿಚಾರದಲ್ಲಿ ಇಮ್ಮಡಿ ದೇವರಾಯನು ಎಷ್ಟೊಂದು ಉದಾರನಾಗಿದ್ದನೆಂಬುದಕ್ಕೂ ಅವನ ವಿಶಾಲದೃಷ್ಟಿಗೂ ಇದಕ್ಕಿಂತ ಹೆಚ್ಚಿನ ನಿದರ್ಶನಬೇಕೇ? ಹಿಂದೂ ಜನರೂ ಮಹಮ್ಮದೀಯರೂ ಶಾಂತಿಯಿಂದ ಸೌಭ್ರಾತ್ರ ಜೀವನ ನಡೆಸುತ್ತ, ತಮ್ಮ ತಮ್ಮ ಮತಧರ್ಮಗಳಲ್ಲಿ ಪರಸ್ಪರ ದ್ವೇಷಮಾತ್ಸರ್ಯಗಳಿಗೆ ಎಡೆಯಿಲ್ಲವೆಂದು ಅರಿತುಕೊಂಡಿದ್ದರು. ಇಮ್ಮಡಿ ದೇವರಾಯನ ಈ ಮತಸಾಮರಸ್ಯವು ಅಂದಿನ ದಕ್ಷಿಣ ಭಾರತ ಸಮಾಜದಲ್ಲಿ ಅಪಾರ ಪ್ರಭಾವ ಬೀರಿದ್ದಿತು[34].

ಇಮ್ಮಡಿ ದೇವರಾಯನ ರಾಜಕೀಯ ಹಾಗೂ ಸಾಮಾಜಿಕ ಕಲ್ಪನೆಗಳಿಗೆ ಪರಂಪರಾಗತ ತತ್ತ್ವಗಳೇ ಆಧಾರವಾಗಿದ್ದುವು. ಪ್ರಾಚೀನ ಧರ್ಮಶಾಸ್ತ್ರಕಾರರು ನಿರೂಪಿಸಿದ ತತ್ತ್ವಗಳನ್ನು ಇಮ್ಮಡಿ ದೇವರಾಯನು ಸರ್ವಸಾಧಾರಣವಾಗಿ ಅನುಮೋದಿಸಿದ್ದನು. ರಾಜಸ್ವ ಪ್ರಶಾಸನ ವಿಚಾರದಲ್ಲಂತೂ ಇಮ್ಮಡಿ ದೇವರಾಯನು ಹಿಂದೂ ಧರ್ಮಶಾಸ್ತ್ರಕಾರರ ತತ್ತ್ವಗಳನ್ನೇ ಪೂರ್ಣವಾಗಿ ಅನುಷ್ಠಾನಕ್ಕೆ

ತಂದವನಾಗಿದ್ದನು. ಕರ ಸಂಗ್ರಹಣವು ಪ್ರಜಾವರ್ಗದ ಆರ್ಥಿಕ ಸ್ಥಿತಿಗೆ ಅನುಗುಣವಗಿದ್ದಿತು. ಕ್ಷಾಮ, ನೆರೆಯ ಹಾವಳಿ, ಮೊದಲಾದ ವಿಪತ್ತುಗಳಿಂದ ಜನರು ಕಷ್ಟನಷ್ಟಗಳಿಗೆ ಗುರಿಯಾದ ಕಾಲದಲ್ಲಿ, ಜನರ ಪರಿಸ್ಥಿತಿಯನ್ನು ರಾಜನೇ ಸ್ವತಃ ಪರಿಶೀಲಿಸಿ ಸೂಕ್ತ ಸಂದರ್ಭಗಳಲ್ಲಿ ತೆರಿಗೆಯನ್ನು ಮಾಫಿ ಮಾಡುತ್ತಿದ್ದನು[೩೫].

ಹಿಂದೂ ಧರ್ಮದ ಆಳ್ವೇರಿಯಾದ ವಿಜಯನಗರ ಸಾಮ್ರಾಜ್ಯವು ಆಗ ತಾನೇ ಪ್ರಾದುರ್ಭಾವಕ್ಕೆ ಬರತೊಡಗಿದ್ದಿತು. ಆ ನೂತನ ರಾಜ್ಯದ ಸ್ಥಿರೀಕರಣ ಹಾಗೂ ವಿಸ್ತಾರಣ ನೀತಿಯು ಕಾರ್ಯರೂಪಕ್ಕೆ ಬಂದುದು ಇಮ್ಮಡಿ ದೇವರಾಯನ ಕಾಲದಲ್ಲಿ. ಅದುವೇ ಅವನ ರಾಜ್ಯಭಾರದ ರಾಜಕೀಯ ಮಹತ್ತ್ವ. ಬಹಮನಿ ರಾಜ್ಯದ ಪತನಕ್ಕೆ ಅಂತರಿಕ ಕಲಹ ಕೂಟಯುಕ್ತಗಳೇ ಮೂಲಕಾರಣವೆಂಬುದೇನೋ ನಿಜ; ಆದರೆ, ಬಹಮನಿ ರಾಜ್ಯ – ಆಚಿಧ್ರ ರಾಜ್ಯಗಳೊಳಗಿನ ಸ್ನೇಹಬಾಂಧವ್ಯವನ್ನು ಒಡೆದು ಅವುಗಳನ್ನು ಬೇರ್ಪಡಿಸಿದ ಇಮ್ಮಡಿ ದೇವರಾಯನ ಭೇದ ನೀತಿಯೂ ಬಹಮನಿಯ ಶಕ್ತಿ ಕುಂದುವುದಕ್ಕೆ ಬಹುಮಟ್ಟಿಗೆ ನೆರವಾಯಿತೆಂಬ ಸತ್ಯಾಂಶವನ್ನು ಅಲ್ಲಗಳೆಯುವಂತಿಲ್ಲ. ಬಹಮನಿ ಅರಸರು ಇಮ್ಮಡಿ ದೇವರಾಯನ ಕಾಲದಲ್ಲಿ ಓಢ್ರರಾಜನಾದ ಗಜಪತಿಯ ಸಹಾಯದಿಂದ ವಿಜಯನಗರವನ್ನು ಜಯಿಸಲು ನಡೆಸಿದ ಪ್ರಯತ್ನವೂ ವಿಫಲವಾಯಿತೆಂದ ಮೇಲೆ, ಆ ಕಾಲದಲ್ಲಿ ಬಹಮನಿ ರಾಜ್ಯವು ಎಷ್ಟುಮಟ್ಟಿಗೆ ನಿರ್ವೀರ್ಯವಾಗಿದ್ದಿತೆಂದು ಬೇರೆ ಹೇಳಬೇಕಾಗಿಲ್ಲ. ಕೊಂಡವೀಡಿನ ಆ ಸಮರ್ಥ ಪೆದ್ದಕೋಮಟಿಯ ಮರಣಾನಂತರ ವಿಜಯನಗರದ ಈಶಾನ್ಯ ಸೀಮೆಯನ್ನು ಭದ್ರಪಡಿಸಿದವನು ಇಮ್ಮಡಿ ದೇವರಾಯ. ಸಂಗಮ ವಂಶದ ಚರಿತ್ರೆಯಲ್ಲಿ ಇದು

ಹಿಂದೆಂದೂ ಸಾಧ್ಯವಾಗಿರಲಿಲ್ಲ. ಆ ಕಾಲದಲ್ಲಿ ಪೆನುಕೊಂಡ, ವಿಬುಕೊಂಡ, ಕೊಂಡವೀಡು, ರಾಜಮಹೇಂದ್ರಿ ಮೊದಲಾದ ಹಲವಾರು ಚಿಕ್ಕಪುಟ್ಟ ಸ್ವತಂತ್ರ್ಯ ರಾಜ್ಯಗಳು ತರೆಯೆತ್ತ ತೊಡಗಿದುವು. ಬಹಮನಿ ಅರಸರಿಗೂ ಮಹತ್ತ್ವಾಕಾಂಕ್ಷಿಗಳಾದ ಗಜಪತಿ ವಂಶೀಯರಿಗೂ ತಮ್ಮ ಕಾರ್ಯಸಾಧನೆಗೆ ಈ ಪರಿಸ್ಥಿತಿ ಅನುಕೂಲವಾಗಿದ್ದಿತು. ವಿಜಯನಗರದ ಮೂಡಣ ಗಡಿಯು ಅಂಕಿತವಾಗಿದ್ದಿತು. ವಿನುಕೊಂಡ ಮೊದಲಾದ ಪ್ರಾಂತಗಳಲ್ಲಿ ಇಮ್ಮಡಿ ದೇವರಾಯನು ತನ್ನ ಮಾಂಡಲಿಕ ಪ್ರತಿನಿಧಿಗಳನ್ನಿರಿಸಿ, ಆ ಪ್ರಾಂತಗಳೆಲ್ಲವನ್ನೂ ವಿಜಯನಗರದ ಪ್ರಭುತ್ವಕ್ಕೊಳಪಡಿಸಿದುದು ಅವನ ರಾಜನೀತಿ ವಿಚಕ್ಷಣತೆಗೆ ದ್ಯೋತಕವಾಗಿದೆ. ಅದೂ ಅಲ್ಲದೆ ಇಮ್ಮಡಿ ದೇವರಾಯನು ಲಕ್ಕಣ್ಣ ದಂಡನಾಯಕನೆಂಬ ಸೇನಾನಿಯ ನೆರವಿನಿಂದ ವಿಜಯನಗರ ಸಾಮ್ರಾಜ್ಯದ ದಕ್ಷಿಣ ಸೀಮೆಯನ್ನು ಸಿಂಹಳ ದ್ವೀಪದವರೆಗೂ ವಿಸ್ತರಿಸಿದುದಲ್ಲದೆ ಕೇರಳ ರಾಜ್ಯವನ್ನೂ ತನ್ನ ಪಾದಕ್ಕೆರಗಿಸಿ, ಕ್ವಿಲಾನ್ ನಗರದ ರಾಜನಿಂದಲೂ ಆ ಕಡೆಯ ಬೇರೆ ಕೆಲವರು ಆಧಿಪತಿಗಳಿಂದಲೂ ಪೊಗದಿ ಸೆಳೆದುಕೊಂಡನು. ಹೀಗಾಗಿ ವಿಜಯನಗರ ಸಾಮ್ರಾಜ್ಯವು ಇಮ್ಮಡಿ ದೇವರಾಯನ ಕಾಲದಲ್ಲಿ ಅಪಾರವಾಗಿ ವಿಸ್ತರಿಸಿ ಬಲಾಢ್ಯ ಚಕ್ರಾಧಿಪತ್ಯವಾಗಿ ರೂಪಗೊಳ್ಳಲು ಸಾಧ್ಯವಾಯಿತು[36]. ದಕ್ಷಿಣದಲ್ಲಿ ಪ್ರಬಲವಾದ ನೌಕಾಸೇನೆಯು ಸದಾ ಸನ್ನದ್ಧವಾಗಿ ಸಾಮ್ರಾಜ್ಯವನ್ನು ರಕ್ಷಿಸುತ್ತಿದ್ದಿತು. ಹೀಗೆ ಇಮ್ಮಡಿ ದೇವರಾಯನು ಅಂದಿನ ಕಾಲದಲ್ಲಿ ಸಮಗ್ರ ದಕ್ಷಿಣ ಭಾರತದ ಸಾರ್ವಭೌಮನಾಗಿ ಕೀರ್ತಿಶಾಲಿಯಾದನು. ಪಾರಸಿಕ ರಾಯಭಾರಿ ಅಬ್ದುಲ್ ರಝಾಕ್‌ನೇ ಹೇಳಿದಂತೆ ಇಮ್ಮಡಿ ದೇವರಾಯನ ಸಾಮ್ರಾಜ್ಯವು ‘ಸಿಂಹದ್ವೀಪದ

ಸೀಮೆಗಳಿಂದ ಕಲಬುರ್ಗಿ'ಯ ವರೆಗೂ ವಂಗದೇಶದಿಂದ ಮಲಬಾರಿನ ವರೆಗೂ' ವ್ಯಾಪಿಸಿದ ವಿಸ್ತಾರ ಸಾಮ್ರಾಜ್ಯವಾಗಿದ್ದಿತು.

ಸಾಹಿತ್ಯಕಲೆಗಳಿಗೆ ಉತ್ತೇಜನ ಕೊಡುವ ವಿಚಾರದಲ್ಲಿ ಇಮ್ಮಡಿ ದೇವರಾಯನೂ ಕೃಷ್ಣದೇವರಾಯಮೂ ಪರಸ್ಪರ ಸ್ಪರ್ಧೆ ಹೂಡಿದ್ದರೇನೋ ಎಂಬಂತೆ ತೋರುವುದು. ಇವರಿಬ್ಬರೂ ಕೇವಲ ಸಾಹಿತ್ಯ ಪೋಷಕರಷ್ಟೇ ಅಲ್ಲ, ತಾವೇ ಸ್ವತಃ ವಿದ್ವತ್ಕವಿಗಳಾಗಿದ್ದರು. ಅವರ ಉದ್ದಾಮ ವಿದ್ವತ್ತೆಯಿಂದಲೂ, ಪರಮತ ಸಹಿಷ್ಣುತೆಯಿಂದಲೂ ವಿಜಯನಗರದ ಆಸ್ಥಾನಕ್ಕೆ ದೂರ ದೂರ ದೇಶಗಳ ಕವಿಗಳೂ, ವಿದ್ವಾಂಸರೂ, ದಾರ್ಶನಿಕರೂ ಆಕರ್ಷಿತರಾಗಿದ್ದರು. ಕೃಷ್ಣದೇವರಾಯನ ಕಾಲವು ತೆಲಗು ಸಾಹಿತ್ಯಕ್ಕೆ ಸ್ವರ್ಣಯುಗವಾಗಿದ್ದಿತು. ಇಮ್ಮಡಿ ದೇವರಾಯನ ಕಾಲದಲ್ಲಾದರೋ ವಿಜಯನಗರದ ಇತಿಹಾಸದಲ್ಲಿ ಹಿಂದೆಂದೂ ಇಲ್ಲದಷ್ಟು ಕನ್ನಡ ಸಾಹಿತ್ಯ ಸೃಷ್ಟಿಯಾಗಿದ್ದಿತು. ವಾಸ್ತುನಿರ್ಮಾಣಕ್ಕೂ ಸಂಗೀತ, ಚಿತ್ರಕಲೆ ಮುಂತಾದ ಲಲಿತ ಕಲೆಗಳಿಗೂ ಇವರಿಬ್ಬರು ವಿಜಯನಗರ ಪ್ರಭುಗಳೂ ಉತ್ತೇಜನ ನೀಡಿದ್ದರು. ಆದರೆ ಕೃಷ್ಣದೇವರಾಯನ ಕಾಲಕ್ಕಿಂತ ಇಮ್ಮಡಿ ದೇವರಾಯನ ಕಾಲವೇ ಹೆಚ್ಚು ಶಾಂತಿಪೂರ್ಣವಾಗಿದ್ದಿತು. ಹಜಾರ ರಾಮದೇವಾಲಯದ ಹಾಗೂ ಹಂಪೆಯ ವಿಠ್ಠಲದೇವಾಲಯದ ನಿರ್ಮಾಣಕಾರ್ಯವು ಪ್ರಾಯಶಃ ಇಮ್ಮಡಿ ದೇವರಾಯನ ಕಾಲದಲ್ಲೇ ಪ್ರಾರಂಭವಾಗಿದ್ದಿರಬೇಕು. ಹಜಾರ ರಾಮದೇವಾಲಯದ ವರ್ಣಚಿತ್ರಗಳೂ ಅರಮನೆಯೊಳಗಿನ ಚಿತ್ರ ವಿನ್ಯಾಸಗಳೂ ಅಂದಿನ ಕಲಾಭಿರುಚಿಯ ಸಂಕೇತಗಳಾಗಿವೆ[37].

**ಮಲ್ಲಿಕಾರ್ಜುನ (ಕ್ರಿ.ಶ. 1446 – 1465):**

ಇಮ್ಮಡಿ ದೇವರಾಯನಿಗೆ ರಾಣಿ ಪೊನ್ನಾಲದೇವಿಯಲ್ಲಿ ಜನಿಸಿದ ಮಲ್ಲಿಕಾರ್ಜುನ ತಂದೆಯ ಮರಣಾನಂತರ ವಿಜಯನಗರದ ಪಟ್ಟಕ್ಕೇರಿದನು. ಮಲ್ಲಿಕಾರ್ಜುನನಿಗೆ ಇಮ್ಮಡಿ ವಿಜಯರಾಯ, ಇಮ್ಮಡಿ ಪ್ರೌಢದೇವ ಮಹಾರಾಯ, ದೇವರಾಯ ಮಹಾರಾಯ, ಎಂಬ ಹೆಸರುಗಳಿದ್ದವು. ಚರಿತ್ರ ನಿರೂಪಣ ದೃಷ್ಟಿಯಿಂದ ಅವನನ್ನು ಮುಮ್ಮಡಿ ದೇವರಾಯ ಎಂದು ಕರೆಯಬಹುದಾಗಿದೆ. ತಂದೆಯಂತೆ ಅವನಿಗೂ 'ಗಜಬೇಂಟೆಕಾರ' ಎಂಬ ಬಿರುದಿದ್ದಿತು.

ಆದರೆ ಮಲ್ಲಿಕಾರ್ಜುನನು ತಂದೆಯಂತೆ ಸಮರ್ಥನಾಗಿರಲಿಲ್ಲ. ಅವನ ಪಟ್ಟಾರೋಹಣವಾದಂದಿನಿಂದಲೇ ರಾಜ್ಯದಲ್ಲಿ ಒಡಕುಗಳು ತಲೆದೋರಿ, ರಾಜ್ಯದ ಅಧಃಪತನಕ್ಕೆ ಪ್ರಾರಂಭವಾಯಿತು. ಇವನ ಕಾಲದಲ್ಲಿ ಸಂಭವಿಸಿದ ಅವ್ಯವಸ್ಥೆ ಮುಂದೆ ನಲವತ್ತು ವರ್ಷಗಳ ತರುವಾಯ ಸಾಳುವ ನರಸಿಂಹನು ಪಟ್ಟಕ್ಕೆ ಬರುವವರೆಗೂ ಮುಂದುವರಿಯಿತು. ಈ ನಲವತ್ತು ವರ್ಷಗಳ ಅಂತರ ಕಾಲದಲ್ಲಿ ರಾಜಕುಟುಂಬವು ಬಗೆಬಗೆಯ ಅನಾಹುತಗಳಿಗೆ ಗುರಿಯಾಯಿತು. ಮಲ್ಲಿಕಾರ್ಜುನನು ಪಟ್ಟಾರೂಢನಾದೊಡನೆ, ಬಹಮನಿ ಸುಲ್ತಾನ ಅಲ್ಲಾವುದೀನನೂ, ಗಜಪತಿ ಕಪಿಲೇಶ್ವರನೂ ಒಟ್ಟಾಗಿ ಬಂದು ವಿಜಯನಗರ ರಾಜ್ಯವನ್ನು ಆಕ್ರಮಿಸಿದರು. ಆದರೆ ವಿಜಯನಗರವು ಈ ಆಕ್ರಮಣಕಾರರನ್ನು ಪ್ರಬಲವಾಗಿ ಪ್ರತಿಭಟಿಸಿ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿತು. ವೈರಿಗಳು ವಿಫಲರಾಗಿ ಹಿಂಜರಿದರು.

ಈ ಸಂಯುಕ್ತಾಭಿಯೋಗವು ಒಮ್ಮೆ ವಿಫಲವಾದರೂ ಕಪಿಲೇಶ್ವರನು ತನ್ನ ಪ್ರಯತ್ನವನ್ನು ಅಷ್ಟಕ್ಕೇ ಬಿಟ್ಟುಕೊಡದೆ, ಸುಮಾರು ಕ್ರಿ.ಶ. 1454ಕ್ಕೆ ಒಂದಿಷ್ಟು ಮುಂಚೆ ರಾಜಮಹೇಂದ್ರಿಯನ್ನು ಹಿಡಿದನು. ಈ ಸಾಹಸದಲ್ಲಿ ಅವನಿಗೆ ತೆಲಂಗಾಣದ ಕ್ಷತ್ರಿಯ ಹಾಗೂ ವೇಲಮನಾಯಕರು ಬೆಂಬಲ ನೀಡಿದ್ದರು. ಕಪಿಲೇಶ್ವರನು ಶ್ರೀಶೈಲದವರೆಗೂ ಮುಂದುವರಿದನು. ಅವನ ಮಗನಾದ ಹಂಬರನು ಮಹಮ್ಮದ ಗವಾನನನ್ನು ಸದೆಬಡಿದು, ತೆಲಂಗಾಣದಲ್ಲಿ ವಾರಂಗಲ್‌ವನ್ನು ವಶಪಡಿಸಿಕೊಂಡನು; ಆಮೇಲೆ ಕ್ರಿ.ಶ. 1461ರಲ್ಲಿ ಹುಮಾಯೂನನು ಮೃತನಾಗುತ್ತಲೂ, ಬಿದರೆಯನ್ನು ಹಿಡಿದನು. ಅದಾದ ಮೇಲೆ, ಕ್ರಿ.ಶ. 1463ರಲ್ಲಿ ಕಪಿಲೇಶ್ವರನು ನೆಲ್ಲೂರಿನಲ್ಲಿ ಉದಯಗಿರಿಯನ್ನೂ, ವಿಜಯನಗರ ಸಾಮ್ರಾಜ್ಯದ ದಕ್ಷಿಣ ಪ್ರಾಂತಗಳಾದ ಕಂಚಿ ಮತ್ತು ತಿರುಚಿರಾಪಳ್ಳಿ ನಗರಗಳನ್ನೂ ಹಿಡಿದನು[38].

ಈ ಕಾಲಕ್ಕೆ ಓಢ್ರ ಸಾಮ್ರಾಜ್ಯವು ಬಹಳ ಬೆಳೆದಿದ್ದಿತು. ಅದರ ಪ್ರಭಾವವು ಗಂಗಾನದಿ ಪ್ರಾಂತದಿಂದ ಕಾವೇರಿಯವರೆಗೂ ವಿಸ್ತರಿಸಿದ್ದಿತು. ಹೀಗಿದ್ದರೂ, ತೆಲಗು ಪ್ರಾಂತಗಳು ಕೆಲವರ್ಷಗಳ ಕಾಲದ ಓಢ್ರ ಸಾಮ್ರಾಜ್ಯದ ಭಾಗಗಳಾಗಿದ್ದುವು. ದಕ್ಷಿಣ ಪ್ರಾಂತಗಳಾದರೋ ವಿಜಯನಗರ ಸಾಮ್ರಾಜ್ಯದ ಕೈತಪ್ಪಿಹೋಗಿರಲಿಲ್ಲ. ಆದುದರಿಂದ ಓಢ್ರಾಭಿಯೋಗವು ಹಠಾತ್ತಾಗಿ ಬಂದು ತೀವ್ರವಾಗೆಯೇ ಹಿಂಜರಿಯಿತು. ಮಲ್ಲಿಕಾರ್ಜುನ ಸಾರ್ವಭೌಮನ ಸಾಮಂತರಾಗಿದ್ದ ಅತಿರಥ ಮಹಾರಥರು ವಿಜಯನಗರದ ಸಾರ್ವಭೌಮಾಧಿಕಾರವನ್ನು ರಕ್ಷಿಸಿಕೊಂಡರು. ತಿರುಚಿರಾಪಳ್ಳಿ, ತಂಜಾವೂರು ಮತ್ತು ಪುದುಕೋಟೆ ಆಧಿಪತಿಯಾಗಿದ್ದ ಸಾಳುವ

ಗೋಪ ತಿಮ್ಮ ತಿರುಮಲೆದೇವ ಮಹಾರಾಜನೂ ಸಾಮ್ರಾಜ್ಯದ ಕೇಂದ್ರ ಹಾಗೂ ಪೂರ್ವಭಾಗಗಳಲ್ಲಿ ಅಷ್ಟೇ ಪ್ರಭಾವಶಾಲಿಯಾಗಿದ್ದ ಸಾಳುವ ನರಸಿಂಹನೂ ಆ ಕಾಲದಲ್ಲಿ ವಿಜಯನಗರದ ಧ್ವಜವನ್ನು ಎತ್ತಿಹಿಡಿದವರಾಗಿದ್ದರು. ಸಾಳುವ ನರಸಿಂಹನಿಗೆ ತುಳುವ ವಂಶದ ಈಶ್ವರ ಸೇನಾಪತಿಯು ಬಲಗೈ ಬಂಟನಾಗಿದ್ದನು[39].

ಕಪಿಲೇಶ್ವರನು ಈಶಾನ್ಯ ದಿಕ್ಕಿನಿಂದ ವಿಜಯನಗರವನ್ನು ಆಕ್ರಮಿಸಿದ ಕಾಲಕ್ಕೆ, ದಕ್ಷಿಣದಿಂದ ಭುವನೈಕವೀರ ಸಮರ ಕೋಲಾಹಲನೆಂಬ ಪಾಂಡ್ಯ ರಾಜನೊಬ್ಬನು ಕಂಚಿಯ ಮೇಲೇರಿ ಬಂದಿದ್ದನು. ಹಿಂದೆ ಶಾಂಬವರಾಯ ಕುಲೋತ್ತನ್ನರು ಪಾಂಡ್ಯರ ಸಾಮಂತರಾಗಿ, ಕಂಚಿಯನ್ನು ಆಳುತ್ತಿದ್ದರಷ್ಟೆ. ಆದರೆ ಇಮ್ಮಡಿ ಕಂಪಣನು ರಾಜಗಂಭೀರ ಶಾಂಬವರಾಯನನ್ನು ಸೋಲಿಸಿ ಪಡೆವೀಡನ್ನು ವಶಪಡಿಸಿಕೊಂಡ ಮೇಲೆ, ಪಾಂಡ್ಯ ರಾಜ್ಯದ ಮೇಲೆ ದಾಳಿವರಿದು ಅಲ್ಲಿಯ ಮಹಮ್ಮದೀಯ ಸುಲ್ತಾನನನ್ನು ಜಯಿಸಿ ಕೊಂದಿಕ್ಕಿದನು. ತಮ್ಮ ರಾಜ್ಯವನ್ನು ವಿಜಯನಗರದರಸರು ವಶಪಡಿಸಿಕೊಂಡುದನ್ನು ಪಾಂಡ್ಯರಾಜರು ಸಹಿಸದೆ ಪ್ರತಿಭಟಿಸಿದ್ದರು. ಆದರೆ ಇಮ್ಮಡಿ ಹರಿಹರನು ಅದನ್ನು ಪುನಃ ವಶಪಡಿಸಿಕೊಂಡಿದ್ದನು. ಮಲ್ಲಿಕಾರ್ಜುನನು ಪಟ್ಟಕ್ಕೆ ಬಂದ ಕಾಲದಲ್ಲಿ, ಪಾಂಡ್ಯರಿಗೆ ತಮ್ಮ ರಾಜ್ಯವನ್ನು ಪುನಃ ಜಯಿಸುವ ಹೆಬ್ಬಯಕೆ ಮೊಳೆಯಿತು. ಗಜಪತಿ ಕಪಿಲೇಶ್ವರನ ಹಲವಾರು ಆಕ್ರಮಣಗಳಿಂದ ವಿಜಯನಗರವು ಜರ್ಜರಿತವಾದ ಕಾಲದಲ್ಲಿ ಪಾಂಡ್ಯರಾಜ ಭುವನೈಕವೀರನು ಕಂಚಿಯನ್ನು ಪುನರಪಿ ಜಯಿಸಲು

ಪ್ರಯತ್ನಿಸಿ, ಸುಮಾರು ಕ್ರಿ.ಶ. 1469ರಲ್ಲಿ ಕೃತಾರ್ಥನಾದನು. ಮಲ್ಲಿಕಾರ್ಜುನನು ಸುಮಾರು ಕ್ರಿ.ಶ. 1465ರಲ್ಲಿ ಮೃತನಾದನು[40].

**ಇಮ್ಮಡಿ ವಿರೂಪಾಕ್ಷ (ಕ್ರಿ.ಶ. 1465 – 1485):**

ಮಲ್ಲಿಕಾರ್ಜುನನು ಮರಣಹೊಂದಿದಾಗ, ಅವನಿಗೆ ರಾಜಶೇಖರನೆಂಬ ಕುಮಾರನೊಬ್ಬನಿದ್ದನು. ಆದರೆ ಅವನು ಶೈಶವಾಸ್ಥೆಯಲ್ಲಿದ್ದನಾಗಿ ಇಮ್ಮಡಿ ದೇವರಾಯನ ತಮ್ಮನಾದ ಪ್ರತಾಪದೇವರಾಯನ ಮಗನಾದ ವಿರೂಪಾಕ್ಷನು ಮಲ್ಲಿಕಾರ್ಜುನನ ತರುವಾಯ ಪಟ್ಟಕ್ಕೆ ಬಂದನು. ಪಟ್ಟಕ್ಕೆ ಬರುವ ಮುಂಚೆ ವಿರೂಪಾಕ್ಷನು ಹಲವಾರು ವರ್ಷಗಳ ಕಾಲ ಪೆನುಕೊಂಡೆಯ ಆಧಿಪತಿಯಾಗಿದ್ದನು. ಆದರೆ ವಿರೂಪಾಕ್ಷನು ಸಪ್ತವ್ಯಸನಗಳಿಗೆ ಬಲಿಯಾಗಿ ರಾಜ್ಯರಕ್ಷಣ ಶಕ್ತಿಯನ್ನು ಕಳೆದುಕೊಂಡವನಾಗಿದ್ದನು. ಇದರಿಂದ ಗೋವೆ, ದಾಬೋಲಿ ಮುಂತಾದ ಕರಾವಳಿ ಪ್ರಾಂತಗಳು ಮುಸಲ್ಮಾನರ ವಶವಾದುವು. ಕೇಂದ್ರ ಪ್ರಭುತ್ವದ ಪ್ರಭಾವವು ಕ್ಷೀಣಿಸುತ್ತಾ ಬಂದಿತು. ಪ್ರಾಂತೀಯಾಧಿಪತಿಗಳ ಸಕಾಲಿಕ ಸೈನ್ಯಸಹಾಯ ಬಾರದೆ ಹೋಗಿದ್ದರೆ, ವಿಜಯನಗರದ ಭವ್ಯತೆ ಅಂದೇ ನಾಶವಾಗುತ್ತಿದ್ದಿತು. ಚಂದ್ರಗಿರಿ ರಾಜ್ಯದ ಆಧಿಪತಿಯಾಗಿದ್ದ ಸಾಳುವ ನರಸಿಂಹನೇ ಅವರಲ್ಲಿ ಪ್ರಮುಖನಾಗಿದ್ದನು. ಕ್ರಿ.ಶ. 1463ರಲ್ಲಿ ಓಡ್ರ ಸಾಮ್ರಾಜ್ಯವು ದಾಳಿ ಮಾಡಿದ್ದ ಕಾಲದಲ್ಲಿ ನರಸಿಂಹನ ಪ್ರಾಂತಗಳಿಗೆ ಅತೀವನಷ್ಟವಾಗಿದ್ದಿತು. ಅದರ ಪ್ರತೀಕಾರಾರ್ಥವಾಗಿ ಸಾಳುವ ನರಸಿಂಹನು ಕ್ರಿ.ಶ. 1470ರಲ್ಲಿ ಈ ಗಜಪತಿ ಕಪಿಲೇಶ್ವರನನ್ನು ಆಕ್ರಮಿಸಿ, ಉದಯಗಿರಿ ರಾಜ್ಯವನ್ನು ವಶಪಡಿಸಿಕೊಂಡನು. ಕಪಿಲೇಶ್ವರನ ಮರಣಾನಂತರ

ಓಢ್ರ ರಾಜ್ಯದಲ್ಲಿ ಅಂತರ್ಯುದ್ಧ ಸಂಭವಿಸಿದಾಗ, ತಮಿಳು ಜಿಲ್ಲೆಗಳಲ್ಲಿ ತಲೆದೋರಿದ ದಂಗೆಗಳನ್ನು ಸಾಳುವ ನರಸಿಂಹನು ನಿಗ್ರಹಿಸಿ, ಸಾಮ್ರಾಜ್ಯದ ಪೂರ್ವ ಭಾಗಗಳಿಂದ ಓಢ್ರರನ್ನು ಬದಿದಟ್ಟಿ, ಗೋದಾವರಿಯ ವರೆಗಣ ಸಮಸ್ತ ಪ್ರಾಂತಕ್ಕೂ ಅಧಿರಾಜನಾದನು. ಕ್ರಿ.ಶ. 1477 ರೊಳಗಾಗಿ ಕೊಂಡವೀಡು ಮತ್ತು ಮಚಲಿಪಟ್ಟಣವೂ ಅವನ ಕೈಸೇರಿದವು. ಹಿಂದೆ ಬಹಮನಿ ಸುಲ್ತಾನನಾದ ಮೂರನೆಯ ಮುಹಮ್ಮದನ ಬೆಂಬಲ ಪಡೆದು ಹಂಬರನಿಂದ ಪರಾಜಿತನಾಗಿ ಓಢ್ರ ಸಿಂಹಾಸನ ಕಳೆದುಕೊಂಡ ಗಜಪತಿ ಪುರುಷೋತ್ತಮನಿಗೆ ಸ್ವರಾಜ್ಯ ಪ್ರಾಪ್ತಿಗಾಗಿ ಅವನ ಬೆಂಬಲಕ್ಕೆ ಸಾಳುವ ನರಸಿಂಹನು ಹೋಗಿರಬಹುದೆಂಬ ಊಹೆಗೆ ಎಡೆಯಿದೆ. ಆ ಮಹಮ್ಮದೀಯ ಸುಲ್ತಾನನು ಮುಯ್ಯಿಗೆ ಮುಯ್ಯಿ ತೀರಿಸುವ ಸಲುವಾಗಿ ಅವರಿಬ್ಬರ ಮೇಲೂ ಅಭಿಯೋಗ ನಡೆಸಿದನು. ಈ ಯುದ್ಧ ಕ್ರಿ.ಶ. 1478 ರಿಂದ 1481ರ ವರೆಗೂ ನಡೆಯಿತು; ಸುಲ್ತಾನನು ಕಂಚೀಪುರವನ್ನು ಸುಲಿದು ಕೊಂಡೊಯ್ದು ಅಪಾರ ಧನಕನಕಾದಿಗಳನ್ನು ತುಳುವ ಸೇನಾಪತಿ ಈಶ್ವರನು ಪ್ರಾಣದ ಹಂಗುತೊರೆದು ಕಾದಾಡಿ ಪುನಃ ವಶಪಡಿಸಿಕೊಂಡನು[41].

ಇಮ್ಮಡಿ ವಿರೂಪಾಕ್ಷನು ಸುಮಾರು 20 ವರ್ಷಗಳ ಕಾಲ ರಾಜನಾಗಿದ್ದನು. ಕ್ರಿ.ಶ. 1485ರಲ್ಲಿ ಅವನನ್ನು ಅವನ ಜ್ಯೇಷ್ಠಪುತ್ರನೇ ಕೊಲೆಮಾಡಿದನು. ಪಿತೃಹತ್ಯೆ ಮಾಡಿದ ಈ ಮಗನು ಪಟ್ಟವನ್ನು ತ್ಯಜಿಸಿ ತನ್ನ ತಮ್ಮನಾದ ಪೌಢದೇವರಾಯನನ್ನು ಪಟ್ಟಕ್ಕೇರಿಸಿದನು.

**ಪ್ರೌಢ ದೇವರಾಯ (ಕ್ರಿ.ಶ. 1485):**

ಪ್ರೌಢ ದೇವರಾಯನು ಪಟ್ಟಕ್ಕೆ ಬಂದೊಡನೆ ಮಾಡಿದ ಕೆಲಸವೆಂದರೆ, ತನಗೆ ಪಟ್ಟವನ್ನುಗಳಸಿಕೊಟ್ಟ ಅಣ್ಣನ ಕೊಲೆ. ಅದಾಗುತ್ತಲೂ ಪ್ರೌಢ ದೇವರಾಯನು ರಾಜ್ಯಭಾರವನ್ನು ಕೈಬಿಟ್ಟುವ್ಯಸನ ನಿರತನಾದನು. ರಾಜ್ಯದಲ್ಲಿ ಅನಾಯಕತೆ ತಾಂಡವವಾಡತೊಡಗಿತು. ಅಪ್ರತಿಮ ರಾಜನಿಷ್ಠನಾದ ಸಾಳುವ ನರಸಿಂಹನೇ ಈ ಅವ್ಯವಸ್ಥೆಯ ನಿವಾರಣೆಗೆ ಕೈಯಿಕ್ಕಬೇಕಾಯಿತು. ರಾಜ್ಯವನ್ನು ಉಳಿಸಿಕೊಳ್ಳಲು ಈ ಹಳೆಯ ರಾಜವಂಶದ ಸಮಾಪನವೇ ಏಕಮಾತ್ರ ವಿಧಾನವೆಂದು ದಂಡನೀತಿ ದಕ್ಷನಾದ ಸಾಳುವ ನರಸಿಂಹನಿಗೆ ಖಚಿತವಾಯಿತು. ಹಾಗೆ ಕೃತಸಂಕಲ್ಪನಾದ ಸಾಳುವ ನರಸಿಂಹನು ವಿಜಯನಗರವನ್ನು ಆಕ್ರಮಿಸಲು ದಂಡನಾಯಕ ನರಸನಾಯಕನಿಗೆ ವೀಳೆಯ ನೀಡಿದನು. ಈ ದಂಡ ಯಾತ್ರೆಯ ಫಲವಾಗಿ ಅರಮನೆಯಲ್ಲಿ ನಡೆದ ಕೊನೆಯ ಭೀಕರ ದೃಶ್ಯವನ್ನು ನ್ಯೂನಿಸ್ ಹೃದಯಂಗಮವಾಗಿ ವರ್ಣಿಸಿದ್ದಾನೆ. ನರಸಿಂಹನ ದಂಡನಾಯಕನು ನಗರದ ಮಹಾದ್ವಾರಕ್ಕೆ ಬಂದಾಗ, ಅಲ್ಲಿ ರಕ್ಷಕಭಟರಾರೂ ಇರಲಿಲ್ಲ. ಸಾಳುವ ನರಸಿಂಹನ ದಂಡನಾಯಕನು ಸೈನ್ಯ ಸಮೇತನಾಗಿ ಅರಮನೆಗೆ ಬಂದ ವಾರ್ತೆ ಅರಸನ ಕಿವಿಗೆ ಮುಟ್ಟಿದಾಗ, ಅವನು ಅದನ್ನು ನಂಬಲಾರದೆ ಹೋದನು. ನರಸನಾಯಕನು ಅರಮನೆಗೆ ನುಗ್ಗಿ ಬಂದಾಗ, ಅಲ್ಲಿ ಅವನನ್ನು ಪ್ರತಿಭಟಿಸಿದವರೂ ಯಾರೂ ಇಲ್ಲ. ಅಪ್ರತಿಹತನಾದ ನರಸನಾಯಕನು ಅಂತಃಪುರಕ್ಕೂ ಖಡ್ಗಧಾರಿಯಾಗಿ ಬಂದು ಅಲ್ಲಿ ಕೆಲವರು ಹೆಂಗಸರನ್ನೂ ಕೊಂದಿಕ್ಕಿದನು[42]. ಅದುವರೆಗೂ ಅಂತಃಪುರಗೀತಾ ಪಾರಾಯಣದಲ್ಲಿದ ಅರಸನು ಈ ಅನಾಹುತದಿಂದ ದಿಗ್ಭ್ರಾಂತನಾಗಿ ಇನ್ನೊಂದು ಕಡೆಯ ದ್ವಾರದಿಂದ ಹೊರಟು, ಅರಮನೆಯನ್ನೂ ರಾಜಧಾನಿಯನ್ನೂ ತ್ಯಜಿಸಿ

ಎಲ್ಲೋ ಪಲಾಯನ ಮಾಡಿದನ್ನು. ಅರಸನ ಪಲಾಯನ ವಾರ್ತೆ ಬರುತ್ತಲೂ ನರಸನಾಯಕನು ನಗರವನ್ನು ವಶಪಡಿಸಿಕೊಂಡನು; ಅಲ್ಲದ್ದ ಧನಸಂಪತ್ತೆಲ್ಲವನ್ನೂ ದೋಚಿಕೊಂಡನು. ಇದಾಗುತ್ತಲೂ ನರಸಿಂಹನೇ ರಾಜನೆಂಬ ಘೋಷಣೆ ಹೊರಟಿತು. ಅಂದಿನಿಂದ ವಿಜಯನಗರದ ಎರಡನೆಯ ವಂಶದ ಎಂದರೆ ಸಾಳುವ ವಂಶದ ಆಧಿಪತ್ಯ ಪ್ರಾರಂಭವಾಯಿತು.

**ಅಡಿಟಿಪ್ಪಣಿಗಳು:**

1. ಎನ್. ವೆಂಕಟರಮಣಯ್ಯ, *ವಿಜಯನಗರ ಚರಿತ್ರೆ,* ಪು.19
2. *ಅದೇ,* ಪು.20
3. *ಅದೇ,* ಪು.24
4. ಸೆವೆಲ್, ರಾಬರ್ಟ್, *ಂ ಈಔಡಿರ್ಙಣಣಜಟ ಇಟಮಿಡಿಜ* ಎರಡನೆಯ ಭಾರತೀಯ ಆವೃತ್ತಿ, ಮುನ್ನುಡಿ, ಪು.6
5. *ಅದೇ,* ಪು.289
6. ಸೆವೆಲ್, ರಾಬರ್ಟ್, *ಖಿಜ ಊಾಣಔಡಿಭಿಚಿಟ ಖಟಿಭಿಡಿಔಣಿಟಿ ಔಜಿ ಖಾಣಖಿಜಔಟಿ ಖಟಿಜಟಿಚಿ,* ಪು.184
7. *ಅದೇ,* ಪು.189
8. ನೀಲಕಂಠಶಾಸ್ತ್ರಿ, ಕೆ.ಎ., *ಖಿಜ ಊಾಣಔಥಿ ಔಜಿ ಖಾಣಖ ಖಟಿಜಟಿಚಿ,* ಪು.54
9. *ಅದೇ,* ಪು.65

10. *ಅದೇ.* ಪು.100

11. ವೆಂಕಟರಮಣಯ್ಯ ಎನ್. ಮತ್ತು ನೀಲಕಂಠಶಾಸ್ತ್ರಿ, ಕೆ.ಎ., *ಈಣಡಿಣುಜಿ ಖಿಣಾಡಿಛಿಜ ಚಿ ಗಿಖಿಚಿಥಿಚಿಟಚಿಚಿಡಿಚಿ ಊಣಾಡಿಥಿ,* ಪು.52

12. *ಅದೇ,* ಪು.56

13. *ಅದೇ,* ಪು.47

14. *ಅದೇ,* ಪು.51

15. ನರಸಿಂಹಾಚಾರ್ ಆರ್., *ಕರ್ನಾಟಕ ಕವಿ ಚರಿತ್ರೆ,* ಪು.12

16. ಲಕ್ಕಣ್ಣ ದಂಡೇಶ, *ಶಿವತತ್ತ್ವ ಚಿಂತಾಮಣಿ,* ಪದ್ಯ.9

17. ಸೆವೆಲ್, ರಾಬರ್ಟ್, *೦ ಈಊಡಿಡಾಣಜು ಇಟಡಿಚಿಜ* ಎರಡನೆಯ ಭಾರತೀಯ ಆವೃತ್ತಿ, ಮುನ್ನುಡಿ, ಪು.228

18. *ಅದೇ,* ಪು.289

19. ಹಯವದನರಾವ್ ಸಿ., *ಒಥಿಊಡಿಜ ಉಚಿಡಜಾಣಜಾಡಿ,* ಪು.1561

20. ಟಿ.ವಿ. ಮಹಾಲಿಂಗಂ, *ಖಚಾಖು ಖಿಟಜುಚಿಟ ಕಾಬುಥಿ,* ಪು.93

21. *ಅದೇ,* ಪು.94

22. ಎನ್. ವೆಂಕಟರಮಣಯ್ಯ, *ವಿಜಯನಗರ ಚರಿತ್ರೆ,* ಪು.39

23. *ಅದೇ,* ಪು.42

24. ಸೆವೆಲ್, ರಾಬರ್ಟ್, *ಪೂರ್ವೋಕ್ತ*

25. ವಿರೂಪಾಕ್ಷ ಪಂಡಿತ, *ಚನ್ನಬಸವಪುರಾಣ,* ಅಧ್ಯಯ-60

26. ಎಚ್.ಎಂ. ನಾಗರಾಜು, *ವಿಜಯನಗರದ ಇಮ್ಮಡಿದೇವರಾಯ,* ಪು.28

27. *ಅದೇ,* ಪು.29

28. *ಅದೇ,* ಪು.35

29. ಹಯವದನರಾವ್ ಸಿ., *ಪೂರ್ವೋಕ್ತ*

30. ವೆಂಕಟರಮಣಯ್ಯ ಎನ್. ಮತ್ತು ನೀಲಕಂಠಶಾಸ್ತ್ರಿ, ಕೆ.ಎ., *ಈಣಹಿಙಜಿ ಖಿಣಹಿಛಿಜ ಔಜಿ ಗಿಉಚಿಥಿಚಿಟಚಿಔಚಿಡಿಚಿ ಊಫಾಣಔಹಿಥಿ*, ಪು.65

31. *ಅದೇ,* ಪು.72

32. *ಅದೇ,* ಪು.81

33. ಎಚ್.ಎಂ. ನಾಗರಾಜು, *ವಿಜಯನಗರದ ಇಮ್ಮಡಿದೇವರಾಯ*, ಪು.69

34. *ಅದೇ,* ಪು.101

35. ಎ.ಎಸ್. ನಂಜುಂಡಸ್ವಾಮಿ, *ವಿಜಯನಗರ ಇತಿಹಾಸ*, ಪು. 15

36. *ಅದೇ,* ಪು. 27

37. ಪಾಂಡುರಂಗರಾವ ದೇಸಾಯಿ, *ಹಂಪೆ,* ಪು.11

38. *ಅದೇ,* ಪು.17

39. ಎನ್. ಚಿನ್ನಸ್ವಾಮಿ ಸೋಸಲೆ, *ಸಾಮ್ರಾಜ್ಯ ಮತ್ತು ಸಂಸ್ಥಾನ,* ಪು.97

40. *ಅದೇ,* ಪು.99

41. *ಅದೇ,* ಪು.101

42. *ಅದೇ,* ಪು.103

# ಅಧ್ಯಾಯ ೩

# ವಿಜಯನಗರದ ಸಂಗಮರ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿ

---

## ❖ ಧಾರ್ಮಿಕ ಜೀವನ:

ಸಂಗಮರ ಕಾಲದ ವಿಜಯನಗರ ಸಾಮ್ರಾಜ್ಯವು ವಿವಿಧ ಮತ ಧರ್ಮಗಳಿಗೆ ಸೇರಿದ ಜನರಿಂದ ಭರಿತವಾಗಿತ್ತು, ಹಾಗೂ ರಾಜಧಾನಿಯು ಸರ್ವಸಮದರ್ಶಿಯಾದ ಮಹಾನಗರವಾಗಿತ್ತು. "ಅದು ಹೊಂದಿರುವ ಬೃಹತ್ ವ್ಯಾಪಾರ ಹಾಗೂ ಅನೇಕ ಅಮೂಲ್ಯ ರತ್ನಗಳಿಂದಾಗಿ – (ಪ್ರಧಾನವಾಗಿ ವಜ್ರಗಳು) – ಈ ಪಟ್ಟಣದಲ್ಲಿ ಪ್ರತಿಯೊಂದು ದೇಶ ಮತ್ತು ಜನಾಂಗದ ಜನರನ್ನು ಕಾಣಬಹುದು"ಎಂದು ಪೇಯಿಸ್ ಹೇಳುತ್ತಾನೆ. ಈ ಪಟ್ಟಣದ ಈ ಸರ್ವಸಮದರ್ಶಿಯಾದ ಸ್ವರೂಪವಲ್ಲದೆ ವಿವಿಧ ಮತಧರ್ಮಗಳಿಗೆ ಸೇರಿದ ಜನರಲ್ಲಿ ನೆಲೆಸಿದ್ದ ಸಾಮಾಜಿಕ ಸಾಮರಸ್ಯವು ಗಮನಾರ್ಹವಾದುದು. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಹೇಳಿರುವಂತೆ "ಪಂಥಾಭಿಮಾನ ಬದ್ಧದ್ವೇಷಗಳನ್ನು ಹೊರಗೆಡವಲು ಆಸ್ಪದ ನೀಡದಿರುವಂಥ ಪರಿಸ್ಥಿತಿಗಳಲ್ಲಿ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು". ವಿಜಯನಗರ ಸಾಮ್ರಾಜ್ಯದ ಸುವರ್ಣಯುಗವು ಒಂದು ಕಡೆ ಶೈವ ಮತ್ತು ವೈಷ್ಣವ ಧರ್ಮಗಳ ಮುಖ್ಯ ಪಂಥಗಳು ಮತ್ತು ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಸಂಪ್ರದಾಯಗಳ, ಹಾಗೂ ಇನ್ನೊಂದೆಡೆ ಜೈನ ಮತ್ತು ಇತರ ಧರ್ಮಗಳ ಸಾಮರಸ್ಯದ ಸಹಬಾಳ್ವೆಯ ಯುಗವಾಗಿತ್ತು[1].

ಆ ಕಾಲದ ಪ್ರಮುಖ ಹಿಂದೂ ಧಾರ್ಮಿಕ ಕೇಂದ್ರಗಳೆಂದರೆ ಶೈವಧರ್ಮಕ್ಕೆ ಶೃಂಗೇರಿ, ವೈಷ್ಣವಧರ್ಮಕ್ಕೆ ಉಡುಪಿ ಹಾಗೂ ಶ್ರೀವೈಷ್ಣವಧರ್ಮಕ್ಕೆ ಶ್ರೀರಂಗಂ ಮತ್ತು ಮೇಲುಕೋಟೆಯಾಗಿದ್ದವು. ಈ ಧಾರ್ಮಿಕ ಕೇಂದ್ರಗಳು ನಿರೂಪಿಸಿದ ಧಾರ್ಮಿಕ ತತ್ವಶಾಸ್ತ್ರ ಅಥವಾ ವೇದಾಂತವು ಕ್ರಮವಾಗಿ ಅದ್ವೈತ, ದ್ವೈತ ಹಾಗೂ ವಿಶಿಷ್ಟಾದ್ವೈತಗಳಾಗಿದ್ದವು. ಸಾಮ್ರಾಜ್ಯದ ಉತ್ತರ ಭಾಗಗಳಲ್ಲಿ ಲಿಂಗಾಯತರು ವ್ಯಾಪಕವಾಗಿದ್ದರೆ ಜೈನಧರ್ಮವು ಶ್ರವಣಬೆಳಗೊಳ, ಹೊಂಬುಚ, ಕಳಸ, ಕಾರ್ಕಳ ಹಾಗೂ ಸಾಮ್ರಾಜ್ಯದ ಪಶ್ಚಿಮ ಭಾಗಗಳಲ್ಲಿ ಹರಡಿತ್ತು. ಪಶ್ಚಿಮ ಕರಾವಳಿಯಲ್ಲಿ ಅರಬರ ಕರಾವಳಿ ವ್ಯಾಪಾರದಿಂದಾಗಿ ಇಸ್ಲಾಮಿನ ಮತ್ತು ಗೋವಾದಲ್ಲಿ ಪೋರ್ಚುಗೀಸರ ನೆಲೆಯಿಂದಾಗಿ ಕ್ರೈಸ್ತಧರ್ಮದ ಪ್ರಭಾವ ಬಲವಾಗಿತ್ತು. ದಕ್ಷಿಣದಲ್ಲಿ ಅದರಲ್ಲಿಯೂ ವಿಶೇಷವಾಗಿ ತಮಿಳು ಪ್ರದೇಶಗಳಲ್ಲಿ ಶೈವ ಧರ್ಮ ಮತ್ತು ಶ್ರೀವೈಷ್ಣವ ಧರ್ಮಗಳು ಪ್ರಬಲ ನೆಲೆ ಹೊಂದಿದ್ದವು. ಇವೆಲ್ಲದರ ಜೊತೆಗೆ ಗ್ರಾಮಿಣ ಪ್ರದೇಶಗಳಲ್ಲಿ ಆದಿಕಾಲದ ಧಾರ್ಮಿಕ ನಂಬಿಕೆಗಳು ಬೇರೂರಿದ್ದವು. ಪ್ರತಿಯೊಂದು ಗ್ರಾಮವೂ ಪ್ಲೇಗು ಮತ್ತು ಮಹಾಮಾರಿ ಉಪದ್ರವಗಳಿಗೆ ತಮ್ಮದೇ ಆದ ಗ್ರಾಮದೇವತೆಗಳನ್ನು ಹೊಂದಿದ್ದಿತು[2].

**ಧಾರ್ಮಿಕ ಪಂಥಗಳು ಮತ್ತು ಅವುಗಳ ಸಿದ್ಧಾಂತಗಳು:**

**ಜೈನಧರ್ಮ ಮತು ಆಗಮಗಳು:**

ಶ್ರುತಕೇವಲಿ ಭದ್ರಬಾಹು ಮತ್ತು ಚಂದ್ರಗುಪ್ತರು ದಕ್ಷಿಣ ವಲಸೆ ಬಂದ ಮೊದಲ ಜೈನರಾಗಿದ್ದರು. ಕ್ರಿ.ಶ. ೨೮೩ರಲ್ಲಿ ಶ್ರವಣಬೆಳಗೊಳದ ಇಂದ್ರಗಿರಿ ಅಥವಾ

ವಿಂಧ್ಯಗಿರಿ ಬೆಟ್ಟದಲ್ಲಿ ಚಾಮುಂಡರಾಯನು ಗೊಮ್ಮಟನ ಬೃಹನ್ಮೂರ್ತಿಯನ್ನು ಮಾಡಿಸಿದನು ಹಾಗೂ ಜೈನಧರ್ಮಕ್ಕೆ ಹೊಸ ಪ್ರೇರಣೆಯನ್ನು ನೀಡಿದನು. ಜೈನಧರ್ಮದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಪಂಥಗಳಿವೆ. ಜೈನರ ನೀತಿ ಸೂತ್ರಗಳು ಪಂಚಮಹಾವ್ರತಗಳಲ್ಲಿ ನಿರೂಪಿತವಾಗಿವೆ: ಆಹಿಂಸೆ, ಸತ್ಯ, ಆಸ್ತೀಯ ಬ್ರಹ್ಮಚರ್ಯ ಹಾಗೂ ಅಪರಿಗ್ರಹ. ಔದಾರ್ಯ, ದಯಾಪರತೆ, ಪಾವಿತ್ರ್ಯ ಮತ್ತು ತಪಸ್ಸು ಇವು ನಾಲ್ಕು ಧರ್ಮ ಅಥವಾ ಗುಣಗಳು, ಮೂರು ಬಗೆಯ ಸಂಯಮಗಳೆಂದರೆ ಮನಸ್ಸು, ನಾಲಗೆ ಮತ್ತು ದೇಹನಿಗ್ರಹ.

ಜೈನರು ನಿರ್ವಾಣ ಸಿದ್ಧಾಂತವನ್ನು ಇಟ್ಟುಕೊಂಡಿದ್ದಾರೆ; ಆದರೆ ಅವರಿಗೆ ಅದೊಂದು ದಿವ್ಯಾನಂದಕರ ಶಾಂತ ಸ್ಥಿತಿ ಅಥವಾ ನಿಶ್ಚಲತೆ, ಪುನರ್ಜನ್ಮದ ನಿಲುಗಡೆ, ಆದರೆ ದೇಹಾತ್ಮವಿನಾಶವಲ್ಲ. ಸಲ್ಲೇಖನ ಅಥವಾ ಧಾರ್ಮಿಕ ಆತ್ಮಹತ್ಯೆಯ ಆಚರಣೆಯು ಪುಣ್ಯಕರವಾದುದೆಂದು ಪರಿಗಣಿತವಾಗಿದೆ. ಆಹಿಂಸೆ ಅಥವಾ ಯಾವುದೇ ತೆರನ ಜೀವನಾಶವನ್ನು ತಪ್ಪಿಸುವಿಕೆ ಜೈನಧರ್ಮದ ಒಂದು ಮೂಲಭೂತ ಸಿದ್ಧಾಂತ. ಜೈನರು ವೇದಗಳನ್ನು ನಿರಾಕರಿಸುತ್ತಾರೆ ಹಾಗೂ ತಮ್ಮದೇ ಆದ ಪವಿತ್ರ ಗ್ರಂಥಗಳನ್ನು ಹೊಂದಿದ್ದಾರೆ, 'ಪೂರ್ವ'ಗಳೆಂದು ಕರೆಯಲಾದ ಹದಿನಾಲ್ಕು ಮೂಲ ಪುಣ್ಯ ಗ್ರಂಥಗಳು ಆದಿಕಾಲದಲ್ಲಿ ನಷ್ಟವಾದವು; ಆದರೆ ಹನ್ನೊಂದು 'ಅಂಗ'ಗಳನ್ನು, ಹನ್ನೆರಡು 'ಉಪಾಂಗ'ಗಳನ್ನು ಮತ್ತು ಇತರ ಧಾರ್ಮಿಕ ಗ್ರಂಥಗಳನ್ನು ಒಳಗೊಂಡ ನಲವತ್ತೈದು 'ಆಗಮ'ಗಳು ಉಳಿದುಬಂದಿವೆ[3].

ಸಂಗಮರ ಅರಸಗಳಲ್ಲಿ ಇಮ್ಮಡಿ ದೇವರಾಯನು ಜೈನರ ಬಗ್ಗೆ ಸಹಿಷ್ಣುತೆಯುಳ್ಳವನಾಗಿದ್ದನು. ಕ್ರಿ.ಶ. 1426ರಲ್ಲಿ ಆತನು ರಾಜಧಾನಿಯಲ್ಲಿ ಜಿನಾಲಯವೊಂದನ್ನು ಕಟ್ಟಿಸಿದನು. ಈ ಆಲಯವು ಅರಸನ ಅರಮನೆಯಿಂದ ಅಷ್ಟೇನೂ ದೂರವಿರಲಿಲ್ಲವೆಂದು ತೋರುತ್ತದೆ. ಇಮ್ಮಡಿ ದೇವರಾಯನ ರಾಣಿಯಾದ ಭಿಮಾದೇವಿಯು ಜೈನಳಾಗಿದ್ದಳು ಮತ್ತು ಪಂಡಿತಾಚಾರ್ಯರ ಶಿಷ್ಯಯಾಗಿದ್ದಳು, ಈಕೆಯು ಶ್ರವಣಬೆಳಗೊಳದ ಮಾಂಗಾಯಿ ಬಸದಿಯಲ್ಲಿ ಶಾಂತಿನಾಥ ವಿಗ್ರಹದ ಪ್ರತಿಷ್ಠೆ ಮಾಡಿಸಿದಳು.

**ಶೈವಧರ್ಮ ಮತ್ತು ಆದ್ವೈತ:**

ವಿಜಯನಗರ ಸಾಮ್ರಾಜ್ಯದಲ್ಲಿ ಶೈವಧರ್ಮ ಅಥವಾ ಶಿವಪಂಥ ಹಾಗೂ ಅದರ ಅದ್ವೈತ ಸಿದ್ಧಾಂತದ ಕೇಂದ್ರವು 8ನೆಯ ಶತಮಾನದಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಶೃಂಗೇರಿ ಮಠವಾಗಿತ್ತು. ಅವರೊಬ್ಬ ಶ್ರೇಷ್ಠ ಧಾರ್ಮಿಕ ಸುಧಾರಕರೂ ವೇದಾಂತ ದರ್ಶನದ ಬೋಧಕರೂ ಆಗಿದ್ದರು. ಅವರು ಪ್ರತಿಪಾದಿಸಿದ್ದು ಶಿವರಾಧನೆಯನ್ನು; ಬ್ರಾಹ್ಮಣ ಸ್ಮಾರ್ತ ಪಂಥದ ಸ್ಥಾಪಕರು ಅವರಾಗಿದ್ದರು. ಶಂಕರರು ಪ್ರತಿಪಾದಿಸಿದ ವೇದಾಂತ ಅಥವಾ ಧಾರ್ಮಿಕ ದರ್ಶನವು ಸರ್ವದೇವತಾರಾಧನೆಯದು ಮತ್ತು ಅದ್ವೈತ ಎಂದರೆ ವಿಶ್ವವು ಪರಮಾತ್ಮ ನಿಂದ ಬೇರೆಯಲ್ಲವೆಂದು ಸಾರುವ ಸಿದ್ಧಾಂತವನ್ನು ಆಧರಿಸಿದುದು. ಈ ದರ್ಶನದ ಪ್ರಧಾನ ಸೂತ್ರವೆಂದರೆ ಬ್ರಹ್ಮ, ಪರಬ್ರಹ್ಮವೊಂದೇ ನಿಜವಾಗಿ ಆಸ್ತಿತ್ವದಲ್ಲಿರುವ ಚೇತನ, ವಿಶ್ವದ ಏಕೈಕ ಕಾರಣ ಹಾಗೂ ಪರಮಪ್ರಭು; ಆತ್ಮ ಶಿವ, ವಿಷ್ಣು, ಬ್ರಹ್ಮ ಅಥವಾ

ದೇವಪರಿವಾರದ ಯಾವುದೇ ದೇವತೆಯಿಂದ ವಿಭಿನ್ನ. ಪರಬ್ರಹ್ಮವನ್ನು ಅರಿಯುವುದು ಪರಮಶ್ರೇಷ್ಠ ಲಕ್ಷ್ಯ. ಈ ಪರಮಜ್ಞಾನದ ಮೂಲಕ ಸಂಪೂರ್ಣ ಜ್ಞಾನ ಸಾಕ್ಷಾತ್ಕಾರವು ಮುಕ್ತಿ ಅಥವಾ ಮೋಕ್ಷದಲ್ಲಿ ಹಾಗೂ ದಿವ್ಯ ಸತ್, ಚಿತ್, ಅನಂದದಲ್ಲಿ ಪುನರ್ಲೀನವಾಗುವುದರಲ್ಲಿ ಫಲಿತವಾಗುತ್ತದೆ, ಆದರೆ ನಿಗೂಢ ಪ್ರಥಮ ಕಾರಣ ಮತ್ತು ಏಕೈಕ ಪರಬ್ರಹ್ಮನನ್ನು ಕುರಿತು ಧ್ಯಾನಿಸಲು ಮಾನವನ ಮನಸ್ಸಿಗೆ ಉನ್ನತ ಮಟ್ಟಕ್ಕೇರಲು ಸಾಧ್ಯವಾಗದು. ಆದ್ದರಿಂದ ನಿಗದಿತ ಪೂಜಾದಿ ವಿಧಿವಿಧಾನಗಳನ್ನು ಆಚರಿಸುತ್ತ ಕೆಳಸ್ತರದ ದೇವತೆಗಳ ಮೂಲಕ ಆತನನ್ನು ಧ್ಯಾನಿಸಬಹುದು, ಹೀಗೆ ಈ ಧಾರ್ಮಿಕ ಪಂಥವು ಎಲ್ಲ ಹಿಂದೂದೇವತೆಗಳ ಬಗ್ಗೆ, ಅದರಲ್ಲಿಯೂ ವಿಶೇಷವಾಗಿ ಶಿವ, ವಿಷ್ಣು, ಕೃಷ್ಣ, ಸೂರ್ಯ, ಶಕ್ತಿ, ಗಣೇಶ ಮತ್ತು ಭೈರವರ ಬಗ್ಗೆ ಸಹಿಷ್ಣುತೆಯನ್ನು ತೋರುತ್ತದೆ[4].

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮಹತ್ಕಾರ್ಯಕ್ಕೆ ಸಂಬಂಧಿಸಿದ ವಿದ್ಯಾರಣ್ಯರು 14ನೆಯ ಶತಮಾನದಲ್ಲಿ ಅದ್ವೈತ ವೇದಾಂತವನ್ನು ಜನಪ್ರಿಯಗೊಳಿಸಿದರು.ಕ್ರಿ.ಶ. 1431ರ ತೇದಿಯ ಶಾಸನವೊಂದರ ಪ್ರಕಾರ ಇಮ್ಮಡಿ ದೇವರಾಯನ್ನು ಶ್ರದ್ಧಾವಂತನಾದ ಮತ್ತು ಸಹಿಷ್ಣುವಾದ ಶೈವ ಅಥವಾ ಶಿವಭಕ್ತನಾಗಿದ್ದಂತೆ ತೋರುತ್ತದೆ.

**ವೈಷ್ಣವ ಧರ್ಮ ಮತ್ತು ವಿಶಿಷ್ಟಾದ್ವೈತ:**

ವೈಷ್ಣವ ಧರ್ಮವು ಹನ್ನೊಂದನೆಯ ಶತಮಾನದಲ್ಲಿ ರಾಮಾನುಜಾಚಾರ್ಯರ ಪ್ರಯತ್ನಗಳಿಂದಾಗಿ ದಕ್ಷಿಣ ಭಾರತ ಮತ್ತು ಹೊಯ್ಸಳ ದೇಶಗಳಲ್ಲಿ ಹರಡಿತು. ಶ್ರೀರಂಗಂ ಮತ್ತು ಮೇಲುಕೋಟೆ ಈ ಧಾರ್ಮಿಕ ಪಂಥದ ಕೇಂದ್ರಗಳಾದವು. ವೈಷ್ಣವ ಸಿದ್ಧಾಂತವಾದ ವಿಶಿಷ್ಟಾದ್ವೈತವು ವಿಷ್ಣುವೇ ಬ್ರಹ್ಮನ್ ಎಂದು, ಜಗತ್ತುಗಳೆಲ್ಲ ಸೃಷ್ಟಿಯಾಗುವ ಮೊದಲೇ ಆತನ ಆಸ್ತಿತ್ವವಿತ್ತೆಂದು ಹಾಗೂ ಆತನೇ ಎಲ್ಲದರ ಕಾರಣ ಮತ್ತು ಕರ್ತ ಎಂದು ಪ್ರತಿಪಾದಿಸುತ್ತದೆ, ವಿಷ್ಣು ಮತ್ತು ವಿಶ್ವ ಒಂದೇ ಹಾಗೂ ವಿಷ್ಣು ಎಲ್ಲ ಉತ್ತಮ ಗುಣ ಸಂಪನ್ನ. ವಿಷ್ಣುವು ತಾನೇ ಸೌಶೀಲ್ಯ, ಸೌಂದರ್ಯ ಮತ್ತು ಲಾವಣ್ಯಗಳ ದೇವತೆಯಾಗಿ ತನ್ನ ಭಕ್ತರಿಗೆ ಪ್ರಿಯನಾಗುತ್ತಾನೆ. ಮಾನವನ ಮನಸ್ಸು ಎಂದೂ ಯೋಚಿಸಬಲ್ಲ ಎಲ್ಲ ಶ್ರೇಷ್ಠತೆಯ ಆಲಯ ಆತ.

ವಿಜಯನಗರ ಸಾಮ್ರಾಟರ ಆಶ್ರಯದಲ್ಲಿ 14ನೆಯ ಶತಮಾನದಿಂದ 16ನೆಯ ಶತಮಾನದವರೆಗೆ ವಿಶಿಷ್ಟಾದ್ವೈತದ ವೈಷ್ಣವ ಧರ್ಮವು ಹೊಸ ಶಕ್ತಿಯ ವೃದ್ಧಿಯನ್ನು ಸಂಪಾದಿಸಿಕೊಂಡಿತು. 14ನೆಯ ಶತಮಾನಾಂತ್ಯ ಕಾಲದಲ್ಲಿ ತೆಂಗಲೈ ಮತ್ತು ವಡಂಗಲೈ ಎಂದು ಪರಿಚಿತವಾದ ಎರಡು ಪಂಥಗಳು ವಿಶಿಷ್ಟಾದ್ವೈತದಲ್ಲಿ ಕಾಣಿಸಿಕೊಂಡವು. ವಡಂಗಲೈಯು ಸಂಸ್ಕೃತ ಶ್ರುತಿಗಳ ಅಗ್ರಮಾನ್ಯತೆಗೆ ಒತ್ತು ನೀಡಿದರೆ ತೆಂಗಲೈಯು ತಮಿಳು 'ಪ್ರಬಂಧ'ಗಳ ಮೌಲ್ಯಕ್ಕೆ ಮಹತ್ವ ನೀಡಿತು[5].

**ವೈಷ್ಣವ ಧರ್ಮ ಮತ್ತು ದ್ವೈತ:**

ವೈಷ್ಣವ ಧರ್ಮದ ದ್ವೈತದರ್ಶನದ ಪ್ರತಿಪಾದಕರು ಮತ್ತು ಮಾಧ್ವ ಬ್ರಾಹ್ಮಣ ಪಂಥದ ಸ್ಥಾಪಕರು ಮಧ್ವಾಚಾರ್ಯರು (ಕ್ರಿ.ಶ. 1238 – 1317). ದ್ವೈತ ಸಿದ್ಧಾಂತವು ಜೀವಾತ್ಮವು ಪರಮಾತ್ಮನಿಂದ ಭಿನ್ನವೆಂದು ಸಾರುತ್ತದೆ. ಬೇರೆ ಮಾತಿನಲ್ಲಿ ಹೇಳುವುದಾದರೆ, ಜೀವಾತ್ಮವು ಪರಮಾತ್ಮನಿಂದ ಅಭಿನ್ನವಲ್ಲ. ಜೀವನವು ಏಕ ಹಾಗೂ ನಿತ್ಯವಾದುದು; ಅದು ಪರಮಾತ್ಮ ನನ್ನು ಅವಲಂಭಿಸುತ್ತದೆ. ಆದ್ದರಿಂದ ವಿಶ್ವಚೈತನ್ಯದೊಂದಿಗೆ ಜೀವಾತ್ಮವು ಲೀನವಾಗುತ್ತದೆಂಬ ಅರ್ಥದಲ್ಲಿ ಮೋಕ್ಷವನ್ನು ಈ ಸಿದ್ಧಾಂತವು ತಿರಸ್ಕರಿಸುತ್ತದೆ; ಅದರಿಂದಾಗಿ ಮರಣಾನಂತರ ಅದು ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ದೇವರ ಇಷ್ಟಾನುಸಾರ ಜೀವ ಅಥವಾ ಆತ್ಮಗಳು ಯೋಗ್ಯ ಶರೀರಗಳನ್ನು ಪಡೆಯುತ್ತವೆ ಮತ್ತು ಪ್ರಪಂಚದಲ್ಲಿ ಜನ್ಮತಾಳುತ್ತವೆ ಹಾಗೂ ಜನನ–ಮರಣಗಳ ಸುದೀರ್ಘ ಸರಣಿಯ ತರುವಾಯ, ಆಯಾ ಗುರುಗಳ ಮಾರ್ಗ ದರ್ಶನದಲ್ಲಿ ಜ್ಞಾನ ಮತ್ತು ದೈವಭಕ್ತಿಯ ಮೂಲಕ ಅವು ಪೂರ್ಣ ವಿಕಸಿತವಾದ ಅಂತಸ್ಥ ಶಕ್ತಿಸಾಮರ್ಥ್ಯಗಳನ್ನು ಹೊಂದುತ್ತವೆ. ಕಟ್ಟಕಡೆಗೆ ಜೀವಾತ್ಮಗಳು ಪೂರ್ಣ ಆತ್ಮತಾಜ್ಞಾನವನ್ನು ಪಡೆಯುತ್ತವೆ; ಅದೇ ಮುಕ್ತಿ ಎಂದು ಕರೆಯಲಾಗಿದೆ[6].

ಪಶ್ಚಿಮ ಕರಾವಳಿಯ ಉಡುಪಿ ಪೀಠದಿಂದ ಮಧ್ವಾಚಾರ್ಯರ ದ್ವೈತ ಸಿದ್ಧಾಂತವು ಹರಡಿತು ಹಾಗೂ ಅದು ಸಾಳುವ, ತುಳುವ ಮತ್ತು ಅರವೀಡು ವಂಶಗಳಿಗೆ ಸೇರಿದ ವಿಜಯನಗರ ಸಾಮ್ರಾಟರಿಂದ ಪೋಷಿತವಾಯಿತು. ಇಮ್ಮಡಿ ದೇವರಾಯನ ಕಾಲದಲ್ಲಿ ಮಾಧ್ವ ಗುರುವ್ಯಾಸತೀರ್ಥರು ಬಾಳ ಧರ್ಮೋಪದೇಶ ಮಾಡಿದರು. ವ್ಯಾಸತೀರ್ಥರ ಶಿಷ್ಯರಲ್ಲೊಬ್ಬರಾದ ವಾದಿರಾಜತೀರ್ಥರಿಂದ ನಡೆದ

ಮಧ್ವೋಪದೇಶಗಳ ಪ್ರಚಾರದ ಮೂಲಕ ವೈಷ್ಣವಧರ್ಮವು ಪ್ರಧಾನ್ಯಗಳಿಸಿದುದು ಇಮ್ಮಡಿ ದೇವರಾಯನ ತರುವಾಯ ಮಾತ್ರವೇ. ಇಮ್ಮಡಿ ದೇವರಾಯನ ಆಸ್ಥಾನವನ್ನು ಅಲಂಕರಿಸಿದ ಕುಮಾರವ್ಯಾಸನು ಒಬ್ಬ ವೈಷ್ಣವ ಕವಿಯಾಗಿದ್ದನು.

**ವೀರಶೈವ ಧರ್ಮ ಮತ್ತು ಶಕ್ತಿವಿಶಿಷ್ಟಾದ್ವೈತ:**

ಲಿಂಗಾಯತ ಅಥವಾ ಶಿವಾಚಾರ ಎಂದು ಜನಪ್ರಿಯವಾದ ಧರ್ಮದ ಪ್ರಭಾವದಡಿ ವೀರಶೈವ ಸಮುದಾಯವು ಬರುತ್ತದೆ. 12ನೆಯ ಶತಮಾನದಲ್ಲಿ ಕಳಚೂರಿ ಅರಸ ಬಿಜ್ಜಳನ ಮಂತ್ರಿಯಾದ ಬಸವಣ್ಣನು ಶೈವ ಧರ್ಮಕ್ಕೆ ಹೊಸ ತಿರುವು ನೀಡಿದನು ಹಾಗೂ ಶಿವನ ದೃಷ್ಟಿಯಲ್ಲಿ ಎಲ್ಲ ಮಾನವರೂ ಸಮಾನರೆಂದು ಉಪದೇಶಿಸಿದನು.

ವೀರಶೈವಧರ್ಮದ ಕೇಂದ್ರವು ಕಲ್ಯಾಣವಾಗಿತ್ತು. 14ನೆಯ ಶತಮಾನದಲ್ಲಿ ಕಲ್ಯಾಣವು ಬಹಮನಿ ರಾಜ್ಯಕ್ಕೆ ಸೇರಿಹೋದ ಮೇಲೆ ಈ ಧರ್ಮವು ವಿಜಯನಗರ ಸಾಮ್ರಾಜ್ಯದಲ್ಲಿ ಅನುಕೂಲಕರವಾದ ಆಶ್ರಯವನ್ನು ಕಂಡುಕೊಂಡಿತು. ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ವೀರಶೈವಧರ್ಮವು ಗಣನೀಯ ಪ್ರೋತ್ಸಾಹ ಪಡೆಯಿತು.

ಶಕ್ತಿವಿಶಿಷ್ಟಾದ್ವೈತ ಧಾರ್ಮಿಕ ಸಿದ್ಧಾಂತವು ಶಕ್ತಿ ಅಥವಾ ವಿಶ್ವಚೈತನ್ಯವು ಶಿವನೊಡನೆ ಬೇರ್ಪಡಿಸಲಾಗದಂತೆ ಸಂಬಂಧಿಸಿದುದೆಂದು ಪ್ರತಿಪಾದಿಸುತ್ತದೆ. ಆತನ ಸ್ವಪ್ರಜ್ಞೆಯ ರೂಪದಲ್ಲಿ ಶಕ್ತಿಯು ಶಿವನ ಅವಿಭಾಜ್ಯ ಅಂಗ. ಶಿವನ ಆಜ್ಞೆಗಳನ್ನು ಕಾರ್ಯಗತಮಾಡುವ ದಾಸಿ ಶಕ್ತಿ. ಶಿವನನ್ನು ಶಕ್ತಿವಿಶಿಷ್ಟವೆಂದು

ವರ್ಣಿಸಿರುವುದು ಈ ಅರ್ಥದಲ್ಲಿಯೇ. ಇಲ್ಲಿ ಶಿವ ಮತ್ತು ಶಕ್ತಿಯರ ಸಾರಭೂತವಾದ ಅಭಿನ್ನತೆಗೆ ಒತ್ತುನೀಡಲಾಗಿದೆ ಮತ್ತು ಅದರಿಂದಾಗಿಯೇ ಶಕ್ತಿ ವಿಶಿಷ್ಟಾದ್ವೈತವೆಂಬ ಹೆಸರು ಬಂದಿದೆ. "ವೀರಶೈವಧರ್ಮವು ಬೋದಿಸುವ ವಿಮೋಚನೆಯ ವಿಧಾನ ಭಕ್ತಿಯದು ಅಥವಾ ದೈವಪ್ರೀತಿಯದು ಹಾಗೂ ಶಿವನೊಂದಿಗೆ ಸಾಮರಸ್ಯ ಸಿದ್ಧಿಗೆ ಇರುವ ನೈತಿಕ ಮತ್ತು ಅಧ್ಯಾತ್ಮಿಕ ಮಾರ್ಗವದು"[7].

ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ವೀರಶೈವ ಧರ್ಮಕ್ಕೆ ಗಣನೀಯ ರಾಜಾಶ್ರಯ ದೊರೆಯಿತು. ಅರಸನ ಸೇನಾನಿ ಲಕ್ಕಣ್ಣದಣ್ಣಾಯಕ, ಚಾಮರಸ ಮತ್ತು ಇತರರು ಆತನ ಆಸ್ಥಾನದಲ್ಲಿದ್ದ ದೊಡ್ಡ ವೀರಶೈವ ಕವಿಗಳಾಗಿದ್ದರು. ಇಮ್ಮಡಿ ದೇವರಾಯ ನೀಡಿದ ಉತ್ತೇಜನ ಪ್ರೋತ್ಸಾಹಗಳಿಂದಾಗಿ ಆತನನ್ನು ವೀರಶೈವಾಗಮಸಂಪನ್ನನೆಂದು ಕರೆಯಲಾಗಿದೆ.

**ಇಸ್ಲಾಮ್ ಧರ್ಮ:**

ಇಸ್ಲಾಮಿನ ಪವಿತ್ರ ಗ್ರಂಥಗಳು ಸಂಸ್ಥಾಪಕನಿಗೆ ಉಂಟಾದ ದೇವರ ಕಂಠೋಕ್ತವಾಗಿ ಬಂದ ದಿವ್ಯ ದರ್ಶನ ಎಂಬ ದೃಷ್ಟಿಯಿಂದ ಅದು ಪ್ರಪಂಚದ ಧರ್ಮಗಳಲ್ಲಿ ಅಸಧಶವಾದ ಒಂದು ಧರ್ಮ, ಪವಿತ್ರ ಕುರಾನಿನ ಪ್ರಧಾನ ವಾಣಿ ಅಲ್ಲಾಹನದೇ. ಕೆಲವೊಮ್ಮೆ ಮಹಮ್ಮದನೊಂದಿಗೆ ಸುಮ್ಮನೆ ಮಾತನಾಡುತ್ತಿರುವಂತೆ ಅಲ್ಲಾಹನನ್ನು ಪ್ರತಿನಿಧಿಸಲಾಗಿದೆ ಹಾಗೂ ಕೆಲವೊಮ್ಮೆ ಆತನ ಮುಖವಾಣಿಯಾಗಿ

ಮಹಮ್ಮದನನ್ನು ಮಾತನಾಡುವ ಹಾಗೆ ಆದೇಶಿಸುವಂತೆ ಚಿತ್ರಿಸಿದೆ. ಏಕದೇವವಾದ ಮಹಮ್ಮದನ ಸರ್ವೋತ್ಕ್ರಷ್ಟ ಧಾರ್ಮಿಕ ಸಂದೇಶ, ಇರುವನೊಬ್ಬನೇ ದೇವರು; ಆತನ ಹೆಸರು ಅಲ್ಲಾಹ್.

ಅತಿ ಪ್ರಾಚೀನಕಾಲದಿಂದ ಭಾರತದ ಪಶ್ಚಿಮ ಕರಾವಳಿಯಲ್ಲಿ ಅರಬರ ವ್ಯಾಪಾರ ವ್ಯವಹಾರಗಳು ಇಸ್ಲಾಮಿನ ಪ್ರಸಾರಕ್ಕೆಡೆಮಾಡಿಕೊಟ್ಟಿದ್ದವು. ಅಲ್ಲಾವುದೀನ್ ಖಿಲ್ಜಿಯ ಅನಂತರ ಹಾಗೂ ಆತನ ಸೇನಾನಿ ಮಲಿಕ್ ಕಾಫರನು ವಿಂಧ್ಯಪರ್ವತಗಳ ಮುಖಾಂತರ ದಕ್ಷಿಣ ಭಾರತವನ್ನು ಪ್ರವೇಶಿಸಿದ ತರುವಾಯ ಮಾತ್ರವೇ ದಕ್ಷಿಣದಲ್ಲಿ ಮಹಮ್ಮದೀಯ ಪ್ರಭಾವ ಅನುಭವಕ್ಕೆ ಬಂದಿತು. 14ನೆಯ ಶತಮಾನದಲ್ಲಿ ಗುಲಬರ್ಗಾದಲ್ಲಾದ ಬಹಮನಿ ರಾಜ್ಯ ಸ್ಥಾಪನೆಯು ಇಸ್ಲಾಮಿಗೆ ಹೆಚ್ಚಿನ ಪ್ರೇರಣೆ ಪ್ರೋತ್ಸಾಹಗಳನ್ನು ನೀಡಿತು. ಫಿರೋಜ್ ಶಾಹನೊಡನೆ ಒಂದನೆಯ ದೇವರಾಯನ ಮಗಳ ಮದುವೆಯಿಂದ ಮಹಮ್ಮದೀಯರು ವಿಜಯನಗರ ಸೈನ್ಯಕ್ಕೆ ಸೇರಲು ಮೊದಲಾಯಿತೆಂದು ಹೇಳಲಾಗಿದೆ[8].

ಇಮ್ಮಡಿ ದೇವರಾಯನು ಮುಸ್ಲಿಮರು ತನ್ನ ಸೈನ್ಯ ಸೇರಲು ಉತ್ತೇಜಿಸಿದನು; ಏಕೆಂದರೆ ಕದನದಲ್ಲಿ ಮುಸಲ್ಮಾನ ಅಶ್ವಾಳು, ಕಲಾಳು ಮತ್ತು ಬಿಲ್ಲಾಳುಗಳ ಶ್ರೇಷ್ಠತೆಯನ್ನು ಆತ ಅರಿತಿದ್ದನು. ಕ್ರಿ.ಶ. 1423ರಲ್ಲಿ ಆತನಿಗೆ ಸೇವೆ ಸಲ್ಲಿಸುತ್ತಿದ್ದ ಕೆಲವು ಮಹಮ್ಮದೀಯ ಪ್ರಜೆಗಳನ್ನು ಆತ ಹೊಂದಿದ್ದು ಅವರಲ್ಲಿ ಅಹ್ಮದ್ ಖಾನನು ಆತನ ಸೇವಕನಾಗಿದ್ದನು. ಇಮ್ಮಡಿ ದೇವರಾಯನು ತನ್ನ ಸೈನ್ಯದ ಅಶ್ವದಳದಲ್ಲಿ 10,000 ಮುಸಲ್ಮಾನರನ್ನು ಹೊಂದಿದ್ದನೆಂದು ಕ್ರಿ.ಶ. 1430ರ ತೇದಿಯ ಶ್ರೀರಂಗಪಟ್ಟಣದ ಶಾಸನವೊಂದು ಉಲ್ಲೇಖಿಸುತ್ತದೆ. ಕ್ರಿ.ಶ.

1442ರಲ್ಲಿ ಕುಶಲ ಮುಸಲ್ಮಾನ ಸೈನಿಕರನ್ನು ಇಟ್ಟುಕೊಳ್ಳುವುದರ ಮೂಲಕ ಆತ ತನ್ನ ಸೈನ್ಯವನ್ನು ಸುಧಾರಿಸಿದನು. ಆತ ಅವರಿಗೆ ಜಹಾಗೀರುಗಳನ್ನು ಹಂಚಿಕೊಟ್ಟನು. ವಿಜಯನಗರ ಪಟ್ಟಣದಲ್ಲಿ ಅವರ ಉಪಯೋಗಕ್ಕಾಗಿ ಮಸೀದಿಗಳನ್ನು ಕಟ್ಟಿಸಿಕೊಟ್ಟನು ಹಾಗೂ ಅವರ ಧರ್ಮದ ಹೆಸರಿನಲ್ಲಿ ಅವರನ್ನು ಯಾರೂ ಪೀಡಿಸಿಕೂಡದೆಂದು ಆಜ್ಞೆಮಾಡಿದನು. ಈ ರೀತಿಯಲ್ಲಿ ಮುಸ್ಲಿಮರ ಬಗ್ಗೆ ಆತ ಧರ್ಮ ಸಹಿಷ್ಣುತೆಯನ್ನು ತೋರಿದನು. ತಮ್ಮ ಧರ್ಮಕ್ಕೆ ವಿರುದ್ಧವಾಗದಂತೆ ತನ್ನ ಸಮಕ್ಷಮದಲ್ಲಿ ಮುಸಲ್ಮಾನರು ಮುಜುರೆಯೊಪ್ಪಿಸಲು ಅನುಕೂಲವಾಗುವಂತೆ ತನ್ನ ಸಿಂಹಾಸನದ ಮುಂದೆ ಒಂದು ಬೆಲೆಬಾಳುವ ಪೀಠದಮೇಲೆ ಪವಿತ್ರ ಕುರಾನಿನ ಪ್ರತಿಯೊಂದನ್ನು ಇರಿಸಲೂ ಆದೇಶಿಸಿದನು. ಕ್ರಿ.ಶ. 1520 ಮತ್ತು 1522ರ ನಡುವಿನ ವಿಜಯನಗರದ ಬಗ್ಗೆ ತನ್ನ ಕಥನವನ್ನು ಬರೆದ ಡೊಮಿಂಗೊ ಪೇಯಿಸ್. ಪಟ್ಟಣದ ತೀರ ಕೊನೆಯಲ್ಲಿ ಮುಸ್ಲಿಮರ ವಾಸ್ಥಾನಗಳಿದ್ದವೆಂದು ಮತ್ತು ಅವರು ಬಹಳ ಸಂಖ್ಯೆಯಲ್ಲಿದ್ದರೆಂದು ಹೇಳುತ್ತಾನೆ[9].

ಇಮ್ಮಡಿ ದೇವರಾಯನ ಆಳ್ವಿಕೆಯು ಆತನ ಧಾರ್ಮಿಕಸಹಿಷ್ಣುತೆಯಿಂದ ವಿಶೇಷಿತವಾಗಿತ್ತು ಹಾಗೂ ತನ್ನ ಸಾಮ್ರಾಜ್ಯದಲ್ಲಿ ವಿವಿಧ ಧರ್ಮಗಳ ಆಚರಣೆಗೆ ಆತ ಉತ್ತೇಜನ ನೀಡಿದನು. ಬೇರೆ ಬೇರೆ ಧರ್ಮಗಳನ್ನು ಪ್ರತಿನಿಧಿಸುತ್ತಿದ್ದ ವಿದ್ವಾಂಸರನ್ನು ಆತ ಪೋಷಿಸಿದನು. ಆತನ ಆಳ್ವಿಕೆಯಲ್ಲಿನ ಧಾರ್ಮಿಕ ಸಾಮರಸ್ಯವು ಆತನ ಉದಾರದೃಷ್ಟಿಯನ್ನು ಮತ್ತು ಎಲ್ಲ ಮಾನವರನ್ನು ಮತ್ತು ಅವರ ಧಾರ್ಮಿಕ ಶ್ರದ್ಧೆಗಳನ್ನೂ ಗೌರವಿಸುವ ಆತನ ಅಂತರಂಗದ ಆಕಾಂಕ್ಷೆಯನ್ನು ಪ್ರಕಟಪಡಿಸುತ್ತದೆ.

**ಧಾರ್ಮಿಕ ಬೆಳವಣಿಗೆಗಳು:**

ಹಿಂದೂ ದರ್ಮದ ರಕ್ಷಕರೆಂದು ತಮ್ಮನ್ನು ಬಣ್ಣಿಸಿಕೊಂಡ ವಿಜಯನಗರದ ಅರಸರುಗಳ ಧಾರ್ಮಿಕ ಘನತೆಗೂ ಹಾಗೂ ಇತರ ಧಾರ್ಮಿಕ ಪಂಥಗಳ ಬಗ್ಗೆ ಅವರ ಸಹಿಷ್ಣುತಾದೃಷ್ಟಿಗೂ ಬುಕ್ಕರಾಯನ ಶವ್ರವಣಬೆಳಗೊಳದಲ್ಲಿಯ ಕ್ರಿ.ಶ. 1368ರ ಪ್ರಸಿದ್ಧ ಶಾಸನವು ಒಂದು ಅತ್ಯುತ್ತಮ ಪ್ರಮಾಣ. ಇವರ ಆಶ್ರಯ ಹಾಗೂ ಉತ್ತೇಜನದಿಂದ ವಿಶೇಷವಾಗಿ ವೈದಿಕ, ವೀರಶೈವ ಮತ್ತು ಜೈನ ಮತಗಳು ಅಭಿವೃದ್ಧಿಯಾಗುತ್ತ ಬೆಳಗಿದವು. ಹಂಪಿ, ಕನಕಗಿರಿ, ಬೀಳಗಿ, ಭಟ್ಕಳ ಮೊದಲಾದ ಸ್ಥಳಗಳಲ್ಲಿಯ ಶೈವ, ವೈಷ್ಣವ ಮತ್ತು ಜೈನ ಮತಗಳ ಕಲಾತ್ಮಕ ನಿರ್ಮಿತಿಗಳು ಈ ವಿಷಯವನ್ನು ಪುಟಗಟ್ಟಲೆ ಸಾರಿ ಹೇಳುತ್ತವೆ. ಈ ಸ್ಥಳಗಳಲ್ಲಿಯ ಹಾಗೂ ಇತರೆಡೆಗಳಲ್ಲಿಯ ನಿರ್ಮಿತಿಗಳು ಅತ್ಯಂತ ಪ್ರಾಚೀನ ಕಾಲದಿಂದಲೂ ಬಂದ ಪರಂಪರೆಯ ಆಚರಣೆಯನ್ನು ಕುಂದದಂತೆ ಮುಂದುವರೆಸಿರುವುದನ್ನು ತೋರಿಸುತ್ತದೆ. ಆದರೂ ಕೂಡ ವಿಶೇಷವಾಗಿ ವೈಷ್ಣವ ಮತ್ತು ಶೈವ ಮತಗಳಲ್ಲಿ ಕೆಲವೊಂದು ಹೊಸ ಬೆಳವಣಿಗೆಗಳು ಈ ಕಾಲದ ವಿಶಿಷ್ಟಿ ಗುರುತುಗಳಾಗಿವೆ. ಈ ಲಕ್ಷಣಗಳನ್ನು ಆನೆಗೊಂದಿ ಭಾಗದಲ್ಲಿಯ ಕೆಲವು ಶಿಲಾಮೂರ್ತಿಗಳಲ್ಲಿ ಗುರುತಿಸಬಹುದು. ಈ ಶಿಲಾಮೂರ್ತಿಗಳನ್ನು 1971–73ರಲ್ಲಿ ಗಂಗಾವತಿ ತಾಲ್ಲೂಕಿನಲ್ಲಿನ ಪುರಾತತ್ವ ಅನ್ವೇಷಣಗಳಲ್ಲಿ ಶೋಧಿಸಲಾಯಿತು.

ಆನೆಗೊಂದಿಯ "ರಾಮಾಯಣ" ಪ್ರಸಿದ್ಧ ವಾನರರ ಕಿಷ್ಕಿಂಧೆಯೆಂದು ಸುಮಾರು 11ನೇ ಶತಮಾನದಿಂದಲೂ ಪರಂಪರಾನುಗತ ನಂಬಿಕೆ. ಇಲ್ಲಿಂದ ಸುಮಾರು 10ಕಿ.ಮೀ. ದೂರದಲ್ಲಿಯ ದೇವಿಘಾಟದಲ್ಲಿರುವ ಕ್ರಿ.ಶ. 1069ರ ಕನ್ನಡ

ಶಾಸನದಲ್ಲಿ “ತುಂಗಭದ್ರ ತಟದ ಬಡಗ ಕಿಕ್ಕಿನ್ಧಮೀ ಪರ್ವತಂ” 11ನೇಯ ಸಾಲಲ್ಲಿ ವಿವರಿಸಲಾಗಿದೆ[10].

ಆನೆಗೊಂದಿಯಲ್ಲಿ “ರಾಮಾಯಣ”ದ ಯಾವುದಾರೊಂದು ಘಟನೆಗೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಹಲವಾರು ಸ್ಥಳಗಳಿವೆ. ಈ ಗ್ರಾಮದ ಪೂರ್ವಭಾಗಕ್ಕೆ ‘ಚಿಂಚಲಕೋಟೆ’ಯೆಂದು ಹೆಸರಿದೆ. ಇಲ್ಲಿ ಒಂದು ಬೆಟ್ಟದ ತಪ್ಪಲಿನ ಪ್ರದೇಶವನ್ನು ಸುತ್ತುವರೆದಂತೆ ತುಂಗಭದ್ರಾ ನದಿಯ ದಂಡೆಯುದ್ಧಕ್ಕೂ ಸುಮಾರು 1.15ಮೀ. ಎತ್ತರದ 1.0ಮೀ. ಅಗಲದ ಒಂದು ರಕ್ಷಣೆಯ ಕಲ್ಲುಗೋಡೆಯಿದೆ. ಇದನ್ನು ಯಾವುದೆ ಕೆಸರುಮಣ್ಣು, ಗಾರೆಯಿಲ್ಲದೆ ವಿವಿಧ ಪ್ರಮಾಣದ ಸಹಜವಾಗಿ ದೊರೆಯುವ ದೊಡ್ಡ ದೊಡ್ಡ ಕಲ್ಲುಗುಂಡುಗಳಿಂದ ಕಟ್ಟಲಾಗಿದೆ. ಇಲ್ಲಿಂದಲೆ ಪದಚ್ಯುತ ರಾಜಕುಮಾರ ಸುಗ್ರೀವ ಮತ್ತು ಅವನ ಸಂಗಾತಿಗಳು ಋಷಿವೇಷದಲ್ಲಿದ್ದ ರಾಮ ಲಕ್ಷ್ಮಣರು ತಮ್ಮೆಡೆಗೆ ಬರುವುದನ್ನು ನೋಡಿದರು. ಇವರು ತಮ್ಮ ಸಹೋದರ ಮಹಾನ್ ಬಲಶಾಲಿ ವಾಲಿರಾಜನ ಕಡೆಯ ಗುಪ್ತಚಾರರಿರಬಹುದೆಂದು ಮನಸ್ಸಿನಲ್ಲಿ ಕಸಿವಿಸಿಗೊಂಡರು. ಆದ್ದರಿಂದಲೆ ಈ ಸ್ಥಳಕ್ಕೆ ‘ಚಿಂಚಲ ಕೋಟೆ ಯೆಂದು ಹೆಸರು ಬಿತ್ತು. ಮತ್ತು ನದಿಯ ಎದುರು ದಂಡೆಯಿಂದ ಸ್ವಲ್ಪದೂರದಲ್ಲಿ ತಾಳೆಮರಗಳ ವನದಲ್ಲಿ ಕಿಟ್ಟದಂಥ ಒಂದು ಬೂದಿ ದಿಬ್ಬವಿದೆ. ಇದಕ್ಕೆ ‘ವಾಲಿ ಅಥವಾ ಕಾಷ್ಠ’ ಎಂದು ಸ್ಥಳೀಯ ಹೆಸರು. ಇದು ವಾಲಿಯ ಶವಸಂಸ್ಕಾರವನ್ನು ದಹನಕ್ರಿಯೆಯಿಂದ ಮಾಡಿದ ಗುರುತೆಂದು ಸಾಂಪ್ರದಾಯಿಕ ನಂಬಿಕೆ. ಇದರಂತೆಯೇ, ಈ ಗ್ರಾಮದ ಪಶ್ಚಿಮ ಭಾಗದಲ್ಲಿರುವ ‘ವಾಲಿ ಭಂಡಾರ’ವೆಂದು ಕರೆಯಲಾದ ಒಂದು ಬೆಟ್ಟ, ಅಂಜನಾದ್ರಿ ಬೆಟ್ಟ, ತುಂಗಭದ್ರೆಯ ಉಪನದಿ

‘ಪಂಪಾಸರೋವರ’; ಈ ಸರೋವರದ ಹತ್ತಿರವೇ ‘ಶಬರೀ ಗುಹೆ’ ಯೆಂಬ ಒಂದು ನಿಸರ್ಗ ಗವಿ ಇವೆ. ನಿಜ, ಇವೆಲ್ಲವೂ ಈ ಮಹಾಕಾವ್ಯದ ಘಟನೆಗಳಿಗೆ ಸಂಬಂಧವಿದ್ದಿತ್ತೊ ಇಲ್ಲವೊ ಎಂಬುದನ್ನು ಸ್ಪಷ್ಟಪಡಿಸುವಂಥ ಯಾವುದೇ ಸಾಕ್ಷಿಭೂತವಾದ ಗುರುತುಗಳೆಲ್ಲದ ನಿಸರ್ಗನಿರ್ಮಿತ ಕೃತಿಗಳು. ಇದು ಹೇಗೆ ಇರಲಿ, ಈ ಸ್ಥಳೀಯ ಪರಂಪರೆ ಮತ್ತು ಶಾಸನಗಳ ಉಲ್ಲೇಖಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಾಡುತ್ತಿರುವ ಈ ಪ್ರಾಚೀನ ದೇವಾಲಯಗಳು ಮತ್ತು ವಿಗ್ರಹಗಳು ಸೂಚಿಸುವ ಧಾರ್ಮಿಕ ನೆಲೆಗಳನ್ನು ನಾವು ಅರಿತುಕೊಳ್ಳಬೇಕಾಗುವುದು[11].

ಆನೆಗೊಂದಿ ಗ್ರಾಮದ ದಕ್ಷಿಣೋತ್ತರದುದ್ದಕ್ಕೂ ಅಲ್ಲಲ್ಲಿ ಹಾಳುಬಿದ್ದ ಸುಮಾರು ಏಳೆಂಟು ಹನುಮಂತ ದೇವಾಲಯಗಳಿವೆ. ಇವುಗಳ ಹಾಗೂ ಇತರ ದೇವಾಲಯಗಳ ಕಂಬಗಳು ಗ್ರಾಮದಲ್ಲಿ ಅಲ್ಲಲ್ಲಿ ಚಿಲ್ಲಾಪಿಲ್ಲಿಯಾಗಿ ಬಿದ್ದಿವೆ. ಈ ಕಂಬಗಳ ಬುಡ, ಮಧ್ಯ ಮತ್ತು ಮೇಲ್ಭಾಗಗಳಲ್ಲಿ ದೇವ – ದೇವಿಯರ, ದೇವತೆಗಳ, ಧಾರ್ಮಿಕ ಕಥೆಗಳ ದೃಶ್ಯಗಳ, ಮುನಿಗಳ, ಕುಳಿತ ಭಂಗಿಯಲ್ಲಿಯ ಸಿಂಹವೇ ಮೊದಲಾದ ಪ್ರಾಣಿಗಳ ಹಾಗೂ ಲತಾ ಬಳ್ಳಿಗಳ ಉಬ್ಬು ಶಿಲ್ಪಗಳಿವೆ. ಆದರೆ ಒಂದು ಸ್ವಾರಸ್ಯದ ಸಂಗತಿಯೆಂದರೆ ಹನುಮಂತನ ಹಾಗೂ ಅವನ ವಿಶಿಷ್ಟ ಸಾಧನೆಗಳ, ಅಂದರೆ ಹನುಮಂತನು ರಾಮನಿಂದ ಅಂಗುಲೀಯಕವನ್ನು ತಗೆದುಕೊಳ್ಳುತ್ತಿರುವುದು, ಅವನ ಅನುಪಮ ಸಮುದ್ರ ಲಂಘನ, ಲಂಘನ ಕಾಲದಲ್ಲಿ ವಿಜಯಶಾಲಿಯಾಗಿ ಸುರಸಾ ರಾಕ್ಷಸಿಯ ಹೊಟ್ಟೆಯನ್ನು ಹೊಕ್ಕು ಹೊರಗೆ ಬಂದುದು, ಸೀತೆಯ ಶೋಧನೆ, ಸೀತೆಯಿಂದ ಚೂಡಾಮಣಿಯನ್ನು

ತಗೆದುಕೊಳ್ಳುತ್ತಿರುವುದು, ಹನುಮಂತನ ಮೇಲೆ ಇಂದ್ರಜಿತುವಿನ ಬ್ರಹ್ಮಾಸ್ತ್ರಪ್ರಯೋಗ, ಸಿಂಹಾಸನಸ್ಥ ರಾವಣನೊಡನೆ ಇರಿಕೆ ಹಾಕಿದ ತನ್ನ ಬಾಲದ ಮೇಲೆ ಕುಳಿತ ಹನುಮಂತನ ಸಂವಾದ, ಇವನ ಬಾಲಕ್ಕೆ ಬೆಂಕಿ ಹಚ್ಚುತ್ತಿರುವುದು, ಲಂಕಾದಹನ, ರಾಮನಿಗೆ ಸೀತೆಯ ಚೂಡಾಮಣಿಯನ್ನು ಕೊಡುತ್ತಿರುವುದು, ಯುದ್ಧದ ಸಮಯದಲ್ಲಿ ಸಂಜೀವಿನೀ ಪರ್ವತವನ್ನು ಹೊತ್ತು ತರುತ್ತಿರುವುದು ಮೊದಲಾದ ಶಿಲ್ಪಗಳೇ ಅತ್ಯಂತ ಹೆಚ್ಚು[12]. 'ವಾಲಿ ಭಂಡಾರ' ಬಂಡೆಯ ಮೇಲೆ ಸೀತೆಯ ಶೋಧನೆಯಲ್ಲಿ ಜಯಶಾಲಿಗಳಾದ ವಾನರರು ರಾಜನ ಹೂವು ಹಣ್ಣು ಹಂಪಲುಗಳ ತೋಟವನ್ನು ಪ್ರವೇಶಿಸಿದ 'ಮಧುವನ" ಚಿತ್ರ ಫಲಕವಿದೆ. ನಿಜ, ಸುಮಾರು 7ನೇ ಶತಮಾನದ ಬಾದಾಮಿ ಚಾಲುಕ್ಯರ ಕಾಲದಿಂದ ಉದ್ದಕ್ಕೂ, ಈಗ ಅಧ್ಯಯನ ಮಾಡುತ್ತಿರುವ ಕಾಲವೂ ಸೇರಿದಂತೆ (ಉದಾ: ಹಂಪಿಯಲ್ಲಿಯ 'ಹಜಾರ ರಾಮ' ದೇವಾಲಯದ ಗೋಡೆಗಳ ಮೇಲಿನ ರಾಮಾಯಣ ಕಥಾನಕ ಶಿಲ್ಪ ಫಲಕಗಳು) ರಾಮಾಯಣ, ಮಹಾಭಾರತ, ಹರಿವಂಶಗಳಲ್ಲಿಯ ಮುಖ್ಯ ಘಟನೆಗಳ ಉಬ್ಬು ಶಿಲ್ಪಗಳು ದೇವಾಲಯಗಳ ಮತ್ತು ಕಂಬಗಳ ಮೇಲಿರುವುದು ಸರ್ವೇಸಾಮಾನ್ಯ. ಆದರೆ ಆನೆಗೊಂದಿಯಲ್ಲಿ ಈ ಕಾವ್ಯದ ಮುಖ್ಯ ಘಟನೆಗಳ ಸರಮಾಲೆಯನ್ನು ತೋರಿಸದೇ ಕೇವಲ ಹನುಮಂತನ ಅದ್ಭುತ ಸಾಧನೆಗಳನ್ನು ಶಿಲ್ಪದಲ್ಲಿ ಮೂಡಿಸಿರುವುದು ಗಮನರ್ಹಾ. ನಿರ್ದಿಷ್ಟವಾಗಿ ಈ ಸ್ಥಳವೇ ಕಿಷ್ಕಿಂಧೆಯೆಂಬ ಪ್ರತೀತಿಯನ್ನು ಚಿರಸ್ಥಾಯಿಯಾಗಿ ಮಾಡುವ ಪ್ರಯತ್ನವೇ ಇದಕ್ಕೆ ಕಾರಣ. ಹೀಗೆ ಮನಸ್ಸಿನಲ್ಲಿ ಅಚ್ಚೊತ್ತುವಷ್ಟು ಸಂಖ್ಯೆಯಲ್ಲಿರುವ ಹನುಮಂತನ ದೇವಾಲಯಗಳು ಹಾಗೂ ಕಥಾನಕ ಚಿತ್ರಗಳು ಅರ್ಥಗರ್ಭಿತವಾಗಿವೆ.

ಸಾಮಾನ್ಯವಾಗಿ ಶಿಲ್ಪದಲ್ಲಿ ಒಬ್ಬ ರಾಕ್ಷಸನನ್ನು ತುಳಿಯುತ್ತಾ, ದಾಫುಗಾಲು ಹಾಕುತ್ತ ಶತ್ರುಗಳನ್ನು ಹೊಡೆಯಲು ಬಲಗೈಯನ್ನು ಮೇಲೆತ್ತಿ ಎಡಗೈಯಲ್ಲಿ ಒಂದು ಮರದ ಕೊಂಬೆಯನ್ನು ಹಿಡಿದು ಅಶೋಕ ವನದಲ್ಲಿ ರಾಕ್ಷಸರೊಡನೆ ಹೊಡೆದಾಡಿದ ದೃಶ್ಯವನ್ನೇ ಸ್ಪಷ್ಟಪಡಿಸುವಂತೆ ಪಾರ್ಶ್ವ ಭಂಗಿಯಲ್ಲಿ ಹನುಮಂತನನ್ನು ತೋರಿಸಿರುತ್ತದೆ. ಈ ಪ್ರಕಾರದ ಶಿಲ್ಪವು ಕಲ್ಯಾಣ ಚಾಲುಕ್ಯ ಕಾಲದಿಂದ ತರುವಾಯ ಅತ್ಯಂತ ಅಚ್ಚುಮೆಚ್ಚಿನದಾಗಿತ್ತು. ಚಾಲುಕ್ಯಶೈಲಿಯಲ್ಲಿಯ ಈ ಪ್ರಕಾರದ ಉದಾಹರಣೆಗಳು ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕಕ್ಕಳಮೇಲಿಯ ಶಂಭುಲಿಂಗ ದೇವಾಲಯದ ಹತ್ತಿರ, ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಏಣಗಿ ಯಲ್ಲಿಯ ಶಾಸನ ಸಹಿತ ಭವ್ಯ ಮೂರ್ತಿಗಳು ಒಳ್ಳೆ ಉದಾಹರಣೆಗಳು[13].

ಆದರೂ ಕೂಡ ಎಮ್ಮಿಗುಡ್ಡದಲ್ಲಿ ಒಂದು ಹೊಸ ಹಾಗೂ ಸ್ವಾರಸ್ಯ ಮಾದರಿಯ ಶಿಲ್ಪವಿದೆ. ಇದರಲ್ಲಿ ಇವನನ್ನು ಮುಂದೆ ನೋಡುತ್ತಿರುವಂತೆ ಮೂಡಿಸಲಾಗಿದೆ. ಇವನು ಎಡಗೈಯಲ್ಲಿ ಹಾವನ್ನು ಹಿಡಿದಿರುವುದು ಕುತೂಹಲಕಾರಿ. ಪೀಠದ ಕೆಳಭಾಗದಲ್ಲಿ ಗರುಡನು ಆಕಾಶದ ಕಡೆ ಮುಖ ಮಾಡಿ ಅಂಗಾತ ಮಲಗಿರುವುದು ಗಮನರ್ಹಾ. ಪ್ರಮಾಣಬದ್ಧವಾಗಿ ಇಲ್ಲಿ ತನ್ನ ಶಕ್ತಿಯ ಬಗ್ಗೆ ಅಹಂಕಾರಭರಿತನಾದ ಗರುಡನನ್ನು ಮುಖಭಂಗ ಮಾಡಿದ, ಅಂದರೆ 'ಗರುಡಗರ್ವಭಂಗ'ವನ್ನು ಇಲ್ಲಿ ತೋರಿಸಲಾಗಿದೆ. ನಿಜವಾಗಿಯೂ ಈ ಪ್ರಕಾರದ ಶಿಲ್ಪವು ಅನುಪಮವಲ್ಲದಿದ್ದರೂ ಅಪೂರ್ವವೇ ಸರಿ.

ಮೇಲೆ ಉದ್ದರಿಸಿದ ಬುಕ್ಕರಾಯನ ಶಾಸನದಲ್ಲಿ ವಿದಿತವಾದಂತೆ ಹೊಯ್ಸಳ ವಿಷ್ಣುವರ್ಧನದ ಕಾಲದಿಂದ ಕರ್ನಾಟಕದಲ್ಲಿ ಪ್ರಭಾವ ಬೀರುತ್ತಿದ್ದ ಶ್ರೀ ವೈಷ್ಣವ ಮತವು ಜನಪ್ರಿಯವಾಗಿಯೂ ಹಾಗೂ ಎಲ್ಲೆಡೆಯಲ್ಲು ಹರಡಿತ್ತು. ಈ ಕಾಲದಲ್ಲಿ ವೈಷ್ಣವ ದೇವಾಲಯಗಳ ಬಾಗಿಲು ಜಂತಿಯ ಲಲಾಟಬಿಂಬದಲ್ಲಿ ಶಾಸನಗಳ ಮೇಲ್ಬಾಗದಲ್ಲಿಯೂ ವಿಜಯನಗರ ಕಾಲದಲ್ಲಿ ವಿಶಿಷ್ಟವಾಗಿ ಪ್ರಪ್ರಥಮ ಬಾರಿಗೆ ಅಕ್ಕಪಕ್ಕಗಳಲ್ಲಿ ಶಂಖ ಮತ್ತು ಚಿತ್ರಗಳಂದ ಕೂಡಿದ ಒಂದು ಸಂಕಲನವು ಇರುತ್ತದೆ. ನಿಜಕ್ಕೂ ದೇವಾಲಯಗಳ ಕಂಬಗಳಿಗೆ ಸೇರಿದ ಭಾಗವಾದ ಅಲಂಕಾರಿಕ ಅಶ್ವಾರೋಹಿಗಳ ಹಣೆಯಮೇಲೂ ಕೂಡ ಇಂತಹ ನಾಮವು ಹೆಚ್ಚುಕಡಿಮೆ ತಪ್ಪದೇ ಇರುತ್ತದೆ. ಉದಾಹರಣೆಗೆ ಕನಕಗಿರಿಯ ಕನಕಾಚಲ ದೇವಾಲಯ[14].

ವಿಷ್ಣುವಿನ ನಾನಾ ರೂಪಗಳಲ್ಲಿ ವೇಣುಗೋಪಾಲಕೃಷ್ಣ, ವೆಂಕಟೇಶ ಮತ್ತು ಶ್ರೀ ರಂಗನಾಥ ಈ ಮೂರು ಅತ್ಯಂತ ಜನಪ್ರಿಯವಾಗಿದ್ದವು. ಮೊದಲನೆಯದು ಕಲ್ಯಾಣ ಚಾಲುಕ್ಯರ ಕಾಲದಿಂದ ಅದರಲ್ಲೂ ಹೊಯ್ಸಳ ಕಾಲದಲ್ಲಿ ಮುಖ್ಯ ಪೂಜಾ ವಿಗ್ರಹವಾಗಿದ್ದರೆ, ಕೊನೆಯ ಎರಡು ವಿಜಯನಗರದ ಕಾಲದಲ್ಲಿ ಬಹಳಷ್ಟು ಪದೇ ಪದೇ ಕಾಣಿಸಿಕೊಳ್ಳುತ್ತವೆ. ಆನೆಗೊಂದಿ ಗ್ರಾಮದಲ್ಲೂ ರಂಗನಾಥಸ್ವಾಮಿ ಹಾಗೂ ಇದರ ಪಶ್ಚಿಮಕ್ಕೆ ಅರ್ಧ ಕಿಲೋಮೀಟರ್ ದೂರದಲ್ಲಿಯ ಬೆಟ್ಟದ ಶ್ರೇಣಿಯಲ್ಲಿ ಗವಿರಂಗನಾಥ ದೇವಾಲಯಗಳಿವೆ. ಮತ್ತು ವೆಂಕಟಗಿರಿ ಹಾಗೂ ಕಿಸರಟ್ಟಿ ಗ್ರಾಮಗಳಲ್ಲಿ ಕ್ರಮವಾಗಿ ವೆಂಕಟರಮಣ ಹಾಗೂ ಕೃಷ್ಣರಾಯ ದೇವಾಲಯಗಳಿವೆ. ಚತುರ್ಭುಜ ವೆಂಕಟೇಶನು ಮುಂದಿನ ಬಲಗೈಯನ್ನು ವರದ ಮುದ್ರೆಯಲ್ಲಿಯೂ, ಎಡಗೈಯನ್ನು ಕಟ್ಟಿಯ ಮೇಲಿಟ್ಟು, ಹಿಂದಿನ ಕೈಯಲ್ಲಿ ಶಂಖ ಚಕ್ರಗಳನ್ನು ಹಿಡಿದು

ಸಮಭಂಗದಲ್ಲಿದ್ದಾನೆ. ಬಲಗಾಲನ್ನು ಅಡ್ಡಹಾಕಿ ನಿಂತ ವೇಣುಗೋಪಾಲ ಕೃಷ್ಣನು ಸಾಮಾನ್ಯವಾಗಿ ಚತುರ್ಭುಜನು. ಹಿಂದಿನ ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದು ಮುಂದಿನ ಕೈಗಳಲ್ಲಿ ಕೊಳಲನ್ನು ಬಾರಿಸುತ್ತಾನೆ. ಅಕ್ಕಪಕ್ಕಗಳಲ್ಲಿ ಆಕಳುಗಳು ಕೊಳಲಿನ ಮಂಜುಳ ಸ್ವರವನ್ನು ಆಲಿಸಲೋ ಎಂಬಂತೆ ತಲೆಯೆತ್ತಿ ನಿಂತಿರುತ್ತವೆ. ಹಾಗೂ ಶ್ರೀದೇವಿ ಹಾಗೂ ಭೂದೇವಿಯರು ಅಕ್ಕಪಕ್ಕದಲ್ಲಿ ನಿಂತಿರುತ್ತಾರೆ. ಕೃಷ್ಣನ ಕಿರೀಟದ ಮೇಲೆ ಸರ್ಪವು ತನ್ನ ಏಳು ಹೆಡೆಗಳನ್ನು ಬಿಚ್ಚಿ ಕೊಡೆಯಂತೆ ಹಿಡಿದಿರುತ್ತದೆ.

ಶಿಲ್ಪದಲ್ಲಿ ಅಷ್ಟಮಹಿಷಿಯರೊಡನೆ ಕೃಷ್ಣನ ಚಿತ್ರಣವು ಈ ಕಾಲದಲ್ಲಿ ಮೊದಲನೆ ಬಾರಿಗೆ ಕಾಣಿಸಿಕೊಳ್ಳುವುದೆಂದು ತೋರುವುದು. ಕನಕಗಿರಿಯಲ್ಲಿ ಕನಕಾಚಲಪತಿ ದೇವಾಲಯದ ಹತ್ತಿರ ಒಂದು ಸಣ್ಣ ದೇವಾಲಯದಲ್ಲಿ ಒಂಬತ್ತು ಉಬ್ಬು ಮೂರ್ತಿಗಳುಳ್ಳ ಒಂದು ಶಿಲ್ಪ ಫಲಕವಿದೆ. ಒಂದೊಂದು ಬದಿಯಲ್ಲಿ ನಾಲ್ಕರಂತೆ ರುಕ್ಮಿಣಿ, ಸತ್ಯಭಾಮಾ, ಸೀತಾ, ಭದ್ರಾ, ಮಿತ್ರವಿಂದಾ, ಕಾಳಿಂದೀ, ಲಕ್ಷ್ಮಣಾ ಮತ್ತು ಜಾಂಬವತೀ ಇವರೊಡನೆ ಮಧ್ಯದಲ್ಲಿ ಕೃಷ್ಣನು ನಿಂತಿದ್ದಾರೆ.

ರಂಗನಾಥ ಹೆಚ್ಚು ಕಡಿಮೆ ಹಿಂದಿನ ಕಾಲದ ಅನಂತಶಯನ ಶಿಲ್ಪದ ಹಾಗೆ ಇರುತ್ತದೆ. ಆದರೆ ಶೈಲಿಯು ಭಿನ್ನ. ಅನಂತಶೇಷನು ತನ್ನ ಏಳು ಹೆಡೆಗಳನ್ನು ಬಿಚ್ಚಿ ಕೊಡೆಯಂತೆ ಹಿಡಿದಿರುವುದನ್ನು ಪಾರ್ಶ್ವ ಭಂಗಿಯಲ್ಲಿ ಬಿಡಿಸಲಾಗಿರುತ್ತದೆ. ಇದೇ ನೈಜರೀತಿ. ವಿಷ್ಣು ಸುರುಳಿ ಸುತ್ತಿದ ಶೇಷನ ಮೇಲೆ ಹಿಂದಿನ ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು ಹಿಡಿದುಕೊಂಡು ಬಲಗೈ ಮಗ್ಗುಲಲ್ಲಿ ಮಲಗಿರುತ್ತಾನೆ. ಬಲ ಅಂಗೈಯು ತಲೆಗೆ ಅನಿಕೆಯಾಗಿರುತ್ತೆ. ಎಡಗೈ ನೀಳವಾಗಿ ಎಡಮಗ್ಗುಲಲ್ಲಿ ಮಲಗಿರುತ್ತಾನೆ[15].

ತಲೆಯ ಹತ್ತಿರ ನಾರದ ಮುನಿಯು ತಂಬೂರಿ ನುಡಿಸುತ್ತಾ ನಿಂತಿರಬಹುದು. ಪಾದಗಳ ಬದಿಯಲ್ಲಿ ಕಾಲೊತ್ತುತ್ತ ಭೂದೇವಿ ಶ್ರೀ ದೇವಿಯರು ಇರುತ್ತಾರೆ. ಗರುಡನು ನಿಂತಿದ್ದು ತನ್ನ ಸ್ವಾಮಿಯನ್ನು ಕಾಯುತ್ತಿರುತ್ತಾನೆ. ಇಂಥ ಶಿಲ್ಪ ಮಾದರಿಯೇ ಪನ್ನಾಪುರದ ಒಂದು ಕಟ್ಟಿದ ಕೊಳದಲ್ಲಿದೆ. ಹಿಂದಿನ ಕಾಲದ ಇಂಥ ಶಿಲ್ಪಗಳಲ್ಲಿ ಹೆಡೆಗಳ ಛತ್ರಿಯನ್ನು ಮುಂಬದಿಯ ನೋಟದಲ್ಲಿ ಬಿಡಿಸಲಾಗಿರುತ್ತದೆ. ವಿಷ್ಣುವಿನ ಬಲಗೈಯು ಯೋಗಮುದ್ರೆಯಲ್ಲಿರುತ್ತದೆ. ಶಂಖ ಚಕ್ರಗಳನ್ನು ಕೈಯಲ್ಲಿ ಹಿಡಿದಿರದೇ, ಕೆಳಗೆ ಇಟ್ಟಂತೆ ತೋರಿಸುತ್ತೆ. ಆಯುಧಪಾಣಿಗಳಾದ ಮಧು ಕೈಟಭರನ್ನು ಕೂಡ ಮೂಡಿಸಿರುತ್ತೆ.

ಶ್ರೀ ವೈಷ್ಣವ ಮತದ ಇನ್ನೊಂದು ಮೂಡಿಕಯು ಗಮನಾರ್ಹ. ಅದೇನೆಂದರೆ ವಿಷ್ಣುವಿನ ಪರಮ ಭಕ್ತರಾದ ಆಳ್ವಾರುಗಳ ಆರಾಧನೆ. ಆನೆಗೊಂದಿಯ ಗವಿರಂಗನಾಥನ ದೇವಾಲಯದಲ್ಲಿ ಸುಮಾರು ಆರು ಇಂಥ ದುಂಡುಶಿಲ್ಪದ ಮೂರ್ತಿಗಳಿವೆ ಮತ್ತು ಕಂಬಗಳ ಮೇಲೆ ಪದೇ ಪದೇ ಇವರ ಉಬ್ಬು ಶಿಲ್ಪಗಳನ್ನು ಮೂಡಿಸಿರುತ್ತೆ.

ಹಿಂದಿನ ಕಾಲದ ವಿಷ್ಣುವಿನ ಲಕ್ಷ್ಮೀ – ನರಸಿಂಹ, ಉಗ್ರನರಸಿಂಹ ಮೊದಲಾದ ಇತರ ರೂಪಗಳ ಚಿತ್ರಣಗಳು ಈ ಕಾಲದಲ್ಲಿಯೂ, ತುಲನಾತ್ಮಕವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಬೇರೆ ಬೇರೆ ಲಕ್ಷಣಗಳಿಂದ ಮುಂದುವರಿಸಿಸಲ್ಪಟ್ಟಿವೆ. ಉದಾಹರಣೆಗೆ ಹಂಪಿಯಲ್ಲಿಯ ಮೊದಲನೆಯ ಪ್ರಕಾರದ ವಿಷ್ಣುರೂಪದ ಭವ್ಯ ಶಿಲ್ಪವು ಅತ್ಯಂತ ಪ್ರಸಿದ್ಧ. ಆದರೆ ಭಗ್ನವಾಗಿದೆ. ನವಲಿ ಗ್ರಾಮದಲ್ಲಿ ಎರಡನೇ ಪ್ರಕಾರದ ಶಿಲ್ಪವು ಇದೆ. ಇದರಲ್ಲಿಯೂ ಕೂಡ ಅನಂತನು ತನ್ನ ಏಳು ಹೆಡೆಗಳ

ಛತ್ರಿಯನ್ನು ದೇವರ ತಲೆಯ ಮೇಲೆ ಹಿಡಿದಿದ್ದಾನೆ. ಮತ್ತು ನರಸಿಂಹನು ಹಿಂದಿನ ಕಾಲದಂತೆ ಪ್ರಲಂಬಪಾದಾಸನದಲ್ಲಿ ಕುಳಿತಿರದೆ ಸ್ವಲ್ಪಮಟ್ಟಿಗೆ ಕುಕ್ಕುರುಗಾಲಲ್ಲಿ ಹಿರಣ್ಯಕಶಿಪುವನ್ನು ಮಲಗಿಸಿಕೊಂಡು ಅವನ ಹೊಟ್ಟೆಯನ್ನು ಬಗೆಯುತ್ತಿದ್ದಾನೆ[16].

**ಧಾರ್ಮಿಕ ಪದ್ಧತಿಗಳು:**

ಧರ್ಮವು ಸಮಾಜದೊಂದಿಗೆ ನಿಕಟವಾಗಿ ಸಂಬಂಧಿಸಿದುದಾಗಿತ್ತು. ಜನರು ತುಂಬ ಧರ್ಮಶೀಲರಾಗಿದ್ದರು ಮತ್ತು ಅವರ ದೈನಂದಿನ ಯಾವುದೇ ಕೆಲಸವು ಧಾರ್ಮಿಕ ಅಂಶವಿಲ್ಲದೆ ನಡೆಯುತ್ತಿರಲಿಲ್ಲ. ಪಾವಿತ್ರ್ಯ, ಸದಾಚಾರದ ಜೀವನ, ದಾನಶೀಲತೆ, ಸೇವಾ ಮನೋಭಾವ ಮತ್ತು ದೇವರಾಧನೆ ಇವೆಲ್ಲವೂ ಧಾರ್ಮಿಕ ಆದರ್ಶಗಳಿಗೆ ಸಂಬಂಧಪಟ್ಟದ್ದವು. ಜನರ ಸಾಮುದಾಯಿಕ ಜೀವನದಲ್ಲಿ ಉದ್ಭವಿಸುತ್ತಿದ್ದ ಧರ್ಮ ಮತ್ತು ಸಮಾಜಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಧಾರ್ಮಿಕ ಪರಂಪರೆಯನ್ನು ಆಧರಿಸಿ ಹಿರಿಯರು ತೀರ್ಮಾನಿಸುತ್ತಿದ್ದರು. ಈ ರೀತಿಯಲ್ಲಿ ಯಾವುದೋ ಸಾಮಾಜಿಕ ಅಚಾರಕ್ಕೆ ಸಂಬಂಧಿಸಿದಂತೆ ಕ್ರಿ.ಶ. 1440ರಲ್ಲಿ ಬಲಗೈ ಮತ್ತು ಎಡಗೈ ಜಾತಿಗಳಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ ಎರಡೂ ಪಕ್ಷದವರು ತಿರುಚಿನಾಪಳ್ಳಿ ಜಿಲ್ಲೆಯಲ್ಲಿನ ತಿರುವಳಂದುರೈ ಮಹಾದೇವರ ಆಲಯದಲ್ಲಿ ಕಲೆತರು ಹಾಗೂ ದೇವರ ಸನ್ನಿಧಿಯಲ್ಲಿ ಸಮಸ್ಯೆಯನ್ನು ಅನ್ಯೋನ್ಯವಾಗಿ ಪರಿಹರಿಸಿಕೊಂಡರು. ಈ ವರ್ಗಗಳಲ್ಲಿ ಯಾವುದೇ ಒಂದರ ಸದಸ್ಯರು ಸಾರ್ವಜನಿಕ ಉತ್ಸವಗಳ ಸಮಯದಲ್ಲಿ ಯಾವುದೇ ಗಲಭೆಯುಂಟುಮಾಡಿ ಪರಸ್ಪರ ಕಾದಾಡಿದರೆ ಒಡನೆಯೇ ಆ ಸ್ಥಳದಲ್ಲಿಯೇ ಅಂಥ

ವ್ಯಕ್ತಿಗಳನ್ನು ಕರ್ಮಾಂತರಗಳಿಲ್ಲದೆ ಕೊಂದು ಹಾಕಬೇಕೆಂದು ಕ್ರಿ.ಶ. 1438–39ರಲ್ಲಿ ಒಪ್ಪಂದ ಮಾಡಿಕೊಳ್ಳಲಾಯಿತು. ಸಾಮಾಜಿಕ ಕಟ್ಟುಕಟ್ಟಳೆಗಳ ಉಲ್ಲಂಘನೆಯ ವಿರುದ್ಧ ಜಾತಿಬಹಿಷ್ಕಾರವು ಪ್ರಬಲ ಸಾಧನವಾಯಿತು. ಬ್ರಾಹ್ಮಣರಲ್ಲಿ ಚಾಂಡಾಲ ಅಥವಾ ಕೆಳಜಾತಿಯ ಸ್ತ್ರೀಯ ಸಾಮೀಪ್ಯ ಬಯಸಿದ ಹಾಗೂ ಕೆಳಜಾತಿಯ ಜನರೊಂದಿಗೆ ಭೋಜನ ಮಾಡಿದ ವ್ಯಕ್ತಿಯು ಜಾತಿ ಬಹಿಷ್ಕೃತನಾಗುತ್ತಿದ್ದನು. ಕ್ರಿ.ಶ. 1474ರ ತೇದಿಯ ದಾನಶಾಸನವೊಂದರಲ್ಲಿ "ಈ ವೃತ್ತಿಮಂತರೊಳಗೆ ಆರೊಬ್ಬರು ತಮ್ಮ ತಮ್ಮ ವೃತ್ತಿಯನ್ನು ಶೂದ್ರರುಗಳಿಗೆ ಆಧಿಕ್ರಯವ ಮಾಡಿದರೆ ಅವರು ಬ್ರಾಹ್ಮಣಿಕೆಗೆ ಹೊರಗು" ಎಂದು ದಾಖಲಿಸಿದೆ[17].

ಆಸ್ತಿ ಪಾಸ್ತಿಗಳನ್ನು ಲಪಟಾಯಿಸುವುದು, ಪುಣ್ಯದ ಕೆಲಸಗಳನ್ನು ಹಾಳುಮಾಡುವುದು, ವ್ಯಭಿಚಾರ, ಗೋವಧೆ, ಮಧ್ಯಪಾನ, ಗುರು, ಪತ್ನಿ ಅಥವಾ ಬ್ರಾಹ್ಮಣ ಹತ್ಯೆ ಹಾಗೂ ಕಳ್ಳತನಗಳಂಥ ಕೆಲಸಗಳನ್ನು ಮಹಾಪಾಪವೆಂದು ಜನರು ಪರಿಗಣಿಸುತ್ತಿದ್ದರು. ದಾನದತ್ತಿಗಳಿಗೆ ಸಂಬಂಧಿಸಿದ ಅನೇಕ ಶಾಸನಗಳು ಅಂಥ ಪಾಪಗಳನ್ನು ಉಲ್ಲೇಖಿಸುತ್ತವೆ. ಸೇನಾನಿ ನಡೆಗೋಂಟೆಮಲ್ಲನ ಕ್ರಿ.ಶ. 1356ರ ತೇದಿಯ ದಾನಶಾಸನವೊಂದರಲ್ಲಿ ಹೀಗೆ ದಾಖಲಿಸಿದೆ; "ಇರುಳಾಗಲಿ ಹಗಲಾಗಲಿ ಹೊಂಚುಹಾಕುವ ಕಳ್ಳ ಅಥವಾ ಲೂಟಿಕಾರಿರಲಿ, ಗೌರವಾನ್ವಿತ ಮಹಾಮಂಡಲೇಶ್ವರನಿರಲಿ, ಪ್ರಪಂಚವನ್ನು ಆಳುವ ಸಾಮ್ರಾಟನಿರಲಿ ಅಥವಾ ರಾಜಾಧಿರಾಜನಿರಲಿ, ಈ ಸ್ಥಳದಲ್ಲಿ ದಯಪಾಲಿಸಿದ ಗ್ರಾಮಗಳನ್ನು, ಭೂಮಿಗಳನ್ನು ಅಥವಾ ದಾನಗಳನ್ನು ನಾನು ಕಿತ್ತುಕೊಳ್ಳುವೆನೆಂದು ಯೋಚಿಸುವ ಯಾರೆ ಆಗಿರಲಿ ಕೇವಲ ಶಬ್ದವೇ ಆತನನ್ನು ಆತನ ಮಾತಾಪಿತರೊಡನೆ ಎಪ್ಪತ್ತೇಳು ಕೋಟಿ

ವರ್ಷಗಳವರೆಗೆ ಕ್ರಿಮಿಗಳಿಂದ ತುಂಬಿದ ನರಕಕ್ಕೆ ತಳ್ಳುವುದು ಹಾಗೂ ಎಲ್ಲ ಬಗೆಯ ಕಷ್ಟಯಾತನೆಗಳು ಆತನಿಗೆ ಮುಂದುವರಿಯುತ್ತ ಹೋಗುವುವು; ಓ ಪಾಪವೇ ಕಾಣುತ್ತದೆಯೇನು ನಿನಗೆ"? ಇಮ್ಮಡಿ ದೇವರಾಯನ ಕಾಲದ ಕ್ರಿ.ಶ. 1430ರ ತೇದಿಯ ಶಾಸನವೊಂದರಲ್ಲಿರುವ ಶಾಪ ಭಾಗ ಹಿಗಿದೆ; "ಈ ಧರ್ಮವನ್ನು ನಾಶ ಮಾಡಿದವನು ವ್ಯಭಿಚಾರಿಣಿಗೆ, ಅಥವಾ ಕುಪ್ರಸಿದ್ಧವಾದ ಕೆಟ್ಟ ಸ್ತ್ರೀಗೆ, ನೀಚಕುಲದಲ್ಲಿ ಅಥವಾ ಚಾಂಡಲಿಗೆ ಹುಟ್ಟಿದ ಪಾತಕಿಯಂಥಾಗುವನು; ಗೋಹತ್ಯ ಮಾಡಿದವನು, ಸುರಾಪಾನ ಮಾಡಿದವನು, ಸ್ವಗುರು, ಪತ್ನಿ ಮತ್ತು ಬ್ರಾಹ್ಮಣರನ್ನು ಕೊಂದವನು ಅಥವಾ ಸ್ವರ್ಣಾಪಹಾರಿ. ದಾನದತ್ತಿಗಳಿಗೆ ಸಂಬಂಧಿಸಿದ ಶಾಸನಗಳನ್ನು ನಾಶಮಾಡುವ ಮತ್ತು ದಾನದತ್ತಿಗಳಲ್ಲಿ ಮಾಡಲಾದ ಕಟ್ಟುಪಾಡಗಳನ್ನು ಈಡೇರಿಸದಿರುವುದು ತುಂಬ ಗಂಭೀರ ಪಾತಕವೆಂಬ ಅಂಶವು ಜನರ ಸಾಂಪ್ರದಾಯಿಕ ನಂಬಿಕೆಯಾಗಿ ಮುಂದುವರಿದಿದೆ[18].

ಜನರು ಮಧ್ಯಕಾಲೀನ ಮೌಢ್ಯಗಳನ್ನು ಮತ್ತು ಆದಿಕಾಲದ ಧಾರ್ಮಿಕ ನಂಬಿಕೆಗಳನ್ನು ನಂಬಿದರು. ನಾಗಲಾಪುರದಲ್ಲಿ ಕೆರೆಯೊಂದು ಎರಡು ಮೂರು ಸಲ ಒಡೆದು ಹೋದಾಗ ದೇವರಿಗೆ ಕೋಪ ಬಂದಿತೆಂದು ಜನರು ಭಾವಿಸಿದರು ಹಾಗೂ ದೇವರನ್ನು ಸಮಾಧಾನ ಪಡಿಸಲು ಅರವತ್ತು ಪುರುಷರು, ಕೆಲವು ಕುದುರೆ ಹಾಗೂ ಕೋಣಗಳನ್ನು ಬಲಿಗೊಡಲು ರಾಜನು ಆದೇಶ ನೀಡಿದನೆಂದು ಪೇಯಿಸ್ ಹೇಳುತ್ತಾನೆ. ನಾಗಲಾಪುರದ ಕೆರೆಯನ್ನು ಕಟ್ಟುವಾಗ ನರಬಲಿ ಮತ್ತು ಪ್ರಾಣಿಬಲಿ ಮಾಡಿದ ಸಂಗತಿಯನ್ನು ನ್ಯೂನೀಜ್ ಕೂಡ ಪುಷ್ಟೀಕರಿಸುತ್ತಾನೆ. ಅರಸನು ನಾಶದ ಕಾರಣವನ್ನು ತಿಳಿಯಲು ಪಂಡಿತ ಮತ್ತು ಮಾಂತ್ರಿಕರ ಜೊತೆಯಲ್ಲಿ

ಸಮಾಲೋಚಿಸಿದನು. "ಅಲ್ಲಿ ಅವನು ಪುರುಷರ ಅಥವಾ ಸ್ತ್ರೀಯರ ಇಲ್ಲವೇ ಕೋಣಗಳ ರಕ್ತ ಸುರಿಸದಿದ್ದರೆ ಆ ಕೆಲಸವು ಎಂದೂ ಪೂರ್ಣಗೊಳ್ಳದು" ಎಂದು ಅರಸನಿಗೆ ತಿಳಿಸಲಾಯಿತು; "ಆದ್ದರಿಂದ ಅರಸನು ತನ್ನ ಸೆರೆಯಾಳುಗಳಾಗಿದ್ದ ಮತ್ತು ಮರಣಕ್ಕೆ ಅರ್ಹರಾಗಿದ್ದ ಎಲ್ಲ ಪುರುಷರನ್ನೂ ಕರೆತರಲು ಕಳಿಸಿದನು ಹಾಗೂ ಅಲ್ಲಿ ಅವರ ತಲೆ ಕಡಿದುಹಾಕಲು ಆದೇಶಿಸಿದನು; ಇದರೊಂದಿಗೆ ಕೆಲಸವು ಮುಂದುವರಿಯಿತು ಮಹಾನವಮಿ ಉತ್ಸವದ ದಿನಗಳಲ್ಲಿ ದೇವರಿಗೆ ಪಶುಬಲಿಗಳು ಸಾಮಾನ್ಯವಾಗಿದ್ದವು.

ಅರಸ ಹಾಗೂ ಜನರು ತುಂಬ ಧರ್ಮಭೀರುಗಳಾಗಿದ್ದರು. ಧರ್ಮ ಶ್ರದ್ಧೆ ಮತ್ತು ಶೀಲ ಅವರ ಧಾರ್ಮಿಕ ಜೀವನದ ಭಾಗವಾಗಿದ್ದವು. "ಈ ದೇಶದ ಜನರು ಯಾವಾಗಲೂ ಶನಿವಾರರಂದು ಉಪವಾಸಮಾಡುತ್ತಾರೆ ಹಾಗೂ ಇಡಿಯ ದಿನದಲ್ಲಾಗಲಿ ರಾತ್ರಿಯಲ್ಲಾಗಲಿ ಏನನ್ನೂ ತಿನ್ನುವುದಿಲ್ಲ, ನೀರನ್ನೂ ಕುಡಿಯುವುದಿಲ್ಲ; ಉಸಿರು ಸುವಾಸಿತವಾಗಿರಲು ಕೆಲವು ಲವಂಗಗಳನ್ನಷ್ಟೇ ಅವರು ಜಗಿಯಬಹುದು. ಅರಸನು ಯಾವಾಗಲೂ ದೊಡ್ಡ ಮೊತ್ತಗಳನ್ನು ದಾನವಾಗಿ ನೀಡುತ್ತಾನೆ; ಅರಮನೆಯಲ್ಲಿ ಅವನ ಪುರೋಹಿತರಾಗಿರುವ ಎರಡು ಅಥವಾ ಮೂರು ಸಾವಿರ ಬ್ರಾಹ್ಮಣರು ಯಾವಾಗಲೂ ಇರುತ್ತಾರೆ; ಹಾಗೂ ಅವರಿಗೆ ದಾನಧರ್ಮ ನೀಡಲು ಅರಸನು ಆಜ್ಞಾಪಿಸುತ್ತಾನೆ"[19]. ಸಾರ್ವಭೌಮರು ಹಾಗೂ ಜನರು ಧಾರ್ಮಿಕ ಮತ್ತು ದಾನೋದ್ದೇಶಗಳಿಗಾಗಿ ದಾನದತ್ತಿಗಳನ್ನು ನೀಡಿದುದನ್ನು ದಾಖಲಿಸುವ ಅನೇಕ ಶಾಸನಗಳಿವೆ. ದೇವಾಲಯಗಳಲ್ಲಿ ನಿತ್ಯಪೂಜೆ, ನಂದಾದೀಪ, ಬ್ರಾಹ್ಮಣರ ಊಟೋಪಚಾರ, ವಿದ್ಯೆ ಮತ್ತು ವೇದಾಭ್ಯಾಸ ಹಾಗೂ ಇತರ

ಉದ್ದೇಶಗಳಿಗಾಗಿ ಭೂಮಿದಾನಗಳನ್ನು ಮಾಡಲಾಯಿತು. ಬ್ರಾಹ್ಮಣರಿಗೆ ವಾಸಿಸಲು ಅಗ್ರಹಾರಗಳನ್ನು ಒದಗಿಸಿ ಕೊಡಲಾಯಿತು. ಆನರು ಭೂಮಿ ಮತ್ತು ಸುವರ್ಣ ದಾನಗಳನ್ನು ನೀಡಿದರು, ಹಾಗೂ ತಮ್ಮ ತೀರಿಹೋದ ಮಾತಾಪಿತರ ಅಥವಾ ಕುಟುಂಬದ ಸದಸ್ಯರ ನೆನಪಿನಲ್ಲಿ ದೇವಾಲಯಗಳನ್ನು ಕಟ್ಟಿಸಿದರು. ಈ ಧರ್ಮಕಾರ್ಯಗಳಿಗೆ ಸಂಬಂಧಿಸಿದ ದೇವರಲ್ಲಿ ಉನ್ನತ ಭಕ್ತಿಭಾವವು ಜನರಲ್ಲಿತ್ತು.

**ಉತ್ಸವಗಳು**:

ವಿಜಯನಗರದ ರಾಜ ಕುಟುಂಬದವರು ಮತ್ತು ಜನರು ಆಚರಿಸುತ್ತಿದ್ದ ಉತ್ಸವಗಳಿಗೆ ಸಂಬಂಧಿಸಿದಂತೆ ಶಾಸನಗಳು ಮತ್ತು ಪ್ರವಾಸಿಗರ ಕಥನಗಳು ಹೇರಳ ಸಾಕ್ಷ್ಯಾಧಾರಗಳನ್ನು ಒದಗಿಸುತ್ತವೆ. ಮಹಾನವಮಿ, ಹೋಳಿ ಮತ್ತು ದೀಪಾವಳಿಗಳು ಪ್ರಮುಖ ಮತ್ತು ರಾಷ್ಟ್ರೀಯ ಉತ್ಸವಗಳಾಗಿದ್ದರೆ, ದೇವತಾರಾಧನೆಯ ಇತರ ಕೆಲವು ಕಿರಿಯ ಉತ್ಸವಗಳೂ ಇದ್ದವು. ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲಕ್ಕಿಂತ ಸುಮಾರು ಕಾಲು ಶತಮಾನ ಹಿಂದಿನ ಶಾಸನವೊಂದು ಬೇಲೂರಿನ ಚನ್ನಕೇಶವ ದೇವಾಲಯದಲ್ಲಿ ನಡೆಸಲು ಅವಕಾಶ ಕಲ್ಪಿಸಿಲಾದ ವಿವಿಧ ಉತ್ಸವಗಳ ಬಗ್ಗೆ ವಿವರಗಳನ್ನು ನೀಡುತ್ತದೆ; ಈ ಉತ್ಸವಗಳೆಂದರೆ ಶ್ರೀ ಪಂಚರಾತ್ರ ಶಾಸ್ತ್ರಮಂತ್ರಸಿದ್ಧಾಂತ ಮಾರ್ಗ ಸಕಲಭೋಗ ನಿತ್ಯಾರ್ಚನ, ವಿಗ್ರಹದ ಸ್ನಾನ, ಅಲಂಕಾರಾಸನ, ಯಾತ್ರಾಸನ, ಭೋಜ್ಯಾಸನ, ಶಯನಾಸನ, ಪವಿತ್ರ ಸಂಕೇತಗಳ ಪ್ರದರ್ಶನ, ಚತುಷಷ್ಟ್ಯುಪಚಾರ, ಪುಷ್ಪಾರ್ಚನ, ನಿತ್ಯಹೋಮ, ನಿತ್ಯೋತ್ಸವ, ಪವಿತ್ರೋತ್ಸವ, ಸ್ವಾರಶಯನೋತ್ಥಾನ, ಜಯಂತ್ಯುತ್ಸವ, ದೇವರ ಚಕ್ರೋತ್ಸವ, ರಾಮಕೃಷ್ಣ ಜನ್ಮೋತ್ಸವ,

ಕಮಲಪುಷ್ಪೋತ್ಸವ, ಡೋಲೋತ್ಸವ, ದೀಪೋತ್ಸವ, ಮಾರ್ಗಶಿರಮಾಸೋತ್ಸವ, ಪುಷ್ಯಮಾಸೋತ್ಸವ, ಚೈತ್ರಮಾಸೋತ್ಸವ, ನವರತ್ನ ಸ್ಥಾಪನ, ನಚವಸ್ತ್ರಾಭರಣ, ನರ್ತನ ಪ್ರದರ್ಶನ, ಕೋಶಪ್ರವೇಶನ, ವಿಷುವಯನ, ಸಂಕ್ರಮಣ ಸ್ನಪನ, ನೀರಾಜನ ಇತ್ಯಾದಿ[20]. ದೇವರಿಗೆ ಪಂಚಾಮೃತಾಭಿಷೇಕ, ನೈವೇದ್ಯ, ನಂದಾದೀವಿಗೆ, ಪುಷ್ಪಗಳಿಂದ ಪ್ರಾರ್ಥನೆ, ಕಾರ್ತಿಕ ಮಾಸದಲ್ಲಿ ಮತ್ತು ಕೃತ್ತಿಕ ನಕ್ಷತ್ರವೆಂದು ಮಾಡುವ ದೀಪಾರಾಧನೆ, ವಸಂತ ಮಹೋತ್ಸವ, ಪಂಚಪರ್ವ ದೀಪಾವಳಿ, ಶಿವರಾತ್ರಿ, ಯುಗಾದಿ, ಇತರ ಮಹಾ ತಿಥಿನಕ್ಷತ್ರಗಳಿಗೆ ಸಂಬಂಧಿಸಿದ ಹಬ್ಬ ಮತ್ತು ಉಪವಾಸಗಳಂಥ ಇತರ ಉತ್ಸವಗಳೂ ದೇವಾಲಯಗಳಲ್ಲಿ ನಡೆಯುತ್ತಿದ್ದವು. ಜೈನರಲ್ಲಿ ಶ್ರವಣಬೆಳಗೊಳ ಮತ್ತು ಕಾರ್ಕಗಳಲ್ಲಿ ಗೋಮಟಾಭಿಷೇಕವನ್ನು ಹಲವು ವರ್ಷಗಳ ಅಂತರದಲ್ಲಿ ನಡೆಸಲಾಗುತ್ತಿತ್ತು.

ರಾಜಧಾನಿಯ ಅತ್ಯಂತ ವೈಭವದ ಉತ್ಸವವೆಂದರೆ ಮಹಾನವಮಿ. "ಅದು ಸನ್ನಿವೇಶದಲ್ಲಿ ಧಾರ್ಮಿಕವಾದುದಾಗಿದ್ದರೂ ಅದರ ಮಹತ್ವದಲ್ಲಿ ಸಾರಭೂತವಾಗಿ ರಾಜಕೀಯ ಸ್ವರೂಪದ್ದು". ಈ ಉತ್ಸವದ ವಿಜೃಂಭಣೆಯ ಆಚರಣೆಯ ಬಗ್ಗೆ ಪೇಯಿಸ್, ನ್ಯೂನಿಜ್ ಮತ್ತು ಇತರ ಸಂದರ್ಶಕರು ವಿಶದ ವರ್ಣನೆಗಳನ್ನು ಕೊಟ್ಟಿರುವರಾದರೂ ಅಬ್ದುಲ್ ರಜ್ಹಾಕನು ಇಮ್ಮಡಿ ದೇವರಾಯನ ಆಸ್ಥಾನಕ್ಕೆ ಬೇಟಿಕೊಟ್ಟ, ಸಮಕಾಲೀನ ಪ್ರವಾಸಿಯಾದುದರಿಂದ ಆತನ ಕಥನವು ನಮ್ಮ ಗಮನ ಸಳೆಯಲು ಅರ್ಹವಾದುದು. ಈ ಪರ್ಷಿಯನ್ ರಾಯಭಾರಿಯು ಮಹಾನವಮಿ ಉತ್ಸವಾಚರಣೆಯನ್ನು ರಾಷ್ಟ್ರೀಯ ಮತ್ತು ಅತ್ಯುತ್ಕೃಷ್ಟವೆಂದು ಪರಿಗಣಿಸುತ್ತಾನೆ. ಈ ಉತ್ಸವಕ್ಕೆ ಸಾಮ್ರಾಜ್ಯದ ಎಲ್ಲ ಗಣ್ಯರೂ ತಮ್ಮ ಪರಿವಾರ, ಆನೆಗಳು ಹಾಗೂ

ಕುದುರೆಗಳ ಸಹಿತವಾಗಿ ಬಂದು ಸೇರುತ್ತಿದ್ದರು. ಎರಡರಿಂದ ಐದು ವೇದಿಕೆಗಳನ್ನೊಳಗೊಂಡ ಮನೋಹರ ಮಂಟಪಗಳನ್ನು ಕಟ್ಟಲಾಗುತ್ತಿತ್ತು. ಕೆಲವು ಮಂಟಪಗಳು ತಿರುಗುತ್ತಿರುವ ರೀತಿಯಲ್ಲಿ ನಿರ್ಮಿತವಾಗುತ್ತಿದ್ದವು; ಪ್ರತಿಕ್ಷಣವು ನೋಡಲು ಬೇರೊಂದು ಮುಖ ಕಾಣುವಂತಿರುತ್ತಿತ್ತು. ಮುಂದುಗಡೆಯ ಬಯಲಿನಲ್ಲಿ ಅತ್ಯಂತ ಸುಂದರ ಅಲಂಕಾರಗಳಿಂದ ಕೂಡಿದ ಒಂಬತ್ತು ಅಂತಸ್ತುಗಳ, ಸ್ತಂಭಗಳುಳ್ಳ ಭವನವೊಂದನ್ನು ನಿರ್ಮಿಸಲಾಗುತ್ತಿತ್ತು. ಅರಸನ ಸಿಂಹಾಸನವನ್ನು ಒಂಬತ್ತನೆಯ ಅಂತಸ್ತಿನಲ್ಲಿ ಇಡಲಾಗುತ್ತಿತ್ತು[21]. ಈ ಭವನ ಮತ್ತು ಮಂಟಪಗಳ ನಡುವೆ ಸುಂದರವಾಗಿ ವ್ಯವಸ್ಥೆಗೊಳಿಸಿದ ಬಯಲು ಪ್ರದೇಶವಿದ್ದುಅಲ್ಲಿ ಗಾಯಕರು ಮತ್ತು ಕಥೆಗಾರರು ತಮ್ಮ ಆಯಾ ಕಲೆಗಳನ್ನು ನಿರ್ವಹಿಸುತ್ತಿದ್ದರು. ಗಾಯಕರು ಬಹುಮಟ್ಟಿಗೆ ಹರೆಯದ ತರುಣಿಯರಾಗಿರುತ್ತಿದ್ದರು; ಅವರು ಅರಸನಿಗೆದುರಾಗಿ ಸುಂದರವಾದ ತೆರೆಯೊಂದರ ಹಿಂದೆ ಆಸೀನರಾಗಿರುತ್ತಿದ್ದರು; ತೆರೆ ಸರಿಯುತ್ತಿದ್ದಂತೆ ಚಿತ್ತಾಕರ್ಷಕವಾಗಿ ನರ್ತಿಸುತ್ತಿದ್ದರು. ಅರಸರ ಮುಂದೆ ಗಾರುಡಿಗರೂ ಮತ್ತು ಕುಸ್ತಿಪಟುಗಳೂ ತಮ್ಮ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಅರಸನು ಬೆಳಗ್ಗೆ ಮತ್ತು ಸಂಜೆ ಎರಡು ಹೊತ್ತೂ ದೇವರನ್ನು ಪೂಜಿಸುತ್ತಿದ್ದನು; ದೇವರಿಗೆ ಕೋಣ ಮತ್ತು ಕುರಿಗಳ ಬಲಿ ಕೊಡಲಾಗುತ್ತಿತ್ತು. ಅರಸನ ಮುಂದೆ ಕುಸ್ತಿ ಮಾಡುತ್ತಿದ್ದ ನೃತ್ಯಾಂಗನೆಯರು ಸಹ ಇದ್ದರು. ಎಲ್ಲ ವೈಭವ ಮತ್ತು ಆಡಂಬರ ಸಹಿತ ಒಂಬತ್ತು ದಿನಗಳ ಕಾಲ ಮಹಾನವಮಿ ಉತ್ಸವವು ನಡೆಯುತ್ತಿತ್ತು. ಅರಸನು ಈ ಒಂಬತ್ತು ದಿನಗಳ ಕಾಲವೂ ಉಪವಾಸವಿರುತ್ತಾನೆ ಮತ್ತು ಎಲ್ಲ ಮುಗಿಯುವವರೆಗೆ ಅವರು ಏನನ್ನೂ ತಿನ್ನುವುದಿಲ್ಲ; ಅವನ ಭೋಜನದ ಸಮಯ

ಮಧ್ಯರಾತ್ರಿಯಾಗುತ್ತಿತ್ತು. ಈ ಉತ್ಸವದ ದಿನಗಳಲ್ಲಿ "ಬಾಣಬಿರುಸು, ಕ್ರೀಡೆಗಳು ಹಾಗೂ ಮನೋರಂಜನೆ ಕಾರ್ಯಕ್ರಮಗಳು ನಡೆಯುತ್ತಿದ್ದವು".

ದೀಪಗಳ ಹಬ್ಬ ಅಥವಾ ದೀಪಾವಳಿ ಮತ್ತು ಹೋಳಿ ಉತ್ಸವಗಳು ಕೂಡ ವಿಜಯನಗರಕ್ಕೆ ವಿದೇಶೀ ಪ್ರವಾಸಿಗಳನ್ನು ಆಕರ್ಷಿಸಿದ್ದವು ದೀಪಾವಳಿ ಹಬ್ಬ ಕಾರ್ತಿಕಮಾಸದಲ್ಲಿ ನಡೆಯುತ್ತಿತ್ತು. ಕೊಂಟಿಯ ಪ್ರಕಾರ ಈ ಉತ್ಸವದಲ್ಲಿ "ಅವರು ತಮ್ಮ ದೇವಾಲಯಗಳ ಒಳಗೆ ಮತ್ತು ಮಾಳಿಗೆಯ ಮೇಲೆ 'ಸೂಸಿಮಣ್ಣಿ'ನ ಎಣ್ಣೆಯ ಅಸಂಖ್ಯ ದೀಪಗಳನ್ನು ಹಚ್ಚಿ ಅವುಗಳನ್ನು ಹಗಲು ರಾತ್ರಿ ಉರಿಸುತ್ತಾರೆ"[22].

ದೇವಾಲಯಗಳಲ್ಲಿ ಉತ್ಸವಗಳ ಆಚರಣೆಗಾಗಿ ಧಾರ್ಮಿಕ ವ್ಯವಸ್ಥೆಯ ಜನರು ಕಾಣಿಕೆಗಳನ್ನು ನೀಡಿದರು. ಹೀಗೆ, ಕ್ರಿ.ಶ. 1443ರಲ್ಲಿ ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ, ಕಡಲೂರ ಅರಣಿಪುರದ ಗೋವಣ್ಣ ಮತ್ತು ಬಲ್ಲಣ್ಣ ಚನ್ನಕೇಶವ ದೇವಾಲಯದಲ್ಲಿ ಪೂರ್ವಮರ್ಯಾದೆಯ ಪ್ರಕಾರ ನಡೆಯುತ್ತಿದ ಚೈತ್ರ ಪವಿತ್ರ ಮತ್ತು ದೀಪೋತ್ಸವಗಳಿಗೆ ದಾನ ನೀಡಿದರು. ಬಾರಕೂರು ರಾಜ್ಯದ ಅರಿಯಕೇರಿಯ ಹಲವು ಸೆಟ್ಟಿಗಳು ವಿನಾಯಕ, ಚೌಡೇಶ್ವರಿ ಮತ್ತು ನಾರಾಯಣದೇವರ ಗುಡಿಗಳಲ್ಲಿ ನೈವೇದ್ಯಾದಿ ಸೇವೆಗಳಿಗೆ ಹಾಗೂ ದೀಪಾವಳಿ ಮತ್ತಿತರ ಪ್ರಮುಖ ದಿನಗಳಂದು ಈ ದೇವಾಲಯಗಳಲ್ಲಿ ಸಲ್ಲಿಸುವ ವಿಶೇಷ ಸೇವೆಗಳ ವೆಚ್ಚಕ್ಕಾಗಿ ಭೂಮಿದಾನ ಮಾಡಿದರು. ವಸಂತ ಋತುವಿನ ಹೋಳಿ ಹಬ್ಬದ ಬಗ್ಗೆ ಹೇಳುತ್ತ ನಿಕೊಲೊ-ಡಿ-ಕೊಂಟಿಯು ಈ ಉತ್ಸವದಲ್ಲಿ "ರಾಜರಾಣಿಯರೂ ಸೇರಿದಂತೆ ಅವರು ಎಲ್ಲ ದಾರಿಹೋಕರ ಮೇಲೆ, ಆ ಉದ್ದೇಶಕ್ಕಾಗಿಯೇ ರಸ್ತೆಯ

ಪಕ್ಕದಲ್ಲಿ ಇರಿಸಿದ ಓಕುಳಿ ನೀರನ್ನು ಸಿಂಪಡಿಸುತ್ತಾರೆ. ಇದನ್ನು ಎಲ್ಲರೂಬಹಳ ನಗೆಯೊಡನೆ ಸ್ವೀಕರಿಸುತ್ತಾರೆ" ಎಂದು ತಿಳಿಸುತ್ತಾನೆ.

ದೇವಾಲಯದ ಕೆಲವು ಸಮಾರಂಭಗಳಲ್ಲಿ ರಥೋತ್ಸವವು ಸಾಮಾನ್ಯವಾಗಿತ್ತು. ದೇವರ ಮೂರ್ತಿಯನ್ನು ಇರಿಸಿದ ರಥದ ಮೆರವಣಿಗೆಯುದ್ದಕ್ಕೂ ದೇವಾಲಯದ ಆನೆಗಳು, ಹಾಡುಗಾರರು, ಕೊಂಬು ಕಹಳೆಯವರು ಮತ್ತು ನರ್ತಕರು ಸಾಗುತ್ತಿದ್ದರು. ಪಿರಮಿಡಾಕೃತಿಯ ರಥಕ್ಕೆ ಕಟ್ಟಿದ ಹಗ್ಗವನ್ನು ಹಿಡಿದು ಭಕ್ತರು ಮತ್ತು ಅರಸ ಕೂಡ ರಥವನ್ನು ಎಳೆಯುತ್ತಿದ್ದರು. ವಿಜಯನಗರದಲ್ಲಿ "ವರ್ಷದಲ್ಲಿ ಒಂದು ನಿರ್ದಿಷ್ಟ ಸಮಯಕ್ಕೆ ಅವರ ದೇವತಾಮೂರ್ತಿಯನ್ನು ಎರಡು ರಥಗಳ ಮಧ್ಯ ಇರಿಸಿ ನಗರದ ಮೂಲಕ ಒಯ್ಯಲಾಗುತ್ತದೆ; ಅವುಗಳಲ್ಲಿ ಅತ್ಯಂತ ಅಲಂಕೃತರಾದ ಹರೆಯದ ತರುಣಿಯರು ಕುಳಿತು ದೇವರ ನಾಮಗಳನ್ನು ಹಾಡುತ್ತಾರೆ ಮತ್ತು ರಥಗಳನ್ನು ಬೃಹತ್ ಜನಸಮೂಹವು ಹಿಂಬಾಲಿಸುತ್ತದೆ. ಭಕ್ತಿಯ ಭಾವಾವೇಶಕ್ಕೊಳಗಾದ ಅನೇಕರು ಜಜ್ಜಿ ಮರಣವನ್ನು ಹೊಂದುವುದಕ್ಕೋಸ್ಕರ ಗಾಲಿಗಳ ಮುಂದೆ ನೆಲದ ಮೇಲೆ ಬೀಳುತ್ತಾರೆ; ತಮ್ಮ ದೇವರಿಗೆ ಆ ಬಗೆಯ ಸಾವು ಸ್ವೀಕಾರಾರ್ಹವೆಂದು ಅವರು ಹೇಳುತ್ತಾರೆ" ಎಂದು ಕೊಂಟಿ ತಿಳಿಸುತ್ತಾನೆ. ಕೆಲವೊಮ್ಮೆ ಜನರು ತಮ್ಮ ಪ್ರದೇಶದ ದೇವಾಲಯಗಳಲ್ಲಿ ರಥೋತ್ಸವಗಳನ್ನು ಏರ್ಪಡಿಸುತ್ತಿದ್ದುದುಂಟು[23]. ಹೀಗೆ ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ಚೌಡಪ್ಪನು ಶ್ರೀರಂಗಂ ದೇವಾಲಯದಲ್ಲಿ ರಥೋತ್ಸವ ನಡೆಸುವುದಕ್ಕಾಗಿ ಕೋಡಿಯಾಲಂ ಮತ್ತು ಶಿರುದಾವೂರು ಎಂಬ ಹೆಸರಿನ ಎರಡು ಗ್ರಾಮಗಳನ್ನು ಕ್ರಿ.ಶ. 1433ರಲ್ಲಿ ದಾನವಿತ್ತನು. ಕ್ರಿ.ಶ. 1435ರಲ್ಲಿ ರಥೋತ್ಸವ

ವ್ಯವಸ್ಥೆಯ ಮೇಲ್ವಿಚಾರಣೆ ನಡೆಸಲು ಉತ್ತಮನಂಬಿಗೆ ಸೆಂದನ್‌ಪಾಳ್ಯನ್ ಕಣ್ಣಕುಡಿ ಗ್ರಾಮದಲ್ಲಿ ಭೂಮಿಯನ್ನು "ಭಟ್ಟವೃತ್ತಿ'ಯಾಗಿ ದಾನ ನೀಡಲಾಯಿತು.

ದಕ್ಷಿಣ ಭಾರತದಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿದ್ದ 'ಸಿಡಿ' ಉತ್ಸವವು ವಿದೇಶೀಯರ ಕುತೂಹಲ ಕೆರಳಿಸಿತ್ತು. ನಿಕೊಲೊ ಕೊಂಟಿ, ಬಾರ್ಬೋಸ, ಪಿಯೆಟ್ರೊಡೆಲ್ಲವೆಲ್ಲ ಹಾಗೂ ಬುಕನನ್‌ರಂಥ ಪ್ರವಾಸಿಗರು ಸಿಡಿ ಆಚರಣೆಯನ್ನು ನಿರೂಪಿಸಿದ್ದಾರೆ. ಸಿಡಿಯಾಡುವುದಾಗಿ ತಮ್ಮ ದೇವರಿಗೆ ಹರಕೆ ಹೊತ್ತುಕೊಂಡವರು ಈ ಅಪಾಯದ ಕಾರ್ಯವನ್ನು ಎಸಗುತ್ತಿದ್ದರು. "ಉತ್ಸವಕ್ಕೆ ಸಿಡಿ ಅಥವಾ ಕಬ್ಬಿಣದ ಕೊಕ್ಕೆಯಿಂದ ಆ ಹೆಸರು ಬಂದಿದ್ದು, ಅದಕ್ಕೆ ಮನುಷ್ಯನೊಬ್ಬನನ್ನು ತೂಗುಹಾಕಿ ಸುತ್ತಲೂ ಓಲಾಡಿಸಲಾಗುತ್ತದೆ; ಕೊಕ್ಕೆಯು ಬೆನ್ನಿನ ಸ್ನಾಯುಗಳ ಮೂಲಕ ಹಾದುಹೋಗಿರುತ್ತದೆ". ಕೆಲವು ಜನರು ತಮ್ಮ ಪಕ್ಕೆಯಲ್ಲಿ ತೂತು ಕೊರೆದುಕೊಂಡು ಅದರ ಮೂಲಕ ಹಗ್ಗ ಪೋಣಿಸಿಕೊಂಡು ಅಲಂಕಾರವೆಂಬಂತೆ "ರಥಕ್ಕೆ ತೂಗುಹಾಕಿಕೊಳ್ಳುತ್ತಾರೆ" ಎಂದು ನಿಕೊಲೊ ಕೊಂಟಿಯು ಹೇಳುತ್ತಾನೆ. ಈ ಆಚರಣೆಯನ್ನು ವರ್ಣಿಸುತ್ತ, ದೇವರಮೇಲಣ ಭಕ್ತಿಯಿಂದ ಸ್ತ್ರೀಯರೂ ಈ ಅಪಾಯಕರ ಸಾಹಸಕಾರ್ಯಕ್ಕೆ ತೊಡಗುತ್ತಾರೆಂದು ಬಾರ್ಬೋಸನು ತಿಳಿಸುತ್ತಾನೆ. ಸಿಡಿಯೊಡಿಸುವ ಕೊಕ್ಕೆಗೆ ತನ್ನನ್ನು ತೂಗುಹಾಕಿಕೊಂಡ ಹೆಂಗಸೊಬ್ಬಳ ಬಗ್ಗೆ ಆತ ನಿರೂಪಿಸಿರುವುದು ಹೀಗೆ; "ಗೊತ್ತು ಮಾಡಿದ ದಿನದಂದು ಆಕೆಯು ಬಂಧುಬಳಗ ಮತ್ತು ಇಷ್ಟಮಿತ್ರರು, ಸ್ತ್ರೀಯರು ಹಾಗೂ ಪುರುಷರು, ಬಹಳ ಹಾಡುಗಾರರು ಮತ್ತು ವಾದ್ಯಸಂಗಿತಗಾರರು ಹಾಗೂ ನರ್ತಕರು ಮತ್ತು ದೊಂಬರಾಟದವರು ಇವರೆಲ್ಲರ ಜೊತೆಗೂಡಿ ಮುಂದೆ ಸಾಗುವಳು[24]. ಆಕೆಯು ಸೊಂಟದ ಮೇಲೆ

ಬತ್ತಲೆಯಾಗಿರುವಳು ಮತ್ತು ಕೆಳಭಾಗಕ್ಕೆ ಹತ್ತಿಯ ಬಟ್ಟೆಯನ್ನು ಧರಿಸಿರುವಳು. ರಥವು ಸಿದ್ಧವಾಗಿರುವ ಪ್ರವೇಶದ್ವಾರವನ್ನು ಆಕೆ ತಲುಪಿದ ಕೂಡಲೆ, ಅವರು ಎತ್ತುಯಂತ್ರದ ಇಳಿಬಿಡುವರು ಮತ್ತು ಕೊಂಡಿಯನ್ನು ಚರ್ಮ ಮತ್ತು ಮಾಂಸದ ಮೂಲಕ ಆಕೆಯ ಟೊಂಕಕ್ಕೆ ನುಗ್ಗಿಸುವರು. ಆಮೇಲೆ ಅವರು ಪುಟ್ಟ ಕಠಾರಿಯೊಂದನ್ನು ಆಕೆಯ ಎಡಗೈಯಲ್ಲಿಡುವರು ಮತ್ತು ಇನ್ನೊಂದು ತುದಿಯಿಂದ ಜನರ ಹುಯಿಲು ಮತ್ತು ಕೂಗಾಟದ ಅಬ್ಬರದೊಡನೆ ಎತ್ತುಯಂತ್ರದ ಮೇಲಕ್ಕೇರುವಂತೆ ಮಾಡುವರು. ಎತ್ತುಯಂತ್ರದಿಂದ ಜೋತುಬಿದ್ದಿರುವ ಆಕೆಯ ಕಾಲುಗಳಿಂದ ರಕ್ತ ಸುರಿಯುತ್ತಿದ್ದರೂ ಆಕೆ ಯಾವುದೇ ನೋವಿನ ಕುರುಹು ತೋರುವುದಿಲ್ಲ; ಅಷ್ಟೇ ಅಲ್ಲ, ಅತ್ಯಂತ ಸಂತೋಷದಿಂದ ಆಕೆಯು ಗಂಡನತ್ತ ನಿಂಬೆ ಹಣ್ಣುಗಳನ್ನು ಎಸೆಯುತ್ತ ತನ್ನ ಕಠಾರಿಯನ್ನು ಆಡಿಸುತ್ತಿರುವಳು. ಈ ರೀತಿಯಲ್ಲಿ ಆಕೆಯನ್ನು ದೇವಾಲಯದತ್ತ ಕರೆದೊಯ್ಯುವರು; ಅಲ್ಲಿ ತಾನು ಅಂಥ ಹರಕೆ ಕಟ್ಟಿಕೊಂಡ ದೇವಮೂರ್ತಿ ಇರುವುದುಪ್ರವೇಶದ್ವಾರ ತಲುಪಿದ ಕೂಡಲೆ ಅವರು ಆಕೆಯನ್ನು ಕೆಳಗಿಳಿಸುವರು, ಆಕೆಯ ಗಾಯಗಳಿಗೆ ಶುಶ್ರೂಷೆ ಮಾಡುವರು ಹಾಗೂ ಆಕೆಯನ್ನು ಅವಳ ಗಂಡನಿಗೆ ಒಪ್ಪಿಸುವರು; ಆಕೆಯು ತನ್ನ ಸ್ಥಾನಮಾನಕ್ಕನುಗುಣವಾಗಿ ಬ್ರಾಹ್ಮಣರಿಗೆ ಮತ್ತು ದೇವಮೂರ್ತಿಗಳಿಗೆ ಮಹಾದಾನಧರ್ಮಗಳನ್ನು ಹಾಗೂ ತನ್ನ ಜೊತೆಗೂಡಿ ಬಂದಿದ್ದ ಎಲ್ಲರಿಗೂ ಅನ್ನದಾನಗಳನ್ನು ಮಾಡುವಳು"[25].

❖ **ಸಾಮಾಜಿಕ ಜೀವನ:**

ಭಾರತೀಯ ಸಮಾಜವು ತನ್ನ ಸಾಂಪ್ರದಾಯಿಕ ಮತ್ತು ಪೂರ್ವಾಚಾರಪ್ರಿಯ ಮನೋಭಾವದೊಂದಿಗೆ, ಅತಿನಿಷ್ಠೆಯ ಆಚಾರವಿಚಾರ ಮತ್ತು ರೂಢಿಗಳನ್ನು ಆಧಾರವಾಗಿಟ್ಟು ಕೊಂಡು, ಯಾವುದೇ ಬದಲಾವಣೆಯನ್ನೂ ಮಾಡಿಕೊಳ್ಳದೆ ವಿಜಯನಗರ ಕಾಲದಲ್ಲಿ ಕೂಡ ಮುಂದುವರಿಯಿತು. ಹದಿನಾರನೆಯ ಶತಮಾನದಿಂದ ಮಾತ್ರವೇ ದೆಹಲಿಯಲ್ಲಿ ಮೊಗಲರ ದರ್ಬಾರು ಸ್ಥಾಪನೆಯೊಡನೆ ಮತ್ತು ಭಾರತಕ್ಕೆ ಐರೋಪ್ಯರ ಆಗಮನದೊಂದಿಗೆ ಹಿಂದೂ ಭಾರತದಲ್ಲಿನ ವಿಧಿವಿಧಾನಗಳಲ್ಲಿ ಸ್ವಲ್ಪ ಬದಲಾವಣೆಯನ್ನು ನಾವು ಕಾಣುತ್ತೇವೆ; ಚಿತೆಯ ಮೇಲೆ ಮೃತನೊಡನೆ ಆತನ ಪತ್ನಿಯನ್ನು ಸುಡುವ ಅಥವಾ 'ಸತಿ'ಯಂಥ ಅಸ್ವಾಭಾವಿಕ ರೂಢಿಗಳ ವಿರುದ್ಧ ಸಾಮಾಜಿಕ ಜಾಗೃತಿಯೊಂದು ಮೂಡುವುದನ್ನು ನೋಡುತ್ತೇವೆ.

ವಿಜಯನಗರ ವಂಶಗಳ ಆಳ್ವಿಕೆಯ ಕಾಲದಲ್ಲಿ ಪ್ರಚಲಿತವಿದ್ದ ಜಾತಿವ್ಯವಸ್ಥೆಯ ನಾಲ್ಕು ಶತಮಾಗಳಲ್ಲಿ ಮತ್ತು ಸಾಮ್ರಾಜ್ಯದ ಪತನಾನಂತರವೂ ಅನೇಕ ಉಪಜಾತಿಗಳ ಸೇರ್ಪಡೆಯೊಡನೆ ಮುಂದುವರಿದಿದೆ. ಪ್ರಮುಖ ಹದಿನೆಂಟು ಜಾತಿಗಳನ್ನು ಎಡಗೈ ಮತ್ತು ಬಲಗೈ ಗುಂಪುಗಳೆಂದು ವಿಂಗಡಿಸಿರುವುದು ಇಂದಿಗೂ ಮುಂದುವರಿದುಕೊಂಡು ಬಂದಿದೆ. 19ನೆಯ ಶತಮಾನದ ಉತ್ತರಾರ್ಧದ ಜನಗಣತಿ ವರದಿಗಳು ಭಾರತ ಪರ್ಯಾಯ ದ್ವೀಪದಲ್ಲಿ ಆಸ್ತಿತ್ವದಲ್ಲಿದ ಜಾತಿ ಉಪಜಾತಿಗಳ ಬಗ್ಗೆ ವಿವರಗಳನ್ನು ನೀಡುತ್ತವೆ. ವಿಜಯನಗರದ ಕಾಲದ ಗಿರಿಜನ ವರ್ಗಗಳು ಮತ್ತು ಮೂಲ ನಿವಾಸಿ ಪಂಗಡಗಳನ್ನು ಸ್ವತಂತ್ರ

ಭಾರತದಲ್ಲಿ ಬಹುಮಟ್ಟಿಗೆ ಪರಿಶಿಷ್ಟ ಜಾತಿ ಮತ್ತು ವರ್ಗಗಳೆಂದು ವರ್ಗೀಕರಿಸಲಾಗಿದೆ[26].

ವಿಜಯನಗರವು ಹಿಂದೂ ಮತ ಮತ್ತು ಹಿಂದೂ ಧರ್ಮ ರಕ್ಷಣೆಗಾಗಿಯೇ ಒಂಟಿಯಾಗಿ ಸ್ಥಾಪಿತವಾದ ಸಾಮ್ರಾಜ್ಯ; ಆದರಿಂದಾಗಿ ಅದು ಹಿಂದೂ ಸಮುದಾಯಕ್ಕೆ ಪವಿತ್ರವಾದ ಪ್ರಾಚೀನ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಸಂಸ್ಥೆಗಳನ್ನು ಸುರಕ್ಷಿಸಲೇಬೇಕಿತ್ತು. ಇಮ್ಮಡಿ ದೇವರಾಯನು ವಾಸ್ತವವಾಗಿ ಒಬ್ಬ ಮಧ್ಯಕಾಲೀನ ದೊರೆ; ಎರಡು ದಶಕಗಳಿಗೆ ತುಸು ಮೀರಿದಾತನ ಆಳ್ವಿಕೆಯಲ್ಲಿ ಸಮಾಜವು ತನ್ನ ಮೂಲರೂಪದಿಂದ ಬದಲಾಗಲಿಲ್ಲ. ರೂಢಿಗಳು ನಾಶವಾಗುವುದು ಕಷ್ಟ; ದಕ್ಷಿಣ ಭಾರತದಲ್ಲಿ ಹಿಂದಿನ ಶತಮಾನಗಳಲ್ಲಿ, ವಿಶೇಷವಾಗಿ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ, ಆಸ್ತಿತ್ವದಲ್ಲಿದ್ದ ವಿಧಿವಿಧಾನಗಳು ಮತ್ತು ಧಾರ್ಮಿಕ ಸಂಸ್ಥೆಗಳೇ ಇಮ್ಮಡಿ ದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯದಲ್ಲಿದ್ದುದನ್ನು ಕಾಣುತ್ತೇವೆ. ಹಿಂದೂ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಮನು ಮತ್ತು ಶುಕ್ರಚಾರ್ಯರಂಥ ಪ್ರಾಚೀನ ಧರ್ಮಶಾಸ್ತ್ರಕಾರರು ಕ್ರೋಢೀಕರಿಸಿದ ನ್ಯಾಯ ಸೂತ್ರಗಳನ್ನು ವಿಜಯನಗರದ ಅರಸರು ಗೌರವಿಸಿ ಪಾಲಿಸುತ್ತಿದ್ದರು.

**ವರ್ಣಾಶ್ರಮಧರ್ಮ**:

ಹಿಂದೂಮತದಲ್ಲಿ ಧರ್ಮವು ಸಮಾಜಕ್ಕೆ ನಿಕಟವಾಗಿ ಸಂಬಂಧಿಸಿದುದಾಗಿದೆ. ಅರಸ ಮತ್ತು ಪ್ರಜೆಗಳು ಜೀವನದ ಈ ಸಾಮಾಜಿಕ ಧಾರ್ಮಿಕ ಅಂಶದ ಅರಿವುಳ್ಳವರಾಗಿದ್ದರು. ಪ್ರಾಚೀನ ಸಮಾಜವು ಗುಣಕರ್ಮಗಳನ್ನಾಧರಿಸಿ ನಾಲ್ಕು

ವರ್ಗ ಅಥವಾ 'ವರ್ಣ'ಗಳಿಂದ ಕೂಡಿದುದಾಗಿತ್ತು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಸಮಾಜದ ನಾಲ್ಕು ವರ್ಗಗಳಿಗೆ ಅವು ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಸಮುದಾಯದಲ್ಲಿ ಆಯಾ ಸ್ಥಾನಮಾನಗಳು ಇದ್ದವು. ಇಮ್ಮಡಿ ದೇವರಾಯನು ತನ್ನ ಹಿಂದಿನವರು ಹಾಕಿ ಕೊಟ್ಟ ಪೂರ್ವನಿದರ್ಶನಗಳಿಗೆ ಅನುಗುಣವಾಗಿ ಪ್ರಾಚೀನ ಆಚಾರವಿಚಾರಗಳನ್ನು ಆಧರಿಸಿ ವಿವಿಧ ಜಾತಿಗಳ ಕರ್ತವ್ಯಗಳನ್ನು ರಕ್ಷಿಸಿದನು. ಆತ ವರ್ಣಾಶ್ರಮಧರ್ಮವನ್ನು ರಕ್ಷಿಸುತ್ತ ಸಾಮ್ರಾಜ್ಯವನ್ನು ಆಳಿದನೆಂದು ಹೇಳಲಾಗಿದೆ. ಶಿವಮೊಗ್ಗ ಜಿಲ್ಲೆಯ ಕ್ರಿ.ಶ. 1423ರ ಶಾಸನವೊಂದರಲ್ಲಿ ಆತನಿಗೆ ಸಂಬಂಧಿಸಿದಂತೆ "ಸಕಲ ವರ್ಣಾಶ್ರಮಧರ್ಮಂಗಳನ್ನು ಪಾಲಿಸುತ್ತ ಧರ್ಮಮಾರ್ಗದ ಸಕಲ ಸಾಮ್ರಾಜ್ಯವನಾಳುವ" ಎಂಬ ಮಾತನ್ನು ಒಳಸಲಾಗಿದೆ[27].

**ಸಾಮಾಜಿಕ ಶ್ರೇಣಿ:**

**ಬ್ರಾಹ್ಮಣರು:**

ವಿಜಯನಗರ ಕಾಲದ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಪ್ರಮುಖ ಜಾತಿಗಳಿಂದ ಹಾಗೂ ತಾವು ಮಾಡುವ ಕೆಲಸದ ಸ್ವರೂಪದ ಮೇಲೆ ಅಧಾರಿತವಾದ ಇತರ ಉಪಜಾತಿಗಳಿಂದ ರಚಿತವಾಗಿತ್ತು. ವಿಜಯನಗರದ ಕಾಲಾವಧಿಯು ಹಿಂದೂ ಪುನಶ್ಚೇತನದ ಕಾಲವಾಗಿತ್ತು; ಬ್ರಾಹ್ಮಣರು ತುಂಬ ಗೌರವದರಗಳಿಗೆ ಪಾತ್ರರಾಗಿದ್ದರು ಮತ್ತು ಆ ಅವಧಿಯ ಆಗುಹೋಗುಗಳಲ್ಲಿ ಮುಖ್ಯ ಪಾತ್ರ ವಹಿಸಿದರು, ಸಮಾಜದಲ್ಲಿ ಬ್ರಾಹ್ಮಣರಿಗೆ ಉನ್ನತ

ಸ್ಥಾನಮಾನವನ್ನು ಮನು ನೀಡಿದ್ದಾನೆ. ಆತನ ಪ್ರಕಾರ ಅರಸನು ಬೆಳಗ್ಗೆ ಬೇಗ ಎದ್ದು ವೇದಪಾರಂಗತರೂ ಪವಿತ್ರರೂ ಆದ ಬ್ರಾಹ್ಮಣರನ್ನು ಪೂಜಿಸಬೇಕು. ಅರಸನು ಬ್ರಾಹ್ಮಣರು ತನ್ನನ್ನು ನಾಶಮಾಡದ ಹಾಗೆ ನೋಡಿಕೊಳ್ಳಬೇಕು; ಅವರನ್ನು ಕೆರಳಿಸಬಾರದು. ಆದರೆ ಮಧ್ಯಯುಗದಲ್ಲಿ ಸನಾತನೀಯರಾದ ಬ್ರಾಹ್ಮಣರು ತಮ್ಮ ಸ್ಥಾನಮಾನದಲ್ಲಿ ಗಣನೀಯವಾಗಿ ಕೆಳಗಿಳಿದಿದ್ದುದನ್ನು ನಾವು ಕಾಣುತ್ತೇವೆ. ಸಾಲೆತೊರೆಯವರು ಹೇಳುವಂತೆ "ವಿಜಯನಗರದ ಅರಸರು ಬ್ರಾಹ್ಮಣನನ್ನು ಅತ್ಯುನ್ನತ ಗೌರವದಲ್ಲಿರಿಸುವುದರ ಮೂಲಕ ತಮ್ಮ ವರ್ತನೆಯಲ್ಲಿ ಪ್ರಾಚೀನ ಪರಂಪರೆಯ ಸ್ಪರ್ಶ ತೋರಿದರು; ಆದರೆ ಅದೇ ಕಾಲದಲ್ಲಿ ಆತನನ್ನು ರಾಜ್ಯದ ಸೇವಕನನ್ನಾಗಿ ಮಾಡುವುದರ ಮೂಲಕ ತಮ್ಮ ಮಧ್ಯಯುಗೀನ ಸಾರಸ್ವರೂಪವನ್ನೂ ಅವರು ತೋರಿದರು". ಹಾಗಿದ್ದರೂ ಬ್ರಾಹ್ಮಣನಿಗೆ ಸಲ್ಲಬೇಕಾದ ಗೌರವಕ್ಕೆ ಉಪೇಕ್ಷೆಯುಂಟಾಗಲಿಲ್ಲ. ಇತರ ಎಲ್ಲರಿಗಿಂತ ಬ್ರಾಹ್ಮಣರನ್ನು ಅರಸನು ಹೆಚ್ಚು ಗೌರವದಿಂದ ಕಾಣುತ್ತಿದ್ದನೆಂದು ಅಬ್ದುಲ್ ರಝಾಕ್ ತಿಳಿಸುತ್ತಾನೆ[28].

ಅಬ್ದುಲ್ ರಝಾಕ್‌ನ ತರುವಾಯ ವಿಜಯನಗರಕ್ಕೆ ಬಂದ ವಿದೇಶೀ ಸಂದರ್ಶಕರು ಸಹ ಸಮಾಜದಲ್ಲಿ ಬ್ರಾಹ್ಮಣರಿಗಿದ್ದ ಉನ್ನತಸ್ಥಾನಮಾನದ ಬಗ್ಗೆ ತಿಳಿಸುತ್ತಾರೆ. "ಈ ಬ್ರಾಹ್ಮಣರು ನಮ್ಮ ಕ್ರೈಸ್ತ ಭಿಕ್ಷುಗಳಂತಿರುತ್ತಾರೆ ಮತ್ತು ಪುಣ್ಯ ಪುರುಷರೆಂದು ಪರಿಗಣಿಸಲ್ಪಡುತ್ತಾರೆ. ನಾನು ಹೇಳುತ್ತಿರುವುದು ದೇವಾಲಯಗಳ ಪುರೋಹಿತರು ಮತ್ತು ಪಂಡಿತರಾದ ಬ್ರಾಹ್ಮಣರ ಬಗೆಗೆ. ಏಕೆಂದರೆ ರಾಜನಲ್ಲಿ ಅನೇಕ ಬ್ರಾಹ್ಮಣರಿರುವರಾದರೂ ಅವರು ಪುರ ಮತ್ತು ಪಟ್ಟಣಗಳ ಅಧಿಕಾರಿಗಳಾಗಿದ್ದು ಅವುಗಳ ಸರಕಾರಕ್ಕೆ ಸೇರಿದವರು; ಇತರರು ವರ್ತಕರು

ಹಾಗೂ ಉಳಿದವರು ತಮ್ಮ ಸ್ವಂತದ ಆಸ್ತಿಪಾಸ್ತಿಯಿಂದ ಮತ್ತು ಸಾಗುವಳಿಯಿಂದ ಹಾಗೂ ತಮ್ಮ ಪಿತ್ರಾರ್ಜಿತ ಹೊಲಗಳಲ್ಲಿ ಬೆಳೆಯುವ ಫಸಲುಗಳಿಂದ ಜೀವಿಸುವವರು. ದೇವಾಲಯಗಳ ಉಸ್ತುವಾರಿಯುಳ್ಳ ಜನರು ವಿದ್ವಾಂಸರಾಗಿದ್ದು ಸಾವಿಗೀಡಾಗುವ ಯಾವುದನ್ನೂ ಮಾಂಸವನ್ನಾಗಲಿ, ಮೀನನ್ನಾಗಲಿ ತಿನ್ನುವುದಿಲ್ಲ; ಸಾರನ್ನು ಕೆಂಪಾಗಿಸುವ ಯಾವುದನ್ನೂ ಅವರು ತಿನ್ನುವುದಿಲ್ಲ. ಏಕೆಂದರೆ ಅದು ರಕ್ತವೆಂದೇ ಅವರು ಹೇಳುತ್ತಾರೆ". ಎಂದು ಪೇಯಿಸ್ ತಿಳಿಸುತ್ತಾನೆ ಬ್ರಾಹ್ಮಣರು ಆರಾಧನಾ ಮಂದಿರಗಳ ಅರ್ಚಕರಾಗಿರುರೆಂದು ಮತ್ತು ಅವರು ಸಾವಿಗೀಡಾಗುವ ಯಾವುದನ್ನೂ ತಿನ್ನುವುದಿಲ್ಲವೆಂದು ಬಾರ್ಬೋಸ್ ತಿಳಿಸುತ್ತಾನೆ. "ಅವರು ಮದುವೆಯಾಗುವುದು ಒಬ್ಬಳನ್ನೆ; ಆಕೆ ಮೃತಳಾದರೆ ಮರುಮದುವೆಯಾಗುವುದಿಲ್ಲ; ಅವರ ಗಂಡುಮಕ್ಕಳು ಅವರೆಲ್ಲ ವಸ್ತುಗಳನ್ನು ಪಡೆಯುತ್ತಾರೆ. ರಾಜ್ಯದ ಅರಸ ಮತ್ತು ಮಹಾ ಆಧಿಪರು ಅವರಿಗೆ ನೀಡುವ ತುಂಬ ದಾನದತ್ತಿಗಳ ಮೇಲೆ ಅವರು ಜೀವಿಸುತ್ತಾರೆ; ಅನೇಕ ಬ್ರಾಹ್ಮಣರಿಗೆ ಸ್ಥಿರಾಸ್ತಿಗಳಿವೆ; ಇತರರು ಉತ್ತಮ ಆದಾಯ ಹೊಂದಿರುವ ಮಠ ದೇಗುಲಗಳಲ್ಲಿರುತ್ತಾರೆ". ನ್ಯೂನಿಜನ ಪ್ರಕಾರ ಬ್ರಾಹ್ಮಣರು "ಪ್ರಮಾಣಿಕ ಜನ, ವ್ಯಾಪಾರಮಾಡುವವರು, ಬಹುತೀಕ್ಷ್ಮ ಮತಿಯುಳ್ಳವರು ಹಾಗೂ ಬಹುಪ್ರತಿಭಾವಂತರು, ಲೆಕ್ಕಪತ್ರದಲ್ಲಿ ಪರಿಣತರು, ತೇಳುದೇಹದವರು ಮತ್ತು ಸುರೂಪಿಗಳು; ಆದರೆ ಪರಿಶ್ರಮದ ಕೆಲಸಕಾರ್ಯಗಳಿಗೆ ಯೋಗ್ಯರಲ್ಲದವರು. ಇವರಿಂದ ಮತ್ತು ಇವರು ಕೈಗೊಳ್ಳುವ ಕರ್ತವ್ಯಗಳಿಂದ ರಾಜ್ಯವು ನಡೆಯುತ್ತದೆ[29]. ವಿಜಯನಗರ ಸಾಮ್ರಾಜ್ಯದಲ್ಲಿ ಬ್ರಾಹ್ಮಣರು ವಿವಿಧ ವೃತ್ತಿಗಳಲ್ಲಿ ನಿರತರಾಗಿದ್ದರು; ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಅವರು ಅರಸನಿಗೆ

ಸಚಿವರಾಗಿ ಮತ್ತು ಪ್ರಾಂತಾಧಿಪತಿಗಳಾಗಿ ಸೇವೆ ಸಲ್ಲಿಸುತ್ತಿದ್ದ ತಮ್ಮ ಸಮರ್ಥ ಆಡಳಿತದಿಂದ ರಾಜ್ಯವನ್ನು ಶ್ರೀಮಂತಗೊಳಿಸಿದರು; ಅರಸನಿಗೆ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಸಲಹೆಗಾರರಾಗಿದ್ದರು. ಸೈನಿಕ ಹುದ್ದೆಗಳಲ್ಲೂ ಅವರು ಇದ್ದು ಅರಸನಿಗೆ ದಂಡನಾಯಕರಾಗಿ ಸೇವೆ ಸಲ್ಲಿಸಿದುದುಂಟು. ಇಮ್ಮಡಿ ದೇವರಾಯನು ಸಿಂಹಾಸನವೇರುವ ಸುಮಾರು 20 ವರ್ಷಗಳ ಮೊದಲು ವಿಠಣ್ಣ ಒಡೆಯನೆಂಬ ಬ್ರಾಹ್ಮಣನು ಕ್ರಿ.ಶ. 1403ರಲ್ಲಿ ಆರಗದ ರಾಜ್ಯಪಾಲನಾಗಿದ್ದನು. ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ಆತನ ಸೋದರಿ ಹರಿಮಾಳನ್ನು ಮದುವೆಯಾಗಿ ಭಾವನಾದ ಸಾಳುವ ತಿಪ್ಪ ಅಥವಾ ತಿಪ್ಪರಾಜ ಹಾಗೂ ಆತನ ಮಗ ಗೋಪ ಆತ್ರೇಯಗೋತ್ರಕ್ಕೆ ಸೇರಿದ ಬ್ರಾಹ್ಮಣ ದಂಡನಾಯಕರಾಗಿದ್ದಂತೆ ತೋರುತ್ತದೆ. ಕ್ರಿ.ಶ. 1430ರಲ್ಲಿ ಅಣ್ಣಾಮಾರಾಧ್ಯ ಉರುಫ ಕೊಂಪಲ್ಲಿ ಎಂಬ ಬ್ರಾಹ್ಮಣನು ನಗರ ದ್ವಾರಗಳ ಆಧಿಪತಿಯಾಗಿ ನೇಮಕವಾಗಿದ್ದನು.

ಊರುಗಳಲ್ಲಿ ಬ್ರಾಹ್ಮಣರು ಅಗ್ರಹಾರಗಳೆಂದು ಕರೆಯಲಾದ ಪ್ರತ್ಯೇಕ ವಠಾರವನ್ನು ಹೊಂದಿದ್ದು ಅಲ್ಲಿ ಅವರು ತಮ್ಮ ವೇದಶಾಸ್ತ್ರಗಳ ಅಧ್ಯಯನವನ್ನು ನಡೆಸುತ್ತಿದ್ದರು. ಕೆಲವೊಮ್ಮೆ ಸಂಪೂರ್ಣ ಗ್ರಾಮ ಹಾಗೂ ಅದರ ಅಕ್ಕಪಕ್ಕದ ಭೂಮಿಕಾಣಿಗಳನ್ನು ಮಾನ್ಯವಾಗಿ ಬ್ರಾಹ್ಮಣರಿಗೆ ನೀಡಲಾಗುತ್ತಿತ್ತು. ಅಗ್ರಹಾರಗಳ ಬ್ರಾಹ್ಮಣರು 'ಮಹಾಜನ'ರೆಂದು ಪರಿಚಿತರಾಗಿದ್ದರು. ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಕೆಲವು ವಿಷಯಗಳಲ್ಲಿ ಬ್ರಾಹ್ಮಣರಿಗೆ ಸ್ವಾತಂತ್ರ್ಯ ವಿತ್ತಾದರೂ ಅಗ್ರಹಾರಗಳಿಗೆ ರಾಜ್ಯವು ತನ್ನ ಅಧಿಕಾರಿಗಳನ್ನೂ ಹೇರುತ್ತಿತ್ತು[30].

**ಕ್ಷತ್ರಿಯರು:**

ದ್ವಾರಸಮುದ್ರ ಮತ್ತು ವಿಜಯನಗರ ರಾಜ್ಯಗಳನ್ನು ಕಟ್ಟಿದ ವೀರರು ಕ್ಷತ್ರಿಯ ವರ್ಗದವರಾಗಿರದೆ ದೇಶೀಯ ಮೂಲದ ಧೀರಪುರುಷರಾಗಿದ್ದರೆನ್ನುವುದು ಗಮನಿಸಬೇಕಾದ ಕುತೂಹಲಕರ ಸಂಗತಿ. ಗಮನಸೆಳೆಯುವ ಹಾಗೆ, ವಿಜಯನಗರದ ಇತಿಹಾಸದಲ್ಲಿ ಕ್ಷತ್ರಿಯ ಎಂಬ ಹೆಸರೇ ಗೋಚರಿಸುವುದಿಲ್ಲ. ಹಿಂದೂ ಸಾಮ್ರಾಜ್ಯದ ಜೀವಶಕ್ತಿಯು ವಾಣಿಜ್ಯ ಮತ್ತು ಕೃಷಿಕ ವರ್ಗಗಳ ಚಟುವಟಿಕೆಗಳಿಗೆ ಮತ್ತು ಜನರ ಸಾಂಸ್ಥಿಕ ಜೀವನಕ್ಕೆ ಸಲ್ಲತಕ್ಕದ್ದೆಂದು ಸಾಲೆತೊರೆಯವರು ತಿಳಿಸುತ್ತಾರೆ. ಅವರ ಪ್ರಕಾರ ನಮ್ಮ "ವಿಜಯನಗರದ ಶ್ರೇಷ್ಠತೆಗೆ ಮಧ್ಯಮವರ್ಗಗಳು ಮುಖ್ಯವಾಗಿ ಕಾರಣವೆಂಬ ಭಾವನೆಯು ಸೇನಾನಿಗಳ ವಂಶಮೂಲದ ಮಾತುಗಳಿಗಿಂತ ಹೆಚ್ಚಾಗಿ ಅವರ ಸಾಧನೆಗಳ ಪರಿಭಾಷೆಯಲ್ಲಿ ಮಾಡಿರುವ ಪ್ರಶಂಸೆಯಿಂದ ದೃಢೀಕರಿಸಲ್ಪಟ್ಟಿದೆ. ವಿಜಯನಗರ ಇತಿಹಾಸದ ಆರಂಭದಿಂದಲೇ ಸೇನಾನಿಗಳ ಕ್ಷತ್ರಿಯ ಹಕ್ಕುಬಾಧ್ಯತೆಯನ್ನು ಉಪೇಕ್ಷಿಸುವುದು ಹಾಗೂ "ಮಹಾಮಂಡಲೇಶ್ವರ" ದಂಥ ಮಾಮೂಲಿನ ಬಿರುದುಗಳಿಂದ ಮತ್ತು ಅವರ ಸಾಹಸಕಾರ್ಯಗಳ ಕಥನದಿಂದ ವರ್ಣಿಸುವುದೇ ಪ್ರವೃತ್ತಿಯಾಯಿತು". ದೇಶವನ್ನು ರಕ್ಷಿಸುವ ಸವಲತ್ತು ಮತ್ತು ಗೌರವವು ಕ್ಷತ್ರಿಯವರ್ಗಕ್ಕೆಂದೂ ಸೇರದ ಜನರ ಏಕಸ್ವಾಮ್ಯವಾಗಿದ್ದಿತು.

ವಾಸ್ತವವಾಗಿ ಕ್ಷತ್ರಿಯರು ವಿಶೇಷವಾಗಿ ಉತ್ತರ ಭಾರತದ ಇತಿಹಾಸದಲ್ಲಿ ಪರಿಚಿತವಾಗಿರುವಂತೆಯೇ ದಕ್ಷಿಣದಲ್ಲಿಯೂ ಈ ನೆಲದ ಮೂಲ

ನಿವಾಸಿಗಳೆನಿಸಿರಲಿಲ್ಲ. ಅವರನ್ನು ಕೆಲವು ಶಾಸನಗಳಲ್ಲಿ 'ಬ್ರಹ್ಮಕ್ಷತ್ರಿಯ' ಎಂದು ಕರೆದಿದೆ. ಆರಗದ ಪ್ರಾಂತಾಧಿಕಾರಿ ಯಾದ ವಿಠಣ್ಣ ಒಡೆಯನೊಬ್ಬ ಬ್ರಹ್ಮಕ್ಷತ್ರಿಯನಾಗಿದ್ದನು. ಬ್ರಹ್ಮಕ್ಷತ್ರಿಯರ ಉಗಮದ ಬಗ್ಗೆ ಶಾಸನಗಳಿಂದ ಏನೂ ತಿಳಿದುಬರುವುದಿಲ್ಲ. ಬ್ರಾಹ್ಮಣ ರಾಜ್ಯಪಾಲರು ಹಾಗೂ ದಣ್ಣಾಯಕರು ತಮ್ಮ ಪರಾಕ್ರಮ ಹಾಗೂ ದಂಡನಾಯಕರ ಸ್ಥಾನಗಳಿಂದಾಗಿ ಹಾಗೆ ಕರೆಯಲ್ಪಟ್ಟಿರಬೇಕು[31].

**ಸೆಟ್ಟಿಗಳು:**

ದಕ್ಷಿಣ ಭಾರತದ ಮೊದಲ ಇತಿಹಾಸದಲ್ಲಿ, ಅದರಲ್ಲಿಯೂ ಹೆಚ್ಚಾಗಿ ಕರ್ನಾಟಕ ಮತ್ತು ತಮಿಳನಾಡುಗಳಿಗೆ ಸಂಬಂಧಿಸಿದಂತೆ ಸೆಟ್ಟಿಗಳು ಅಥವಾ ಚೆಟ್ಟಿಗಳು ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಸೆಟ್ಟಿಗಳ ಪೂರ್ವಿಕರು ಪ್ರಾಚೀನ ಸಮಾಜದ ವೈಶ್ಯರು ವ್ಯಾಪಾರ ಮತ್ತು ಲೇವಾದೇವಿ ವ್ಯವಹಾರ ಅವರಿಗೆ ನೀಡಲಾದ ಕರ್ತವ್ಯಗಳಾಗಿದ್ದವು. ಮಧ್ಯಯುಗದಲ್ಲಿ ದೇಶದುದ್ದಕ್ಕೂ ಪ್ರಮುಖ ವ್ಯಾಪಾರಿಗಳು ಸೆಟ್ಟಿಗಳಾಗಿದ್ದರು. ಮೆಣಸು ಮತ್ತು ಅಮೂಲ್ಯ ರತ್ನಗಳನ್ನು ಅವರು ವ್ಯಾಪಾರ ಮಾಡುತ್ತಿದ್ದರು. ಕರಾವಳಿಯುದ್ದಕ್ಕೂ ಹಾದು ಹೋಗುತ್ತಿದ್ದ ವಿದೇಶೀ ಹಡಗುಗಳವರು ಅವರಿಂದ ಈ ಪದಾರ್ಥಗಳನ್ನು ಕೊಂಡು ಕೊಳ್ಳುತ್ತಿದ್ದರು. ತಮಿಳು ದೇಶನ ಚೆಟ್ಟಿನಾಡಿನ ಪ್ರದೇಶದಲ್ಲಿ, ವಿಶೇಷವಾಗಿ ರಾಮನಾಡು ಮತ್ತು ಮಧುರೆ ಜಿಲ್ಲೆಗಳಲ್ಲಿ ಅವರ ಕುಲವು ಇಂದಿಗೂ ತುಂಬ ಶ್ರೀಮಂತವಾದುದು. ಕರ್ನಾಟಕದಲ್ಲಿ ಅವರು ಗವರೆ, ಗಾತ್ರಿಗ, ಸೆಟ್ಟಿ, ಸೆಟ್ಟಿಗುತ್ತ, ಅಂಕಣಕಾರ, ಬೀರ, ಬೀರವಣಿಗ, ಗಂಡಿಗ, ಗವುಂಡ ಮತ್ತು ಗವುಂಡಸ್ವಾಮಿಗಳೆಂದು ಪರಿಚಿತವಾಗಿರುವ ಜಾತಿಯ

ಬೇರೆ ಬೇರೆ ಭಾಗಗಳನ್ನು ಹೊಂದಿದ್ದರೆಂದು ತೋರುತ್ತದೆ. ಸಾಮ್ರಾಜ್ಯದ ತಮಿಳು ಪ್ರದೇಶಗಳಲ್ಲಿ ಅವರು ತಮ್ಮನ್ನು ನಗರತ್ತಾರ್, ವೀರಕೋಡಿಯರ್, ಪೆರು-ನಗರತ್ತಾರ್ ಹಾಗೂ ವೈಶ್ಯವಾಣಿಯ-ನಗರತ್ತಾರ್ ಎಂಬ ಶಬ್ದಗಳಿಂದ ವರ್ಣಿಸಿಕೊಂಡಿದ್ದಾರೆ. ವಿಜಯನಗರದ ಕಾಲದಲ್ಲಿ ಅವರೊಂದು ಶ್ರೀಮಂತ ವ್ಯಾಪಾರಿ ವರ್ಗ. ಅವರು ತಮ್ಮದೇ ಆದ ಜಾತಿನಾಯಕರನ್ನು ಹೊಂದಿರುತ್ತಿದ್ದರು. ಅರಸನ ಸಾಮಂತರು ತೆರಿಗೆಗಳನ್ನು ವಿಧಿಸುವ ಮೊದಲು ಅಥವಾ ಸ್ಥಳೀಯ ದೇವಾಲಯಗಳಿಗೆ ದಾನಧರ್ಮಗಳನ್ನು ಮಂಜೂರುಮಾಡುವ ಮೊದಲು ಅವರ ಅನುಮತಿಯನ್ನು ಅನೇಕವೇಳೆ ಪಡೆಯುತ್ತಿದ್ದುದುಂಟು. ಈ ಸೆಟ್ಟಿಗಳಲ್ಲಿ ಕೆಲವರು ಸಾಮ್ರಾಜ್ಯದ ಮತ್ತು ಪ್ರಾಂತೀಯ ಆಸ್ಥಾನಗಳಲ್ಲಿ ತುಂಬ ಪ್ರಾಮುಖ್ಯ ಪಡೆದರು. ತಮ್ಮ ವಾಣಿಜ್ಯ ಸಂಘಗಳ ನೇಕಾರರಾದ ಸೆಟ್ಟಿಗಳು ಪಟ್ಟಣಸ್ವಾಮಿಯಂಥ ಪ್ರಮುಖ ಸ್ಥಾನಮಾನಗಳನ್ನು ಪಡೆದರು.. ಪೃಥ್ವಿ ಸೆಟ್ಟಿಯು ಅಂಥ ಒಬ್ಬ ಗಣ್ಯಪುರುಷ. ಕ್ರಿ.ಶ. 1430ರಲ್ಲಿ, ಒಬ್ಬ ಪ್ರಮುಖ ಪಟ್ಟಣಸ್ವಾಮಿಯಾದ ಚಿಯಿಬೆಸ್ಸಿ ಸೆಟ್ಟಿಯು ಸಂತೆಯೊಂದನ್ನು ನಡೆಸಲು ಭೂದಾನ ನೀಡಿದ. ಕ್ರಿ.ಶ. 1427ರಲ್ಲಿ ಮಹಾ ಹಿರಿಯ ವರ್ತಕರು ಹಾಗೂ ಉಭಯ ನಾನಾದೇಶಿಗಳ ಪ್ರತಿನಿಧಿಗಳಿಗೆ ಪಟ್ಟಣಸ್ವಾಮಿಯ ಅಧಿಕಾರವನ್ನು ನೀಡಲಾಯಿತು[32]. ಪಟ್ಟಣಸ್ವಾಮಿಯು ವಣಿಕ ಸಂಘಗಳು ಅಸ್ತಿತ್ವದಲ್ಲಿದ್ದ ಪುರ ಅಥವಾ ನಗರಪ್ರದೇಶಗಳ ಆಡಳಿತಾಧಿಕಾರವನ್ನು ಹೊಂದಿದ್ದಂತೆ ತೋರುತ್ತದೆ. ಮಾನ್ಯವೊಂದರ ಜೊತೆಗೆ ಪಟ್ಟಣಸ್ವಾಮಿ ಸ್ಥಾನವನ್ನು 'ಸೆಟ್ಟಿ' ಜಾತಿಯು ಹೊಂದಿದ ಇನ್ನೊಂದು ದೃಷ್ಟಾಂತವೂ ಇದೆ; ಕ್ರಿ.ಶ. 1426ರಲ್ಲಿ ಬಲದಪಸೆಟ್ಟಿಯು ಅಂಥ ಗೌರವವನ್ನು ಹೊಂದಿದ. ಬಾರ್ಬೋಸನ ಪ್ರಕಾರ

ಸೆಟ್ಟಿಗಳು ಬಹುಮಟ್ಟಿಗೆ ಬಿಳಿಗೆ ತಿರುಗಿದ ಕಂದು ಬಣ್ಣದವರು ಹಾಗೂ ಸ್ಥೂಲದೇಹದವರು ಅವರು ಪ್ರಶಸ್ತ ಶಿಲೆ, ಸಣ್ಣ ಮುತ್ತು, ಹವಳ ಮತ್ತಿತರ ಚಿನ್ನ ಬೆಳ್ಳಿಯಂಥ ಅಮೂಲ್ಯ ವಸ್ತುಗಳ ವ್ಯಾಪಾರ ಮಾಡುವ ದೊಡ್ಡ ವರ್ತಕರು; ಅವರು ನಿಯೋಜಿತ ಬೀದಿಗಳಲ್ಲಿ ತಮ್ಮದೇ ಆದ ವಿಶಾಲ ಮನೆಗಳನ್ನು ಹೊಂದಿರುವರು; ಅವರು ಅಮೂಲ್ಯ ಆಭರಣಗಳನ್ನು ಧರಿಸುತ್ತಾರೆ; ವ್ಯವಹಾರ ಹಾಗೂ ಸಂಪತ್ಸಂಗ್ರಹದಲ್ಲಿ ಅವರು ಜಾಗರೂಕರು; ಅವರು ಸಂಯಮಿಗಳು ಮತ್ತು ಊಟೋಪಹಾರ ಹಾಗೂ ವೆಚ್ಚಮಾಡುವಲ್ಲಿ ಕ್ರಮಬದ್ಧರು. "ಅವರು ತಮ್ಮ ವ್ಯವಹಾರಗಳನ್ನು ತಾವೇ ನಿರ್ವಹಿಸುವರು; ಅವರ ಅಪರಾಧಗಳನ್ನು ಅರಸರು ವಿಚಾರಿಸಲಾರರು; ಒಬ್ಬರು ಇನ್ನೊಬ್ಬರಿಗೆ ನ್ಯಾಯವನ್ನು ಒದಗಿಸುವರು; ಅದರಿಂದ ಅರಸನಿಗೆ ತೃಪ್ತಿಯಾಗುವುದು. ಅವರು ಮರಣಹೊಂದಿದಾಗ ಅವರ ದೇಹಗಳನ್ನು ಸುಡಲಾಗುವುದು; ಅವರು ಹಸುವನ್ನು ಮಾತ್ರ ಬಿಟ್ಟು ಉಳಿದ ಎಲ್ಲವನ್ನೂ ತಿನ್ನುವರು"[33].

**ವೀರ ಪಾಂಚಾಳರು:**

ವೀರ ಪಾಂಚಾಳರೆಂದು ಕರೆಯಲಾದ ವ್ಯಾಪಾರ ಮತ್ತು ಕೈಗೆಲಸ ಮಾಡುವ ವರ್ಗವು ಪ್ರಾಮುಖ್ಯದಲ್ಲಿ ಸೆಟ್ಟಿ ಅಥವಾ ಚೆಟ್ಟಿಗಳಿಗೆ ಸರಿಸಮನಾಗಿತ್ತು. ಕರ್ಮಿಗಳಾಗಿ ಅವರಿಗೆ ಗ್ರಾಮ ಜನಸಮುದಾಯದಲ್ಲಿ ಒಂದು ಪ್ರಧಾನ ಸ್ಥಾನವಿತ್ತು. ಅವರಲ್ಲಿ ಆಕ್ಕಸಾಲೆ, ಕಮ್ಮಟದ ಆಚಾರಿ ಅಥವಾ ನಾಣ್ಯ ಟಂಕಿಸುವವನು, ಕಮ್ಮಾರ, ಬಡಗಿ ಹಾಗೂ ಕಲ್ಲುಕುಟ್ಟಿಗರಿದ್ದರು ಅವರನ್ನು ಪಾಂಚಾಳರೆಂದೂ ಕರೆಯಲಾಗಿದೆ. ತೆಲುಗು

ಮಾತನಾಡುವ ಪ್ರದೇಶದಲ್ಲಿ ಅವರನ್ನು ಪಂಚಾನಂವಾರು ಅಥವಾ ಪಂಚಾನುಲು ಎಂದು ಕರೆದಿದೆ.

ವೀರಪಾಂಚಾಳರು ತಮ್ಮ ಪ್ರಾಚೀನತೆ ಮತ್ತು ಶ್ರೇಷ್ಠತೆಯ ಬಗ್ಗೆ ಬಡಾಯಿ ಕೊಚ್ಚಿ ಕೊಳ್ಳುತ್ತಾರೆ ಕ್ರಿ.ಶ. 1327ರ ಶಾಸನವೊಂದರಲ್ಲಿ ಅವರ ಉಗಮವನ್ನು ಧರ್ಮಶಾಸ್ತ್ರಕಾರನಾದ ಮನುವಿನಲ್ಲಿ ಗುರುತಿಸಿದೆ; ಅವರು ಅಪಾರ ಜ್ಞಾನ ಮತ್ತು ವಿದ್ವತ್ತುಳ್ಳವರೆಂದು, ಉನ್ಮಾನ, ಉಪಮಾನ, ವೇದ, ಶಾಸ್ತ್ರ, ತರ್ಕ ವ್ಯಾಕರಣ ಹಾಗೂ ಕಾವ್ಯ ಕಲೆಗಳಲ್ಲಿ ಹಾಗೂ ಅಶ್ವಶಿಕ್ಷೆ ಮತ್ತು ಗಜಶಿಕ್ಷೆಗಳಲ್ಲಿ ಪರಿಣತರೆಂದು ಉಲ್ಲೇಖಿಸಿದೆ. ಪಠಣ, ಲೇಖನ, ಭಾಷೆ ಮತ್ತು ಪುರಾಣಗಳಲ್ಲಿ ಅವರು ಪಾರಂಗತರೆಂದು ನಿರೂಪಿಸಿದೆ. ಅವರು ಯುಕ್ತರಣದ ಗಜಹಿತಕಾರುಣ್ಯ' ರಂದು ವರ್ಣಿಸಿದೆ.

ಒಂದನೆಯ ದೇವರಾಯನ ಕಾಲದಲ್ಲಿ ವೀರಪಾಂಚಾಳರು ರಾಜಾಶ್ರಯವನ್ನು ಪಡೆದವರೆಂದು ತೋರುತ್ತದೆ. ರಾಜಾಸ್ತಾನದಲ್ಲಿ ಸಿಂಹಾಸನವನ್ನು ತಯಾರಿಸಿದುದಕ್ಕೆ ಪ್ರತಿಫಲವಾಗಿ ಹರಿಹರಮಹಾರಾಯನು ಎತ್ತು, ಎಮ್ಮೆ, ಬಂಡಿ, ರತ್ನಾಭರಣಗಳು ಇತ್ಯಾದಿಗಳ ಮೇಲಿನ ತೆರಿಗೆಯನ್ನು ಮಾನ್ಯಮಾಡಿದುದನ್ನು ಒಂದನೆಯ ದೇವರಾಯನು ಸ್ಥಿರೀಕರಿಸಿದ ವಿಷಯವನ್ನು ಕ್ರಿ.ಶ. 1418ರ ಶಾಸನವೊಂದು ದಾಖಲಿಸುತ್ತದೆ. ವಿದ್ಯಾನಗರ ಅಥವಾ ವಿಜಯನಗರದಲ್ಲಿ ರಥೋತ್ಸವ ಕಾಲದಲ್ಲಿ ವೀರಪಾಂಚಾಳರು ಕೆಲವು ವಿಶೇಷ ಹಕ್ಕುಗಳನ್ನು ಹೊಂದಿದ್ದರೆನ್ನುವುದನ್ನು ಅರಸ ಸದಾಶಿವರಾಯನಿಗೆ ಸೇರಿದ ಶಾಸನವೊಂದರಲ್ಲಿ ತಿಳಿಸಿದೆ. ವಿದ್ಯಾನಗರದ ರಥೋತ್ಸವ ಕಾಲದಲ್ಲಿ ಅವರಿಗೆ ಬೇಲೂರಿನಲ್ಲಿ ಎಲ್ಲೆಗಳನ್ನು ಗೊತ್ತುಮಾಡಿದ

ನಿರ್ದಿಷ್ಟ ಪ್ರದೇಶವೊಂದನ್ನು ನಿಗದಿಗೊಳಸಲಾಯಿತು; ಅಲ್ಲಿ ಅವರು ಸಾಲುಮನೆಗಳನ್ನು ನಿರ್ಮಿಸುವುದು, ತಮ್ಮ ಮೆತಸಂಪ್ರದಾಯಗಳನ್ನು ಪಾಲಿಸುವುದು ಮತ್ತು ಒಡವೆ ವಸ್ತ್ರಗಳನ್ನು ತಯಾರಿಸುವುದು, ಬೇಲೂರಿನ ಚೆನ್ನಿಗರಾಯ ದೇವಾಲಯದಲ್ಲಿ ಅವರಿಗೆ ನೀಡಲಾಗಿದ್ದ ಸವಲತ್ತು ಮತ್ತು ಸ್ಥಾನಮಾನಗಳನ್ನು ಅನುಭೋಗಿಸುವುದು – ಇವು ನಡೆಯುತ್ತಿದ್ದವು[34].

ವೀರಪಾಂಚಾಳರ ವೃತ್ತಿ ಸಂಘದ ತನ್ನ ನಿರ್ಣಯಗಳನ್ನು ಉಲ್ಲಂಘಿಸುವವರ ಮೇಲೆ ದಂಡ ವಿಧಿಸುವ ಅಧಿಕಾರವನ್ನು ಹೊಂದಿತ್ತು. ತರಕಣಾಂಬಿಯ ವೀರಪಾಂಚಾಳರು ತಮ್ಮ ಧರ್ಮವನ್ನು ಹಾಳುಮಾಡುವವನನ್ನು ಪಾಂಚಾಳ, ಆಹಳ ಅಥವಾ ವ್ಯಾಪಾರ, ಸಮಯ ಹಾಗೂ 'ನಾಡು'ಗಳಂದ ಬಹಿಷ್ಕರಿಸಲಾಗುವುದೆಂದು ಅಂಥ ಕಟ್ಟಳೆಯನ್ನು ಮಾಡಿದರು. ವೀರಪಾಂಚಾಳ ವೃತ್ತಿ ಸಂಘವು ಧಾರ್ಮಿಕ ಉದ್ದೇಶಗಳಗಾಗಿ ತನ್ನ ಸದಸ್ಯರಿಗೆ ತೆರಿಗೆಗಳನ್ನು ವಿಧಿಸಬಹುದಿತ್ತು. ಕೆಲವೊಂದು ಸಂದರ್ಭದಲ್ಲಿ ದೇವಾಲಯಗಳಗೆ ಸೇರಿದ ನರ್ತಕಿಯರ ಅಥವಾ ಪಾತ್ರದವರ ನಿರ್ವಹಣೆಯ ಉದ್ದೇಶದಿಂದ ಅವರು ದತ್ತಿ ನೀಡುತ್ತಿದ್ದರು.

**ಕೈಕ್ಕೋಲರು**:

ಈ ಜಾತಿಯೂ ವೃತ್ತಿಯಾಧಾರಿತವಾದುದಾಗಿದ್ದು ನೇಕಾರರನ್ನು ಉಲ್ಲೇಖಸುತ್ತದೆ; ಅವರು ನೇಯ್ಗೆಯಲ್ಲಿ ಬಳಸುವ ದಾರಹಿಡಿಕೆ ಸಲಕರಣೆಯಿಂದಾಗಿ ಅವರಿಗೆ ಕೈಕ್ಕೋಲರೆಂಬ ಹೆಸರು ಬಂದಿದೆ. ವಿಜಯನಗರ ಕಾಲದಲ್ಲಿ ಜನರಿಗೆ ಅವಶ್ಯಕವಾದ ಬಟ್ಟೆ ಬರೆಯ ಸರಬರಾಜನ್ನು ಮಾಡುತ್ತಿದ್ದುದರಿಂದ ಅವರದೊಂದು

ಪ್ರಭಾವಶಾಲಿ ಸಮುದಾಯವಾಗಿತ್ತು[35]. ಅವರು ಮಗ್ಗಗಳಿಂದ ಕೆಲಸ ಮಾಡುತ್ತಿದ್ದರು ಹಾಗೂ ದೇವಾಲಯದ ಪರಿಸರದಲ್ಲಿ ವಾಸಿಸುತ್ತಿದ್ದರು. ಆ ಕಾಲದ ಬಹುಪಾಲು ಶೂದ್ರ ಜಾತಿಯವರಂತೆಯೇ ಕೈಕ್ಕೋಲರು ಕೂಡ ತಮ್ಮ ಕನ್ಯಯರನ್ನು 'ಬಸವಿ' ಅಥವಾ 'ದೇವದಾಸಿ'ಗಳಾಗಿ ಸಲ್ಲಿಸುವ ಪದ್ಧತಿಯನ್ನು ಅನುಸರಿಸುತ್ತಿದ್ದರು; ಅದೊಂದು ಪರವಾನಗಿ ಪಡೆದ ಧಾರ್ಮಿಕ ವೇಶ್ಯಾವೃತ್ತಿಯಾಗಿತ್ತು. ಆಡಳಿತ ಮತ್ತು ಸ್ಥಳೀಯ ತೆರಿಗೆ ವಸೂಲಾತಿಯಂಥ ದೇವಾಲಯದ ವಿಷಯಗಳಲ್ಲಿ ಕೈಕ್ಕೋಲರ ಮಾತಿಗೆ ತುಸು ಅವಕಾಶವಿತ್ತು. ಶುಭಾಶುಭ ಸಮಾರಂಭ ಗಳೆರಡರಲ್ಲಿಯೂ ಅವರಿಗೆ ಶಂಖ ಊದುವ ಮತ್ತು ದಂಡ ಬಳಸುವ ಸವಲತ್ತುಗಳಿದ್ದವು. ಹದಿನೆಂಟು ಸಾಂಪ್ರದಾಯಿಕ ಜಾತಿಗಳಲ್ಲಿ ಕೈಕ್ಕೋಲರು ಸೇರಿದ್ದರು. ವೃತ್ತಿಪರವಾದ ಒಂದು ಜಾತಿಗೆ ಸೇರಿದ ಅವರು ದಾನಧರ್ಮಗಳನ್ನು ಮಾಡುವಷ್ಟು ಮತ್ತು ದೇವಾಲಯಗಳನ್ನು ಕಟ್ಟಿಸುವಷ್ಟು ಸಿರಿವಂತರಾಗಿದ್ದರು. ಕ್ರಿ.ಶ. 1370ರ ಶಾಸನವೊಂದರಲ್ಲಿ ದಾಖಲಿಸಿರುವಂತೆ ಅವರಿಗೆ ವಿಧಿಸಿದ ತೆರಿಗೆಗಳಲ್ಲಿ ರಿಯಾಯಿತಿಗಳು ಆಗಾಗ್ಗೆ ದೊರೆಯುತ್ತಿದ್ದುದುಂಟು. ಕೆಲವೊಮ್ಮೆ ಅವರಿಗೆ ಕಟ್ಟುನಿಟ್ಟಾಗಿ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಕ್ರಿ.ಶ. 1445ರಲ್ಲಿ ಮಹಾಪ್ರಧಾನ ಅಣ್ಣಪ್ಪಯ್ಯಂಗಳ ಆದೇಶದ ಮೇರೆಗೆ ತಿರುಕ್ಕೋವಲಂನ ದೇವಾಲಯಕ್ಕೆ ಸ್ಥಳದ ಕೈಕ್ಕೋಲರಿಂದ ಸಲ್ಲಬೇಕಾದ ತೆರಿಗೆಗಳನ್ನು ಮಾನ್ಯ ಮಾಡಲಾಯಿತು. ಕ್ರಿ.ಶ. 1426ರ ಒಂದು ಶಾಸನದ ಪ್ರಕಾರ ಪುಲಿವನ ನಾಡಿನ ತಿರುಪ್ಪುಲಿವನಂ ಗ್ರಾಮದ ಕೈಕ್ಕೋಲರು ಮತ್ತು ಇತರ ಕಸಬುಗಾರರು ಸಲ್ಲಿಸಬೇಕಾದ ವೃತ್ತಿತೆರಿಗೆಯನ್ನು ಮಹಾಪ್ರಧಾನಿ ಮಲ್ಲರಸ ಉಡ್ಯೆಯರ ಕಾರ್ಯಕರ್ತನಾದ ಸಲಕ್ಯಯ ನಾಯಕ್ಕರ

ಆದೇಶದ ಮೇರೆಗೆ ನಿಗದಿಗೊಳಿಸಲಾಯಿತು. ಕ್ರಿ.ಶ. 1428ರಲ್ಲಿ ಯಡಗರೈತಾಯನೂರು ಗ್ರಾಮದ 'ಕಾಣಿಯಾಚಿ'ಯ ಹಕ್ಕನ್ನು ಕೈಕ್ಕೋಲರಿಗೆ, ಅವರು ಅಲ್ಲಿಯೂರಿನ 'ಊರವರಿಗೆ' ಮತ್ತು ವಯಿರಭೋಜನ ಚತುರ್ವೇದಿಮಂಗಲವಾದ ನೆರುಕ್ಕುರಂ ಗ್ರಾಮದ 'ಸಭಾ'ಕ್ಕ ಮೂವತ್ತು ಪಣಂಗಳ ಮೊತ್ತವನ್ನು ನೀಡಿದುದಕ್ಕೆ ಪ್ರತಿಯಾಗಿ ನೀಡಲಾಯಿತು. ಕ್ರಿ.ಶ. 1439ರ ಶಾಸನವೊಂದು ತಿರುಮಾದ್ಯೈವಿಗಳಗರ್ರೆ ಗ್ರಾಮದಲ್ಲಿ ನೆಲಸಿದ ಕೈಕ್ಕೋಲರ್ ಮತ್ತಿತರ ಕಸಬುಗಾರರ ಮೇಲೆ ವಿಧಿಸಲಾದ ತೆರಿಗೆಗಳನ್ನು ಉಲ್ಲೇಖಿಸುತ್ತದೆ[36].

**ರೆಡ್ಡಿಗಳು ಮತ್ತು ಒಕ್ಕಲಿಗರು:**

ಸಾಮ್ರಾಜ್ಯದ ತೆಲಗು ಮತ್ತು ತಮಿಳು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕೃಷಿಕ ವರ್ಗವು 'ರೆಡ್ಡಿ' ಎಂದು ಪರಿಚಿತವಾಗಿದ್ದರೆ ಕನ್ನಡ ಮಾತನಾಡುವ ಪ್ರದೇಶದಲ್ಲಿ ಅದು ಒಕ್ಕಲಿಗ ಅಥವಾ 'ವೊಕ್ಕಲಿಗ' ಎಂಬ ಹೆಸರಿನಿಂದ ಪರಿಚಿತವಾಗಿತ್ತು. ರೆಡ್ಡಿಗಳು ಹಾಗೂ ವೊಕ್ಕಲಿಗರು ಜನಸಂಖ್ಯೆಯ ಪ್ರಧಾನ ಭಾಗವಾಗಿದ್ದು ಗ್ರಾಮೀಣ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿದ್ದರು. ಕರ್ನಾಟಕದಲ್ಲಿ ವೊಕ್ಕಲಿಗರ ಮುಖ್ಯಸ್ಥನನ್ನು 'ಗೌಡ' ಅಥವಾ 'ನಾಡಗೌಡ' ಎಂದು ಕರೆಯಲಾಗುತ್ತಿತ್ತು. ವೊಕ್ಕಲಿಗರು ತಮ್ಮ ಮುಖ್ಯಸ್ಥನ ಆಡಳಿತ ಅಥವಾ ಗೌಡಕಿಯ ವ್ಯಾಪ್ತಿಗೊಳಪಡುತ್ತಿದ್ದುದರಿಂದ ಅವರನ್ನು ಸಾಮಾನ್ಯವಾಗಿ 'ಗೌಡ'ರೆಂದು ಕರೆಯಲಾಗುತ್ತಿತ್ತು. ಆಂಧ್ರ ಮತ್ತು ತಮಿಳು ಪ್ರದೇಶಗಳಲ್ಲಿ ರೆಡ್ಡಿಗಳು ಅಥವಾ ಗ್ರಾಮಗಳ ಕೃಷಿಕರು 'ರೆಡ್ಡಿ' ಎಂದು ಕರೆಯಲಾದ ಮುಖ್ಯಸ್ಥನ ಕೈಕೆಳಗೆ

ಬರುತ್ತಿದ್ದರು. ಕೃಷಿಕ ಸಮುದಾಯದ ಮುಖ್ಯಸ್ಥನಾದ 'ರೆಡ್ಡಿ' ಅಥವಾ 'ರೆಡ್ಡಿ'ಯು ಸಾಮಾನ್ಯವಾಗಿ ಗ್ರಾಮದ ಮುಖ್ಯಸ್ಥನೂ ಅಲ್ಲಿನ ವ್ಯವಹಾರಗಳ ಆಧೀಕ್ಷಕನೂ ಆಗಿರುತ್ತಿದ್ದನು. ಆತನನ್ನು 'ಗ್ರಾಮಕಾರ'ನೆಂದೂ ಕರೆಯಲಾಗುತ್ತಿತ್ತು. ಈ ಶಬ್ದದಿಂದ 'ಗೌಡ' ಉತ್ಪತ್ತಿಯಾಯಿತೆನ್ನುವುದು ಸ್ಪಷ್ಟ.

ಇಮ್ಮಡಿ ದೇವರಾಯನ ಕಾಲದಿಂದ ರೆಡ್ಡಿಗಳು ಪ್ರಾಮುಖ್ಯಕ್ಕೆ ಬಂದಂತೆ ತೋರುತ್ತದೆ. ಸಾಮ್ರಾಜ್ಯದಲ್ಲಿ ಅವರಿಗೆ ಗಣನೀಯಾದ ಪ್ರಭಾವವಿತ್ತು. ರೆಡ್ಡಿ ಪ್ರಭಾವದ ಪಂತ ಮೈಲಾರನು ತನ್ನ ಜಾಣ್ಮೆ ಕೌಶಲ ಹಾಗೂ ಪರಾಕ್ರಮಗಳಿಂದ ದುಷ್ಟ ಅರಸರನ್ನು ದಮನ ಮಾಡುವ ಮೂಲಕ ಮತ್ತು ಗೌರವಾದರಗಳನ್ನು ಸಲ್ಲಿಸಿ ಹಾಗೂ ಮಹಾ ಕಾಣಿಕೆಗಳನ್ನು ನೀಡುವುದರ ಮೂಲಕ ತನ್ನ ಒಡೆಯನಾದ ಇಮ್ಮಡಿ ದೇವರಾಯನನ್ನು ಸಂಪ್ರೀತ ಗೊಳಿಸಿದಂತೆ ತೋರುತ್ತದೆ. ಸಾಲೆತೊರೆಯವರ ಪ್ರಕಾರ ದಕ್ಷಿಣದಲ್ಲಿ ನೆಲಸುನಾಡನ್ನು ಸ್ಥಾಪಿಸುವ ಮಹಾನ್ ಪ್ರಯತ್ನದ ಉದ್ದೇಶಕ್ಕೆ ರೆಡ್ಡಿಗಳು ನೆರವಾಗಿದ್ದಿರಿನಹುದಾದ ಸಾಧ್ಯತೆಯುಂಟು; ತಿರುಚಿನಾಪಳ್ಳಿ, ಕೊಯಮತ್ತೂರು ಹಾಗೂ ಸೇಲಂ ಜಿಲ್ಲೆಗಳಲ್ಲಿ ಅವರ ಉಪಸ್ಥಿತಿಯನ್ನು ಇದು ವಿವರಿಸಬಹುದು[37].

**ನಾಯಿಂದರು:**

ಪ್ರಾಚೀನ ಕಾಲದಿಂದಲೂ ನಾಯಿಂದರು ಸಾಮಾಜಿಕ ರಚನೆಯಲ್ಲಿ ಒಂದು ಪ್ರಮುಖ ಸಮುದಾಯವಾಗಿ ರೂಪುಗೊಂಡಿದ್ದಾರೆ ಹಾಗೂ ಅವರ ಪ್ರಧಾನ್ಯವು ಅನೇಕ ಹಿಂದೂ ಧಾರ್ಮಿಕ ಕರ್ಮಗಳಲ್ಲಿ ವಿದಿತವಾಗುತ್ತದೆ. ಇಮ್ಮಡಿ

ದೇವರಾಯನ ಕಾಲದಲ್ಲಿ ನಾಯಿಂದರು ಸಮಾಜದ ಒಂದು ಪ್ರಧಾನ ಸಮುದಾಯವಾಗಿದ್ದರು; ಅವರ ವೃತ್ತಿಯು ತೆರಿಗೆಗೆ ಒಳಪಡುತ್ತಿತ್ತು. ತಂಜಾವೂರು ಜಿಲ್ಲೆಯ ತಿರುವೈಗಾವೂರಿನಲ್ಲಿರುವ, ಕ್ರಿ.ಶ. 1429ರ ತೇದಿಯ ದೇಗುಲ ಭಿತ್ತಿ ಶಾಸನವೊಂದು ಪ್ರತಿಯೊಬ್ಬ ನಾಯಿಂದನಿಗೆ 4 ಪಣಂಗಳ ತೆರಿಗೆಯ ದರವನ್ನು ನಿಗದಿಗೊಳಿಸಿದ ವಿಷಯವನ್ನು ಉಲ್ಲೇಖಿಸುತ್ತದೆ ಹಾಗೂ ಈ ಮೊತ್ತವು ಆತ ಬಳಸುವ ಕ್ಷೌರದಕತ್ತಿಯ ತೆರಿಗೆಯನ್ನೂ ಒಳಗೊಂಡಿತ್ತು. ಇಮ್ಮಡಿ ದೇವರಾಯನ ಆಳ್ವಿಕೆಯ ಒಂದು ಶತಮಾನದ ತರುವಾಯ ನಾಯಿಂದರು ರಾಜ ಕೃಪೆಗೆ ಪಾತ್ರರಾಗಿ ತೆರಿಗೆಗಳ ವಿನಾಯತಿ ರಿಯಾಯಿತಿ ಮತ್ತು ತೆರಿಗೆ ಮನ್ನಾಗಳಂಥ ಸವಲತ್ತುಗಳನ್ನು ಹೊಂದಿದಂತೆ ಕಾಣುತ್ತದೆ. ವೇಷಭೂಷಣ, ಇನಾಮು ಮತ್ತು ಭೂಮಿ ದಾನಗಳ ರೂಪದಲ್ಲಿ ಅವರಿಗೆ ಮಾಮೂಲಿನ ಬಹುಮಾನಗಳನ್ನು ಕರುಣಿಸಲಾಯಿತು.

**ಕುರುಂಬರು**:

ತಮಿಳು ಪ್ರದೇಶದಲ್ಲಿ ಕುರುಂಬರಂಥ ಕೆಲವು ಮೂಲನಿವಾಸಿ ಗಿರಿಜನ ಪಂಗಡಗಳಿದ್ದವು; ಕರ್ನಾಟಕ ಪ್ರದೇಶದಲ್ಲಿ ತತ್ಸಮಾನವಾದ ಕುರುಬ ಪಂಗಡವು ವಾಸಿಸುತ್ತಿತ್ತು. ಮಹಾಭಾರತ ಸಂಗ್ರಾಮದಲ್ಲಿ ಭಾಗವಹಿಸಿದ ಯಾದವರಿಂದ ತಾವು ಬಂದವರೆಂದು ಕುರುಂಬ ಅಥವಾ ಕುರುಬರು ಹೇಳಿಕೊಳ್ಳುತ್ತಾರೆ. ದಕ್ಷಿಣ ಭಾರತದ ಪಲ್ಲವ ದೊರೆಗಳೊಂದಿಗೂ ಅವರು ಸಂಬಂಧಿಸಿದವರೆಂದು ಕೂಡ ಊಹಿಸಿದುದುಂಟು[38]. ವಿಜಯನಗರ ಸಾಮ್ರಾಜ್ಯದ ಪಶ್ಚಿಮ ಮತ್ತು ದಕ್ಷಿಣ

ಭಾಗಗಳಲ್ಲಿ ಅವರು ಪ್ರಬಲರಾಗಿದ್ದರು. ಕುರುಂಬ ಮತ್ತು ಬೇಡರಂಥ ಕಾಡು ಪಂಗಡಗಳಿಗೆ ಸೇರಿದ ಬಂಡಾಯ ಆಧಿಪರನ್ನು ದಮನ ಮಾಡುವುದೇ ವಿಜಯನಗರದ ಅರಸರ ನೀತಿಯಾಗಿತ್ತು. ವಿಜಯನಗರದ ಅರಸು ಕುರುಂಬರೊಡನೆ ವ್ಯವಹರಿಸುವಾಗ 'ಸಕಲವರ್ಣಾಶ್ರಮಧರ್ಮ'ದ ನೀತಿಯನ್ನು ಪ್ರೋತ್ಸಾಹಿಸಲಿಲ್ಲ; ಏಕೆಂದರೆ ಅವರು ಸಮಾಜದ ಇತರ ವರ್ಗಗಳಿಗೆ ನೀಡಿದಷ್ಟೇ ಸ್ವಾತಂತ್ರ್ಯವನ್ನು ಕುರುಬರಿಗೆ ಕೊಡಲಿಲ್ಲ ಎಂದು ಸಾಲೆತೊರೆಯವರು ಅಭಿಪ್ರಾಯಪಡುತ್ತಾರೆ.

**ಕರ್ಣಂ ಮತ್ತು ಇತರ ಅಮುಖ್ಯ ಜಾತಿಗಳು:**

ತಮಿಳು ಪ್ರದೇಶದಲ್ಲಿ ವಾಣಿಯನ್ನರೆಂದು ಹಾಗೂ ಕನ್ನಡ ಮಾತನಾಡುವ ಪ್ರದೇಶದಲ್ಲಿ ಗಾಣಿಗರೆಂದು ಪರಿಚಿತರಾದ ಎಣ್ಣೆವ್ಯಾಪಾರಿಗಳೂ ವೃತ್ತಿಪರ ಜಾತಿಗಳಲ್ಲಿ ಸೇರಿದ್ದರು. ಹಾಗೆಯೇ ಉಪ್ಪಾರರೂ ಅಗಸರೂ ಇದ್ದರು. ಕರ್ಣಂ ಮತ್ತು ಮುದಲಿಯಾರರೂ ಗ್ರಾಮದಲ್ಲಿನ ಪ್ರಧಾನ ಸಮುದಾಯವಾಗಿದ್ದರು. ಕರ್ಣಂಗಳು ಸಾಂಪ್ರದಾಯಿಕ ಗ್ರಾಮಲೆಕ್ಕಿಗರಾಗಿದ್ದು, ಕರ್ನಾಟಕದಲ್ಲಿ ಶಾನುಭೋಗರು ಅವರ ಪಡಿರೂಪವಾಗಿದ್ದರು[39].

**ದೊಂಬರು:**

ದೊಂಬರು ರಾಜ್ಯದಲ್ಲಿದ್ದ ಗಾರುಡಿಗರು. ಅವರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆಯುವ ಜನಾಂಗದವರು. ದೊಂಬರು ಜನರಿಗೆ ತಮ್ಮ ದೊಂಬರಾಟದಿಂದ ರಂಜನೆಯನ್ನು ಒದಗಿಸುತ್ತಿದ್ದರೆನ್ನುವುದನ್ನು ಅಬ್ದುಲ್

ರಝೂಕ್ ಹಾಗೂ ಅನ್‌ಸ್ಕಾಟನ್ ಗಮನಿಸಿದ್ದಾರೆ. ಅವರು ದೇಶದುದ್ದಕ್ಕೂ ಸಂಚರಿಸುವ ಹಾವಾಡಿಗರಾಗಿದ್ದರು. ವಿಷಗಳ ತಯಾರಿಕೆಯಲ್ಲಿ ಅವರು ತುಂಬಾ ಪರಿಣತರಾಗಿದ್ದರೆಂದು ಅನ್‌ಸ್ಕಾಟನ್ ತಿಳಿಸುತ್ತಾನೆ. ಹುಲ್ಲುಹೊದಿಸಿದ ಅವರ ಪುಟ್ಟ ಮತ್ತು ತಗ್ಗಾದ ಮನೆಗಳು ಕಿಟಕಿಗಳನ್ನು ಹೊಂದಿದರಲಿಲ್ಲ ಹಾಗೂ ತಗ್ಗಾದ ಮತ್ತು ಕಿರಿದಾದ ಬಾಗಿಲುಗಳಿಂದ ಕೂಡಿದ್ದವು. ಮಹಾನವಮಿ ಉತ್ಸವಕ್ಕೆ ರಾಜಧಾನಿಯಲ್ಲಿ ನೆರೆದ ಗಣ್ಯರು ಮತ್ತು ಜನಸಾಮಾನ್ಯರಿಗೆ ದೊಂಬರು ತುಂಬು ರಂಜನೆಯನ್ನು ನೀಡುತ್ತಿದ್ದರು. ತಾವು ಗ್ರಾಮಗಳಲ್ಲಿ ತಮ್ಮ ಆಟವನ್ನು ಪ್ರದರ್ಶಿಸುವುದಾಗಿ ಕ್ರಿ.ಶ. 1532ರಲ್ಲಿ ದೊಂಬರು ಒಪ್ಪಂದವೊಂದನ್ನು ಮಾಡಿಕೊಂಡರು. ದೊಂಬರ ಪ್ರಯೋಜನಕ್ಕಾಗಿ 'ದೊಂಬರಿಪನ್ನು' ಎಂಬ ಕಾಣಿಕೆಯೊಂದನ್ನು ಆಗಾಗ ಸರಕಾರವು ಸಂಗ್ರಹಿಸುತ್ತಿದ್ದುದುಂಟು.

**ತಿಟ್ಟಿಯನರು ಮತ್ತು ಸೌರಾಷ್ಟ್ರೀಯರು:**

ತಿಟ್ಟಿಯನರು ಮತ್ತು ಸೌರಾಷ್ಟ್ರೀಯರಂಥ ಕೆಲವು ಸಮುದಾಯಗಳು ಪರ್ಯಾಯ ದ್ವಿಪದಲ್ಲಿ ವಸಾಹತು ಸ್ಥಾಪಿಸಿದ್ದರು ಹಾಗೂ ದಕ್ಷಿಣದಲ್ಲಿ ವ್ಯಾಪಿಸಿದ್ದರು. ತಿಟ್ಟಿಯನರನ್ನು ಕಂಬಲತ್ತಾರ್ ಎಂಬ ಶಬ್ದದಿಂದಲೂ ಕರೆಯಲಾಗುತ್ತಿತ್ತು. ಅವರ ಆಶ್ರಯ ದೇವತೆಗಳೆಂದರೆ ಜಕ್ಕಣ ಹಾಗೂ 'ಸತಿ' ಆಚರಿಸಿದ ಬೊಮ್ಮಕ್ಕ. ಸೌರಾಷ್ಟ್ರೀಯರು ವಿಶೇಷವಾಗಿ ರೇಷ್ಮೆಯ ನೇಕಾರರಾಗಿದ್ದರು ಹಾಗೂ ಅವರು ವಿಜಯನಗರ ಸಾಮ್ರಾಜ್ಯದಲ್ಲಿ ಬಟ್ಟೆ ವ್ಯಾಪಾರದಲ್ಲಿ ನಿರತರಾಗಿದ್ದರು. ಅವರಲ್ಲಿ ಕೆಲವರು ದಕ್ಷಿಣದಲ್ಲಿ ಮಧುರೆ ಮತ್ತು ತಿರುಚಿನಾಪಳ್ಳಿಗಳಂಥ ಊರುಗಳಲ್ಲಿ

ನೆಲಸಿದರು ಮತ್ತು ತಮ್ಮ ಉದ್ಯಮದ ಚಟುವಟಿಕೆಯಿಂದಾಗಿ ಅವರು ಸಿರಿವಂತರಾಗಿದ್ದರು. ಮಹಾಲಿಂಗಂ ಅವರ ಪ್ರಕಾರ "ಅವರು ಬ್ರಾಹ್ಮಣ ಜಾತಿ ಹೆಸರುಗಳನ್ನು ಧರಿಸಿದ್ದರು ಹಾಗೂ ತಾವು ಮೂಲತಃ ಬ್ರಾಹ್ಮಣರೆಂದೂ ಆದರೆ ಆನಂತರ ಕಾಲದಲ್ಲಿ ತಮ್ಮ ಸ್ಥಾನಮಾನವನ್ನು ಕಳೆದುಕೊಂಡು ಅವನತಿ ಹೊಂದಿದವರೆಂಬ ಕೆಲವು ದಂತಕತೆಗಳನ್ನು ಅವರು ಹರಡಿದರು"[40].

**ಜೋಗಿಗಳು**:

ಬಾರ್ಬೋಸ ಮತ್ತು ಪೇಯಿಸ್ ತಾವು ವಿಜಯನಗರಕ್ಕೆ ಭೇಟಿ ನೀಡಿದ ಸಮಯದಲ್ಲಿ ಕಂಡ ಜೋಗಿಗಳ ಬಗ್ಗೆ ಕೆಲವು ವಿವರಗಳನ್ನು ನೀಡಿದ್ದಾರೆ. ಹಿಂದೂಗಳು "ಮುಸಲ್ಮಾನರ ಅಧಿಕಾರದೊಳಗೆ ಇರಲು ಇಷ್ಟಪಡದೆ ಆ ನಾಡಿನಿಂದ ಮುಂದೆ ಹೋಗುತ್ತಿದ್ದರು ಹಾಗೂ ಇಡೀ ಪ್ರಪಂಚದಲ್ಲಿ ಸಾಗಿಹೋಗುತ್ತ ಯಾವುದೇ ಸ್ಥಳದಲ್ಲಿಯೂ ತಂಗದಿರಲು ಸಂಕಲ್ಪಿಸಿ ಅಲ್ಪ ಉಡಿಗೆತೊಡಿಗೆಗಳನ್ನು ಧರಿಸುತ್ತಿದ್ದರು; ಅವರು ತಮ್ಮ ಯಾತ್ರೆಯಲ್ಲಿ ಸಾಯುತನಕ ಹೀಗೆ ಮಾಡುವುದನ್ನು ಮುಂದುವರಿಸುತ್ತಿದ್ದರು" ಎಂದು ಬಾರ್ಬೋಸ ಹೇಳುತ್ತಾನೆ.

ಜೋಗಿಗಳು 'ದಾರ್ಚ' (ಧಾರವಾಡ) ನಗರದ ಪ್ರವೇಶದ್ವಾರಗಳಲ್ಲಿ ಪುಟ್ಟ ಹಾಗೂ ತಗ್ಗಾದ ಮೊಗಸಾಲೆಗಳಲ್ಲಿ ಕುಳಿತುಕೊಂಡಿರುತ್ತಿದ್ದದನ್ನು ಪೇಯಿಸ್ ಗಮನಿಸಿದ್ದನು. ವಿಜಯನಗರದ ದ್ವಾರಗಳು ಮತ್ತು ಪಶುಬಲಿಗಳನ್ನು ಕುರಿತು ವಿವರಿಸುತ್ತ ಪೇಯಿಸ್ "ಈ ಪಶುಬಲಿಯ ಸಮಯಕ್ಕೆ ಅಲ್ಲೊಬ್ಬ ಆ ದೇವಾಲಯದ ಮೇಲ್ವಿಚಾರಣೆಯಲ್ಲಿರುವ ಜೋಗಿ ಉಪಸ್ಥಿತನಿದ್ದು ಕುರಿ ಅಥವಾ ಆಡಿನ ತಲೆ ಕಡಿದ

ಸಲಕ್ಕೊಮ್ಮೆ ಮೂರ್ತಿ ಆ ಬಲಿಯನ್ನು ಸ್ವೀಕರಿಸುವುದರ ಸಂಕೇತವಾಗಿ ಕೊಂಬು ಊದುತ್ತಾನೆ"[41].

ಈ ಆಲೆಮಾರಿ ಜನರ ಬಗ್ಗೆ ಬಾರ್ಬೋಸ್ ಇನ್ನೂ ಕೆಲವು ವಿವರಗಳನ್ನು ನೀಡುತ್ತಾನೆ. ಆತ ಹೀಗೆ ತಿಳಿಸುತ್ತಾನೆ; "ಈ ಜನರು ತಮ್ಮದೇ ಆದದ್ದೇನನ್ನೂ ಹೊಂದಿರುವುದಿಲ್ಲ; ಏಕೆಂದರೆ ತಾವು ಒಮ್ಮೆ ಹೊಂದಿದ್ದ ಆಸ್ತಿಪಾಸ್ತಿಯನ್ನೆಲ್ಲ ಕಳೆದಕೊಂಡುಬಿಟ್ಟಿದ್ದಾರೆ; ಅವರು ಬರಿಮೈಯಲ್ಲಿ ಮತ್ತು ಬರಿಗಾಲಲ್ಲಿ ಹೋಗುತ್ತಾರೆ, ತಲೆಯ ಮೇಲೆ ಏನನ್ನೂ ಧರಿಸಿರುವುದಿಲ್ಲ ಹಾಗೂ ಹಿತ್ತಾಳೆ ಪಟ್ಟಿಗಳಿಂದಷ್ಟೇ ತಮ್ಮ ಮಾನವನ್ನು ಅವರು ಮುಚ್ಚಿ ಕೊಳ್ಳುತ್ತಾರೆ; ಅದರ ಮೇಲೆ ಹಲವು ನಾಣ್ಯಗಳಿಂದ ಕೂಡಿದ ನಡುಪಟ್ಟಿಗಳು ಇಳಿಬಿದ್ದಿದ್ದು ಅವು ಎರಡು ಕಡೆಗೂ ಓಲಾಡುತ್ತಿರುತ್ತವೆ; ಇವು ನಾಲ್ಕು ಬೆರಳಿನ ಅಗಲದವು, ಮರ್ತುಲ ಸ್ತಂಭಾಕೃತಿಯವು; ಅವುಗಳ ಮೇಲೆ ಅನೇಕ ಆಕೃತಿಗಳಿರುತ್ತವೆ. ಇವನ್ನು ಅವರು ಎಷ್ಟು ಬಿಗಿಯಾಗಿ ಕಟ್ಟಿರುತ್ತಾರೆಂದರೆ ಅವು ಅವರ ಹೊಟ್ಟೆಗಳನ್ನು ಹೊರಚಾಚಿಕೊಂಡಿರುವಂತೆ ಮಾಡಿರುತ್ತವೆ. ಇದಲ್ಲದೆ ಅವರು ತಮ್ಮ ಕೊರಳ ಮತ್ತು ಸೊಂಟಗಳ ಮೇಲೆ ಭಾರವಾದ ಕಬ್ಬಿಣದ ಸರಪಳಿಗಳನ್ನು ಹೊತ್ತಿರುತ್ತಾರೆ. ಅವರ ದೇಹ ಮತ್ತು ಮುಖಗಳು ಬೂದಿಯಿಂದ ಲೇಪಿತವಾಗಿರುತ್ತವೆ. ಚಿಕ್ಕ ಕೊಂಬು ಅಥವಾ ಕಹಳೆಯೊಂದನ್ನು ಅವರು ಒಯ್ಯುತ್ತಿದ್ದು, ವಿಶೇಷವಾಗಿ ದೇವಾಲಯಗಳಲ್ಲಿ ಅರಸ ಅಥವಾ ಮಹಾಪ್ರಭುಗಳ ಭವನಗಳಲ್ಲಿ ಅದನ್ನು ಊದಿ, ಕೂಗಿ ಆಹಾರಭಿಕ್ಷೆ ಬೇಡುತ್ತಾರೆ. ಅವರು ನಮ್ಮ ಕಾಲದ ಈಜಿಪ್ತಿನ ಜನರಂತೆ ಗುಂಪುಗುಂಪಾಗಿ ಹೋಗುತ್ತಾರೆ. ಒಂದು ಸ್ಥಳದಲ್ಲಿ

ಹೆಚ್ಚು ಕಾಲ ನಿಂತಿರಬೇಕಾದ ಕಟ್ಟುಪಾಡೇನೂ ಅವರಿಗಿಲ್ಲ; ಕೆಲವು ದಿನಗಳು ಮಾತ್ರ ಇರುವ ಪರಿಪಾಠವಿದೆ".

**ಪರಯ ಮತ್ತು ಹೊಲೆಯರು:**

ವಿಜಯನಗರ ಸಾಮ್ರಾಜ್ಯದಲ್ಲಿ ಅತ್ಯಂತ ಕಳಸ್ತರದ ವರ್ಗಗಳೆಂದರೆ ತಮಿಳುದೇಶದ ಪರಯರು ಹಾಗೂ ಕರ್ನಾಟಕಪ್ರದೇಶದ ಹೊಲೆಯರು. ಹೊಲೆಯ ಎಂಬ ಶಬ್ದ 'ಹೊಲ'ದಿಂದ ಉತ್ಪತ್ತಿ ಹೊಂದಿದ್ದು, ಹೊಲೆಯನೆಂದರೆ ಹೊಲದ ಕೆಲಸಗಾರನೆಂದರ್ಥ. ಈ ಜಾತಿಯ ಸದಸ್ಯರು ಸಾಮಾನ್ಯವಾಗಿ ದಾಸ ವೃತ್ತಿಯಲ್ಲಿ ನಿರತರಾಗಿದ್ದರು; ಕೆಲವರು ಗ್ರಾಮಾಡಳಿತದ ಆಯಗಾರ ವ್ಯವಸ್ಥೆಯಲ್ಲಿ ತೋಟಿ ಮತ್ತು ತಳಾರರಾಗಿ ಸೇವೆ ಸಲ್ಲಿಸಿದರು. ಅವರು ಕೆಳಮಟ್ಟದ ಗ್ರಾಮಸೇವಕರಾಗಿದ್ದರು. ಶಾಂತಿರಕ್ಷಣೆಯ ಉದ್ದೇಶಗಳಿಗೆ ತಳಾರಿಯನ್ನು ನೇಮಕಮಾಡಿಕೊಳ್ಳಲಾಗುತ್ತಿತ್ತು[42]. ಆತನನ್ನು ತಳವಾರ, ಕಾಪು ಅಥವಾ ಕಾವಲ್ ಎಂದೂ ಕರೆಯಲಾಗುತ್ತಿತ್ತು. ಕ್ರಿ.ಶ. 1369ರಲ್ಲಿ ಪೂಲ್ಲಿಯೂರು ನಾಡಿನ ತೋಟ್ಟಿಯಂ ಜಾತಿಯ ಜನರು ಪ್ರತಿ ಗ್ರಾಮಕ್ಕೂ ಒಂದು ಪಣವನ್ನು ತೆರಿಗೆಯಾಗಿ ಸಲ್ಲಿಸಬೇಕಾಗಿತ್ತು.

**ಜಾತಿಗಳ ಬಲಗೈ ಮತ್ತು ಎಡಗೈ ವಿಭಾಗಗಳು:**

ವಿಜಯನಗರ ಸಾಮ್ರಾಜ್ಯದಲ್ಲಿ ಜಾತಿಗಳು ಬಲಗೈ ಮತ್ತು ಎಡಗೈ ಎಂದು ಕರೆಯಲಾದ ಎರಡು ವಿಭಾಗಗಳಾಗಿ ವಿಭಜಿತವಾಗಿದ್ದವು. ತಮಿಳು ದೇಶದಲ್ಲಿ ಈ

ವಿಭಾಗಗಳು 'ವಲಂಗೈ' ಮತ್ತು 'ಇಡಂಗೈ' ಎಂದು ಪರಿಚಿತವಾಗಿದ್ದರೆ ಕರ್ನಾಟಕದಲ್ಲಿ ಕ್ರಮವಾಗಿ 'ಬಲಗೈ' ಮತ್ತು 'ಎಡಗೈ' ಎಂದು ಪರಿಚಿತವಾಗಿದ್ದವು. ಕ್ರಿ.ಶ. 11ನೆಯ ಶತಮಾನದಿಂದಲೇ ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ದೊರೆತ ಶಿಲಾಶಾಸನಗಳಲ್ಲಿ ಈ ಜಾತಿಸಮುದಾಯಗಳಿಗೆ ಸಂಬಂಧಿಸಿದ ಉಲ್ಲೇಖಗಳಿವೆ. ಪ್ರತಿ ಗುಂಪೂ ತೊಂಬತ್ತೆಂಟು ಒಳ ಜಾತಿಗಳಿಂದ ಕೂಡಿದ್ದವೆಂದು ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಈ ತೊಂಬತ್ತೆಂಟು ಒಳ ಜಾತಿಗಳು ಯಾವುವೆಂಬುದು ಖಚಿತವಾಗಿ ನಮಗೆ ತಿಳಿಯದು. ಆದರೂ ಇವು ಹದಿನೆಂಟು ವೃತ್ತಿಪರ ಜಾತಿಗುಂಪುಗಳಿಗೆ ಸಂಬಂಧಿಸಿದ ಉಲ್ಲೇಖಗಳು. "ಆ ಹದಿನೆಂಟು ಜಾತಿಗಳ ಒಳಪಂಗಡಗಳೇ ಪ್ರಾಯಶಃ ತೊಂಬತ್ತೆಂಟು ಒಳಜಾತಿಗಳಿರಬೇಕು" ಎಂದು ಮಹಾಲಿಂಗಂ ಹೇಳುತ್ತಾರೆ.

ವಿಜಯನಗರದ ಸಾಮ್ರಾಜ್ಯದ ಸಾಮಾಜಿಕ ಜೀವನದಲ್ಲಿ ಈ ಜಾತಿಗುಂಪುಗಳು ಪ್ರಾಬಲ್ಯ ಹೊಂದಿದ್ದವು. ಈ ಎರಡು ಗುಂಪುಗಳಾಗಿ ಮಾಡಿದ ಜಾತಿಗಳ ವಿಂಗಡಣೆಯ ಉಗಮದ ಬಗ್ಗೆ ಅನೇಕ ಕಥನಗಳಿವೆ. ಸಾಮಾನ್ಯವಾಗಿ ಎಲ್ಲ ಬ್ರಾಹ್ಮಣರು, ಕ್ಷತ್ರಿಯರು ಮತ್ತು ಇತರ ಕೆಲವರನ್ನು ತಟಸ್ಥರೆಂದು ಪರಿಗಣಿಸಲಾಗುತ್ತದೆ. ಹಾಗಿದ್ದರೂ ಬಲಗೈ ಎಂದು ಕರೆಯಲಾದ ವೈಷ್ಣವ ಬ್ರಾಹ್ಮಣರು ಮತ್ತು ಅವರ ಅನುಯಾಯಿಗಳು ಹಾಗೂ ಎಡಗೈ ಎಂದು ಕರೆಯಲಾದ ಶೈವ ಬ್ರಾಹ್ಮಣರು ಮತ್ತು ಅವರ ಅನುಯಾಯಿಗಳ ನಡುವಣ ವಿವಾದವೊಂದು 'ಇಡಂಕೈ ವಲಂಕೈ ಕೈಫಿಯಾತ್'ನಲ್ಲಿ ದಾಖಲಾಗಿರುವುದನ್ನು ನಾವು ನೋಡುತ್ತೇವೆ[43].

ವಲಂಗೈಯರ್ ಅಥವಾ ಬಲಗೈ ಜಾತಿಗಳು ಎಲ್ಲ ಕೃಷಿಕ ಪಂಗಡಗಳನ್ನು ಒಳಗೊಂಡಿದ್ದವು. ಇಡಂಗೈಯರ್ ಅಥವಾ ಎಡಗೈ ಜಾತಿಗಳ ಮುಖ್ಯವಾಗಿ ವ್ಯಾಪಾರಿ ಮತ್ತು ಕೈಗಾರಿಕೆಯ ಪಂಗಡಗಳನ್ನು ಒಳಗೊಂಡಿದ್ದವು. ಅತ್ಯಂತ ಕೆಳಗಿನ ಜಾತಿಗಳೂ ಅತ್ಯುನ್ನತ ಜಾತಿಗಳೊಂದಿಗೆ ಸೇರಿಸಿರುವ ರೀತಿಯಿಂದ ಪ್ರಾಚೀನ ವರ್ಣಾಶ್ರಮಕ್ಕೆ ಒಂದು ಸವಾಲಿನ ತೆರದಲ್ಲಿ – ಕೊನೆಯಪಕ್ಷ ಸಣ್ಣಪುಟ್ಟ ಸಾಮಾಜಿಕ ಸವಲತ್ತುಗಳು ಸಂಬಂಧಪಟ್ಟಂತೆ – ಬಲಗೈ ಮತ್ತು ಎಡಗೈ ಗುಂಪುಗಳಾಗಿ ಜನರ ವಿಂಗಡಣೆಯು ನಡೆದಿರುವಂತೆ ತೋರುತ್ತದೆ ಕೆಲವೊಮ್ಮೆ ಇವೆರಡೂ ಜಾತಿ ವಿಭಾಗಗಳು ಸಾಮಾಜಿಕ ಮತ್ತು ಆರ್ಥಿಕ ಅನ್ಯಾಯದ ವಿರುದ್ಧ ಹೋರಾಡಲು ಒಂದುಗೂಡಿದವು. ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಆರ್ಕಾಟಿನ ಜನರು ಅರಸನ ಕಂದಾಯ ವಸೂಲಿಗಾರರ ಕೈಯಲ್ಲಿ ಎಷ್ಟು ನರಳಿದ್ದರೆಂದರೆ ಕ್ರಿ.ಶ. 1429ರಲ್ಲಿ ಪರಸ್ಪರ ವಿರೋಧಿಗಳಾದ ವಲಂಗೈ ಮತ್ತು ಎಡಂಗೈ ಜಾತಿಗಳ ನಡುವೆ ಒಪ್ಪಂದವೊಂದು ಏರ್ಪಟ್ಟು, ಇವೆರಡೂ ಜಾತಿ ಸಂಘಗಳು ತಮ್ಮ ಸಮುದಾಯದ ಯಾರಾದರೂ ಕಂದಾಯ ವಸೂಲಿಗಾರನಿಗೆ ನೆರವಾದಲ್ಲಿ ಆತನನ್ನು ದಂಡಿಸಬೇಕೆಂದು ತೀರ್ಮಾನಿಸಿಕೊಂಡವು. ಈ ಜಾತಿ ಗುಂಪುಗಳ ಸದಸ್ಯರು ತಾವು ಸಲ್ಲಿಸಿದ ಸೇವೆಗಾಗಿ ದಾನದತ್ತಿಗಳನ್ನು ಪಡೆದರು. ಕ್ರಿ.ಶ. 1435ರ ತೇದಿಯ ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದ ಶಾಸನವೊಂದು ದೇವಿಯ ಗುಡಿಯಲ್ಲಿ ಅರ್ಪಸಿ ಮಾಸದಲ್ಲಿ ನಡೆಯುವ ತಿರುಪ್ಪೂರಂ ಉತ್ಸವದ ಸಂದರ್ಭದಲ್ಲಿ 'ಇಡಂಗೈ' ಜಾತಿಯವರು ಕಹಳೆಯೂದುವ

ವೆಚ್ಚ ಭರಿಸುವುದಕ್ಕಾಗಿ ಸೆಂಗತ್ತು ಕೋಟ್ಟಂನ ತಿರುಮಂಗಲಂ ಗ್ರಾಮವನ್ನು ಸರ್ವಮಾನ್ಯವಾಗಿ ದಾನವಿತ್ತ ವಿಷಯವನ್ನು ನಿರೂಪಿಸುತ್ತದೆ[44].

ಕೊನೆಯದಾಗಿ ಸಂಗಮರ ಕಾಲದ ಸಮಾಜವು ಪ್ರಾಚೀನ ಧರ್ಮ ಶಾಸ್ತ್ರಕಾರರು ರೂಪಿಸಿದ ವರ್ಣಾಶ್ರಮಧರ್ಮವನ್ನು ಆಧರಿಸಿದುದಾಗಿತ್ತೆಂದು ಹೇಳಬಹುದು. ನಾಲ್ಕು ವರ್ಣಗಳಲ್ಲದೆ ಸಮಾಜದಲ್ಲಿ ವೃತ್ತಿಯಾಧಾರಿತವಾದ ಅನೇಕ ಉಪಜಾತಿಗಳು ಹುಟ್ಟಿದ್ದು, ಪ್ರತಿಯೊಂದು ವೃತ್ತಿಯೂ ತನ್ನದೇ ಆದ ಸಂಘವನ್ನು ಹೊಂದಿತ್ತು. ಪ್ರಮುಖ ಜಾತಿಗಳೆಂದರೆ ಬ್ರಾಹ್ಮಣ, ಸೆಟ್ಟಿ, ವೀರಪಾಂಚಾಳ, ಕೈಕ್ಕೂಲರ್, ರೆಡ್ಡಿ, ವೊಕ್ಕಲಿಗ, ನಾಯಿಂದ, ಕುರುಂಬ ಅಥವಾ ಕುರುಬ, ಕರಣಂ, ದೊಂಬ, ತಿಟ್ಟೆಯನ್, ಸೌರಾಷ್ಟ್ರೀಯ, ಜೋಗಿ ಹಾಗೂ ಇತರ ಕಿರಿಯ ಜಾತಿಗಳು. ಜಾತಿಗಳು ಸಾಮಾನ್ಯವಾಗಿ ಬಲಗೈ ಮತ್ತು ಎಡಗೈ ಪಂಗಡಗಳೆಂದು ವಿಂಗಡಿತವಾಗಿತ್ತು ಹಾಗೂ ಈ ಪಂಗಡಗಳ ನಡುವೆ ಸಾಮಾಜಿಕ ಹಕ್ಕುಗಳಿಗಾಗಿ ಹೋರಾಟ ಹೊಡೆದಾಟಗಳು ಸಾಮಾನ್ಯವಾಗಿದ್ದವು. ಹಾಗಿದ್ದರೂ ಅವರು ಸಮುದಾಯದ ಸಾಮಾನ್ಯ ಕಾರಣಕ್ಕಾಗಿ ಒಂದುಗೂಡುತ್ತಿದ್ದರು; ತಮ್ಮನ್ನು ಪೀಡಿಸುತ್ತಿದ್ದ ತೆರಿಗೆ ವಸೂಲಿಗಾರರನ್ನು ಅವರು ಜಂಟಿಯಾಗಿ ವಿರೋಧಿಸಿದರೆಂಬ ಸಂಗತಿಯಿಂದ ಇದ್ದು ಸೂಚಿತವಾಗುತ್ತದೆ. ಬಲಗೈ ಮತ್ತು ಎಡಗೈ ಪಂಗಡಗಳು ಕ್ರಿ.ಶ. 1429ರಲ್ಲಿ ಜಂಟಿಯಾಗಿ ಠರಾವೊಂದನ್ನು ಮಂಡಿಸಿ ಸ್ವೀಕರಿಸಿ ತಮ್ಮ ಪಂಗಡಗಳಿಗೆ ಸೇರಿದ ಯಾವುದೇ ವ್ಯಕ್ತಿಯು ತೆರಿಗೆ ವಸೂಲಿಗಾರರಿಗೆ ನೆರವಾದಲ್ಲಿ ಅವನನ್ನು ಕೊಂದುಹಾಕಬೇಕೆಂದು ನಿರ್ಧರಿಸಿತು. ಇಮ್ಮಡಿ ದೇವರಾಯನ ಆಳ್ವಿಕೆಯ ಒಂದು ಹೊಸ ಲಕ್ಷಣವೆಂದರೆ ವಿಜಯನಗರದ ಧಾರ್ಮಿಕ ಮತ್ತು

ವಾಣಿಜ್ಯ ಜೀವನದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ ವೀರಶೈವ (ಲಿಂಗಾಯತ್) ಹಾಗೂ ಕ್ರೈಸ್ತರ ಪ್ರಾಬಲ್ಯ. ರಾಜಧಾನಿಯಲ್ಲಿ ನೆಲೆನಿಲ್ಲಲು ಮತ್ತು ಸೈನ್ಯವನ್ನು ಸೇರಲು ಮುಸ್ಲಿಂರಿಗೂ ಇಮ್ಮಡಿ ದೇವರಾಯನು ಉತ್ತೇಜನ ನೀಡಿದ[45].

**ಜನರ ರೀತಿ ನೀತಿ ಮತ್ತು ಪದ್ಧತಿಗಳು:**

**ಸ್ತ್ರೀಯರು ಹಾಗೂ ಅವರ ಸಾಮಾಜಿಕ ಸ್ಥಾನಮಾನ:**

ವೈದಿಕಕಾಲದಿಂದಲೂ ಹಿಂದೂ ಸಮಾಜದಲ್ಲಿ ಸ್ತ್ರೀಯರಿಗೆ ಗೌರವಾನ್ವಿತ ಸ್ಥಾನವಿತ್ತು. ಅವರ ಸ್ಥಾನವು ಮುಖ್ಯವಾಗಿ ಗೃಹಕೃತ್ಯಗಳಿಗೆ ಸೀಮಿತವಾಗುವಂತೆ ಇದ್ದರೂ ಸಾಮಾಜಿಕ ಜೀವನದಲ್ಲಿ ಅವರಿಗೆ ಗೌರವಾರ್ಹವಲ್ಲದ ಸ್ಥಾನವೇನೂ ಇರಲಿಲ್ಲ. ಮಧ್ಯಯುಗದಲ್ಲಿ ಹಿಂದೂ ಸಮಾಜವು ಬಹಳಷ್ಟು ಬದಲಾಯಿಸಿತು. ಸಾಂಪ್ರದಾಯಿಕ ರೀತಿಯ ಜೀವನದ ಕಟ್ಟುಪಾಡುಗಳಿಗೆ ಒಳಪಟ್ಟಿದ್ದರೂ ಸ್ತ್ರೀಯರು ಕೆಲವು ಸೌಲಭ್ಯಸವಲತ್ತುಗಳನ್ನು ಪಡೆದಿದ್ದರು. ಪ್ರಾಚೀನ ಮತ್ತು ಮಧ್ಯಯುಗೀನ ಬರಹಗಾರರ ನ್ಯಾಯಸೂತ್ರಗಳಲ್ಲಿ ರಾಜಸೇವೆ, ಉದ್ಯಮ ಹಾಗೂ ಕೃಷಿಗಳಲ್ಲಿ ಮನೋರಂಜನೆ ನೀಡುವ ಸ್ತ್ರೀಯರಿಗೆ ಅವಕಾಶ ನೀಡಿದೆ. ಬಿಟ್ಟಿದೇವನೆಂದೂ ಪರಿಚಿತನಾದ ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಆತನ ರಾಣಿಯಾದ ಶಾಂತಲೆಯು ಆ ಕಾಲದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಜೀವನದಲ್ಲಿ ಅನೇಕ ಸವಲತ್ತುಗಳನ್ನು ಅನುಭವಿಸಿದಂತೆ ತೋರುತ್ತದೆ. ರಾಜಾಸ್ಥಾನಗಳಲ್ಲಿ ಸ್ತ್ರೀಯರ ಸ್ಥಾನಮಾನ ಪ್ರಾಚೀನ ಕಾಲದಿಂದಲೂ ಬದಲಾದಂತೆ ಕಾಣುವುದಿಲ್ಲ ಮತ್ತು ದಕ್ಷಿಣ ಭಾರತದ ರಾಜರ ಆಸ್ಥಾನಗಳು ಸ್ತ್ರೀಯರನ್ನು

ಸಾಂಪ್ರದಾಯಿಕ ರೀತಿಯಲ್ಲಿ ನಡೆಸಿಕೊಂಡುಬಂದವು; ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಕಾಲು ಶತಮಾನ ಮೊದಲು ಕ್ರಿ.ಶ. 1310ರಲ್ಲಿದ್ದ ಪಾಂಡ್ಯ ರಾಜ್ಯದ ಆಸ್ಥಾನವನ್ನು ವಾಸಫ್ ಹೀಗೆ ವಿವರಿಸಿದ್ದಾನೆ "ದೇಶದ ದೈನಂದಿನ ಆಡಳಿತ ವ್ಯವಹಾರಗಳು ಮುಕ್ತಾಯವಾದಾಗ ಹಾಗೂ ಆಸ್ಥಾನದಲ್ಲಿ ಹಾಜರಿದ್ದ ಮಂದಿ ತಮ್ಮ ಮನೆ ಮಠಗಳಿಗೆ ಹಿಂದಿರುಗಿ ಹೋದ ಮೇಲೆ ಅರಸನ ಸುಖೋಪಭೋಗಗಳಲ್ಲಿ ಒಂದು ಸಾವಿರ ಸುಂದರ ವಾರಂಗನೆಯರು ತೊಡಗುತ್ತಿದ್ದುದು ಆ ದೇಶದ ಅರಸರಲ್ಲಿ ವಾಡಿಕೆಯಾಗಿದ್ದಿತು. ಅವರಲ್ಲಿ ಪ್ರತಿಯೊಬ್ಬರಿಗೂ ನಿಗದಿತವಾಗಿದ್ದ ಅನೇಕ ಕರ್ತವ್ಯಗಳನ್ನು ಅವರು ಪಾಲಿಸುತ್ತಿದ್ದರು; ಕೆಲವರು ಅರಮನೆ ವಾರ್ತೆಗಾರರಾಗಿ, ಕೆಲವರು ವಿವರಣಕಾರರಾಗಿ, ಮತ್ತೆ ಕೆಲವರು ಮಧುಪಾತ್ರೆಧಾರಕವಾಗಿ ನೇಮಕಗೊಂಡಿದ್ದರು..." ಇದೇ ಪದ್ಧತಿಯನ್ನು ವಿಜಯನಗರದ ಆಸ್ಥಾನದಲ್ಲಿ ಸಹ ನಾವು ಕಾಣುತ್ತೇವೆ. ಗೃಹಜೀವನಕ್ಕಷ್ಟೇ ಸ್ತ್ರೀಯರ ಸ್ಥಾನಮಾನ ಸೀಮಿತವಾಗಿರಲಿಲ್ಲ. ಅರಮನೆಯ ಸೇವೆಸಲ್ಲಿಸುವುದನ್ನು ಗೌರವಾರ್ಹವೆಂದು ಪರಿಗಣಿಸಲಾಗಿತ್ತು ಹಾಗೂ ಅಂಥ ಸೇವೆಗಾಗಿ ಕೂಡ ಬಯಸಲಾಗುತ್ತಿತ್ತು. ವಾಸ್ತವವಾಗಿ ಸ್ತ್ರೀಯರಿಗೆ ಒಗ್ಗಿಹೋದ ಕೆಲಸಗಳಲ್ಲೊಂದು ಎಂದರೆ ಅರಮನೆಯ ಸೇವೆ[46].

ವಿಜಯನಗರದ ಸಂಗಮ ವಂಶದ ಸಾಮ್ರಾಟರು ಪ್ರಾಚೀನ ಸಂಪ್ರದಾಯಗಳ ಅನುಯಾಯಿಗಳಾಗಿದ್ದರು. ಬೇರೆ ಬೇರೆ ಆಳ್ವಿಕೆಗಳಲ್ಲಿ ಬಂದ ವಿದೇಶೀ ಸಂದರ್ಶಕರು ವಿವರಿಸಿರುವಂತೆ, ಆಸ್ಥಾನದಲ್ಲಿ ಸ್ತ್ರೀಯರು ವಹಿಸಿದ ಪಾತ್ರಕ್ಕೆ ಸಂಬಂಧಿಸಿದಂತೆ ದೇವರಾಯನ ಆಸ್ಥಾನವೂ ಹಿಂದಿನಂತೆಯೇ ಇದ್ದಿರಬೇಕು. ಅರಮನೆಯ ದ್ವಾರಗಳೊಳಗೆ ಇರುವ ಸ್ತ್ರೀಯರು ಒಳಗಿನ ಎಲ್ಲ

ಕಾರ್ಯಗಳನ್ನು ಮಾಡುತ್ತಿದ್ದರು ಮತ್ತು ಗೃಹಕೃತ್ಯದ ಎಲ್ಲ ಕೆಲಸಗಳನ್ನು ನಡೆಸುತ್ತಿದ್ದರು. ಅರಮನೆಗಳ ಒಳಭಾಗದಲ್ಲಿ ಅವರೆಲ್ಲ ಸೇರುತ್ತಿದ್ದರು; ಅಲ್ಲಿ ಅವರಿಗೆ ಬೇಕಾದುದೆಲ್ಲವನ್ನು ಹೇರಳವಗಿ ಹೊಂದುತ್ತಿದ್ದರು ಹಾಗೂ ಅನೇಕ ಒಳ್ಳೆಯ ವಸತಿಗಳನ್ನು ಹೊಂದುತ್ತಿದ್ದರು" ಎಂದು ಬಾರ್ಬೋಸ್ ಹೇಳುತ್ತಾನೆ.. ಅರಸನ ಸೇವೆಯಲ್ಲಿ 12,000 ಸ್ತ್ರೀಯರು ಇದ್ದರೆಂದು ಪೇಯಿಸ್ ತಿಳಿಸಿದರೆ ಅಲ್ಲಿ 4,000 ಸ್ತ್ರೀಯರಿದ್ದು ಅವರೆಲ್ಲರೂ ಅರಮನೆಯಲ್ಲಿ ವಾಸಿಸುತ್ತಿದ್ದರೆಂದು ನ್ಯೂನಿಜ್ ಉಲ್ಲೇಖಿಸುತ್ತಾನೆ ಅರಮನೆಯಲ್ಲಿ ಸ್ತ್ರೀಯರ ವಿವಿಧ ಕೆಲಸಕಾರ್ಯಗಳ ವಿವರವನ್ನು ಪೇಯಿಸ್ ನೀಡುತ್ತಾನೆ. ಆತ ಹೇಳುತ್ತಾನೆ; "ಆಲ್ಲಿ ಕತ್ತಿ ಗುರಾಣಿ ಹಿಡಿಯುವ ಸ್ತ್ರೀಯರಿದ್ದಾರೆ, ಕುಸ್ತಿ ಆಡುವವರಿದ್ದಾರೆ, ಕಹಳೆ ಊದುವವರಿದ್ದಾರೆ, ಕೊಳಲು ಊದುವವರಿದ್ದಾರೆ ಮತ್ತು ನಮ್ಮವಕ್ಕಿಂತ ಭಿನ್ನವಾದ ಇತರ ವಾದ್ಯಗಳನ್ನು ಊದುವವರಿದ್ದಾರೆ. ಹಾಗೇಯೇ ಬೋಯಿಗಳಾಗಿ ಮತ್ತು ಅಗಸರಾಗಿ ಹಾಗೂ ಅರಸನಿಗೆ ಅರಮನೆಯಲ್ಲಿ ಅಧಿಕಾರಿಗಳಿರುವಂತೆಯೇ ದ್ವಾರದೊಳಗಡೆ ಇರುವ ಇತರ ಕಾರ್ಯಾಲಯಗಳಿಗೆ ಸ್ತ್ರೀಯರಿದ್ದಾರೆ. ಆತ ಮುಂದುವರಿದು ಹೇಳುವುದು ಹೀಗೆ; "ಇಪ್ಪತ್ತೈದು ಅಥವಾ ಮೂವತ್ತು ದ್ವಾರಪಾಲಕಿಯರು ಕೈಯಲ್ಲಿ ಛಡಿ ಮತ್ತು ಹೆಗಲ ಮೇಲೆ ಚಾವುಟಿಗಳೊಡನೆ" ಕಾಣಿಸಿಕೊಳ್ಳುವರು ಹಾಗೂ "ಇವರ ಹಿಂದೆಯೆ ಅನೇಕ ನಪುಂಸಕರು ಬರುತ್ತಾರೆ; ಮತ್ತು ಈ ನಪುಂಸಕರ ತರುವಾಯ ತುತ್ತೂರಿ, ಮದ್ದಲೆ, ಕೊಳಲು, ಪಿಟೀಲು ಮತ್ತಿತರ ಬಗೆಯ ಸಂಗೀತ ನುಡಿಸುವ ಅನೇಕ ಸ್ತ್ರೀಯರು ಬರುತ್ತಾರೆ; ಈ ಸ್ತ್ರೀಯರ ಹಿಂದೆ ಇಪ್ಪತ್ತು ಹೊರೆಯಾಳು ಸ್ತ್ರೀಯರು ಕೈಯಲ್ಲಿ ಪೂರ್ತಿ ಬೆಳ್ಳಿಯಿಂದ ಹೊದಿಸಿದ ಬೆತ್ತಗಳನ್ನು ಹಿಡಿದು ಬರುತ್ತಾರೆ; ಅವರ

ಹಿಂದೆಯೆ ಈ ರೀತಿಯಲ್ಲಿ ಉಡುಪು ತೊಟ್ಟ ಸ್ತ್ರೀಯರು ಬರುತ್ತಾರೆ, ಅವರು ಒಬ್ಬರ ಮುಂದೊಬ್ಬರಂತೆ ನಿಯತಕ್ರಮದಲ್ಲಿ ಬರುತ್ತಾರೆ. ಒಟ್ಟು ಹದಿನಾರರಿಂದ ಇಪ್ಪತ್ನಾಲ್ಕು ವಯಸ್ಸಿನ ಸುಮಾರು ಅರವತ್ತು ಸುಂದರ ಯುವತಿಯರು”[47].

ರಾಜನ ಅರಮನೆಯಲ್ಲಿದ್ದ ಕುರಿತಂತೆ ನ್ಯೂನಿಜ್‌ನ ಕಥನ ಹೀಗಿದೆ; “ಈ ರಾಜ ತನ್ನ ಅರಮನೆಯ ದ್ವಾರದೊಳಗೆ ನಾಲ್ಕು ಸಾವಿರಕ್ಕೂ ಹೆಚ್ಚು ಸ್ತ್ರೀಯರನ್ನು ಹೊಂದಿರುವನು; ಅವರೆಲ್ಲರೂ ಅರಮನೆಯಲ್ಲಿಯೆ ವಾಸಿಸಿರುವರು. ಕೆಲವರು ನರ್ತಕಿಯರು ಮತ್ತೆ ಕೆಲವರು ಅರಸನ ಪತ್ನಿಯರನ್ನು ಮತ್ತು ಅರಮನೆಯೊಳಗೆ ಅರಸನನ್ನು ತಮ್ಮ ಹೆಗಲ ಮೇಲೆ ಹೊರುವ ಬೋಯಿಗಳೂ ಆಗಿರುವರು; ಏಕೆಂದರೆ ಅರಸನ ಭವನಗಳು ದೊಡ್ಡದಾಗಿವೆ ಹಾಗೂ ಒಂದೊಂದಕ್ಕೂ ನಡುವೆ ಅಂತರ ಹೆಚ್ಚಿರುತ್ತದೆ. ಅವನಲ್ಲಿ ಕುಸ್ತಿ ಆಡುವ ಸ್ತ್ರೀಯರು ಮತ್ತು ಭವಿಷ್ಯ ಹಾಗೂ ಕಣಿ ಹೇಳುವ ಇತರರೂ ಇರುವರು. ಅರಮನೆಯ ದ್ವಾರಗಳೊಳಗಡೆ ಮಾಡಲಾದ ಖರ್ಚುಗಳ ಲೆಕ್ಕ ಬರೆಯುವ ಸ್ತ್ರೀಯರೂ ಆತನಲ್ಲಿ ಇರುವರು ಮತ್ತು ರಾಜ್ಯದ ಎಲ್ಲ ಆಗುಹೋಗುಗಳನ್ನು ಬರೆದು ಹೊರಗಿನ ಲೇಖರರೊಂದಿಗೆ ತಮ್ಮ ಪುಸ್ತಕಗಳನ್ನು ಹೋಲಿಸಿ ನೋಡುವ ಕರ್ತವ್ಯವುಳ್ಳ ಇತರರೂ ಇರವರು; ಅವನಲ್ಲಿ ಸಂಗೀತಕ್ಕೂ ಸ್ತ್ರೀಯರಿರುವರು; ಅವರು ವಾದ್ಯಗಳನ್ನು ನುಡಿಸುತ್ತಾರೆ ಹಾಗೂ ಹಾಡುತ್ತಾರೆ[48]. ಅರಸನ ಹೆಂಡತಿಯರೂ ಸಂಗೀತದಲ್ಲಿ ಒಳ್ಳೆಯ ಪರಿಣತಿ ಹೊಂದಿರುವರು. ಈ ಸ್ತ್ರೀಯರಲ್ಲದೆ, ಅರಸನು ತನ್ನ ಸ್ವಂತ ಸೇವೆಗಾಗಿ ಹತ್ತು ಅಡಿಗೆಯ ಸ್ತ್ರೀಯರನ್ನು ಹೊಂದಿದ್ದು ಅವರು ಆತನ ಪರಿಚಾರಿಕೆ ಮಾಡುವರು ಹಾಗೂ ಅರಮನೆಯ ಉಪಯೋಗಕ್ಕಾಗಿ ತರಲಾದ ಮುಚ್ಚಿದ ನೀರಿನ ಪಾತ್ರೆಗಳನ್ನು ಒಪ್ಪಿಸಿಕೊಡುವರು

ಎಂದು ನ್ಯೂನಿಜ್ ಹೇಳುತ್ತಾನೆ. ಅರಸನ ಪತ್ನಿಯರಲ್ಲಿ ಪ್ರತಿಯೊಬ್ಬರೂ ತನ್ನ ಭವನದಲ್ಲಿಯೇ ಇರುತ್ತಾರೆ ಹಾಗೂ ಪರಿಚಾರಿಕಕೆಯರು ಅವರ ಸೇವೆ ಮಾಡುತ್ತಾರೆ; ಅರಸನ ಊಟದ ಮಣೆಗೆ ನಪುಂಸಕರು ಹಾಗೂ ಸ್ತ್ರೀಯರು ಬಡಿಸುತ್ತಾರೆ; ಮತ್ತು ಅರಸನು ನ್ಯಾಯಾಧೀಶರನ್ನು ಹಾಗೆಯೆ ದಂಡಾಧಿಕಾರಿಗಳು ಮತ್ತು ಪ್ರತಿರಾತ್ರಿ ಅರಮನೆಯನ್ನು ಕಾಯುವ ಕಾವಲುಗಾರರನ್ನು ಹೊಂದಿದ್ದನು ಹಾಗೂ ಇವರೆಲ್ಲರೂ ಸ್ತ್ರೀಯರೆಂದು ಕೂಡ ಆತ ದಾಖಲಿಸಿದ್ದಾನೆ.

ವಿಜಯನಗರದ ಅರಸರು ಅನೇಕ ಪತ್ನಿಯರಿಂದ ಕೂಡಿದ ಅಂತಃಪುರವನ್ನು ಇರಿಸಿಕೊಂಡಿದ್ದರು. ಅರಸನು ಸ್ವಂತಕ್ಕಾಗಿ ಹನ್ನೆರಡು ಸಾವಿರ ಹೆಂಡಂದಿರನ್ನು ಹೊಂದಿದ್ದು ಅವರಲ್ಲಿ ನಾಲ್ಕು ಸಾವಿರ ಮಂದಿ ಆತ ಎಲ್ಲಿಯೇ ಹೋದರೂ ನಡೆದು ಆತನನ್ನು ಹಿಂಬಾಲಿಸುತ್ತಿದ್ದರು ಹಾಗೂ ಅಡುಗೆಮನೆಯಲ್ಲಿ ಸೇವೆಗಾಗಿಯೇ ನೇಮಿತರಾಗಿದ್ದರೆಂದು ನಿಕೊಲೊ ಕೊಂಟಿಯೂ ತಿಳಿಸುತ್ತಾನೆ. ಅಷ್ಟೇ ಸಂಖ್ಯೆಯಲ್ಲಿ ಹೆಚ್ಚು ಮನೋಹರವಾಗಿ ಸುಸಜ್ಜಿತರಾದ ಮಂದಿ ಕುದುರೆಯ ಮೇಲೆ ಸಾಗುತ್ತಿದ್ದರು. ಉಳಿದವರನ್ನು ಜನರು ಪಲ್ಲಕ್ಕಿಯಲ್ಲಿ ಹೊರುತ್ತಿದ್ದರು ಮತ್ತು ಅವರಲ್ಲಿ ಎರಡು ಸಾವಿರ ಅಥವಾ ಮೂರು ಸಾವಿರ ಜನರು ಆತನ ಮರಣದೊಂದಿಗೆ ಆತನೊಡನೆ ಸ್ವ ಇಚ್ಛೆಯಿಂದ ಉರಿದು ಹೋಗಬೇಕೆಂಬ ನಿಬಂಧನೆಯೊಡನೆ ಆದು ಅವರಿಗೆ ಪ್ರಾಪ್ತವಾಗುವ ಮಹಾಗೌರವವೆಂದು ಭಾವಿಸಲಾಗುತ್ತಿತ್ತು ಆತನ ಪತ್ನಿಯರಾಗಿ ಆಯ್ಕೆಯಾಗುತ್ತಿದ್ದರು. ಈ ಕಥನದಿಂದ ಅರಸನ ರಾಣೀವಾಸವು ಬೇರೆ ಬೇರೆ ಶ್ರೇಣಿಗಳಿಗೆ ಸೇರಿದ ಮತ್ತು ಬೇರೆ ಬೇರೆ

ಸ್ಥಾನಮಾನವನ್ನು ಅನುಭೋಗಿಸಿದ ಆತನ ಪತ್ನಿಯರನ್ನು ಒಳಗೊಂಡಿತ್ತೆಂದು ನಾವು ಭಾವಿಸಬೇಕಾಗುತ್ತದೆ[49].

ವಿಜಯನಗರದ ಸಂಗಮ ವಂಶದ ಇತಿಹಾಸದಲ್ಲಿ ಇಮ್ಮಡಿ ದೇವರಾಯನ ರಾಣೀವಾಸವು 700ರಷ್ಟು ರಾಜಕುಮಾರಿ ಹಾಗೂ ವಾರಸ್ತ್ರೀಯರನ್ನು ಒಳಗೊಂಡಿತ್ತೆಂದು ಅಬ್ದುಲ್ ರಝಾಕ್ ಉಲ್ಲೇಖಿಸುತ್ತಾನೆ. ಒಮ್ಮೆ ಒಬ್ಬ ಸ್ತ್ರೀ ಅರಸನ ಪತ್ನಿಯಾಗಿ ರಾಣೀವಾಸಕ್ಕೆ ಪ್ರವೇಶಹೊಂದಿದ ಮೇಲೆ ಆಕೆಗೆ ತನ್ನ ತಂದೆ ತಾಯಿಗಳನ್ನು ಸಂದರ್ಶಿಸಲು ಎಂದೂ ಅವಕಾಶ ದೊರೆಯುತ್ತಿರಲಿಲ್ಲ; ಆದರೆ ಅರಮನೆಯಲ್ಲಿ ಆಕೆಯ ಜೀವನ ಸುಖಕರವಾಗಿರುತ್ತಿತ್ತು ಎಂದೂ ರಝಾಕ್ ತಿಳಿಸುತ್ತಾನೆ. ಹತ್ತು ವರ್ಷಗಳನ್ನು ಮುಟ್ಟಿದ ತರುವಾಯ ಯಾವ ಗಂಡು ಹುಡುಗನಿಗೂ ಜನಾನಾದಲ್ಲಿ ಉಳಿದುಕೊಳ್ಳುವ ಅವಕಾಶವಿರುತ್ತಿರಲಿಲ್ಲ. ಒಂದೇ ಕೋಣೆಯಲ್ಲಿ ಇಬ್ಬರು ಹೆಂಗಸರು ಒಟ್ಟಿಗೆ ವಾಸಿಸುತ್ತಿರಲಿಲ್ಲ. ಪ್ರತಿಯೊಬ್ಬರಿಗೂ ತಮ್ಮದೇ ಆದ ಪ್ರತ್ಯೇಕ ಕೋಣೆ ಇತ್ತು. ಅರಸನ ಪತ್ನಿಯರು ಮತ್ತು ವಾರಸ್ತ್ರೀಯರಲ್ಲಿದ್ದ ಈರ್ಷ್ಯೆಯನ್ನು ಬಾರ್ಬೋಸ ದಾಖಲಿಸಿದ್ದಾನೆ; "ಅರಸನ ಕೃಪೆಗಾಗಿ ಈ ಹೆಂಗಸರಲ್ಲಿ ಎಂಥ ಇರ್ಷ್ಯೆ ಮತ್ತು ದ್ವೇಷವಿತ್ತೆಂದರೆ ಕೆಲವರು ಇತರರನ್ನು ಕೊಲ್ಲುತ್ತಿದ್ದರು ಹಾಗೂ ಮತ್ತೆ ಕೆಲವರು ವಿಷದಿಂದ ತಮ್ಮನ್ನೇ ಸಾಯಿಸಿಕೊಳ್ಳುತ್ತಿದ್ದರು" ಎಂದು ಆತ ಹೇಳುತ್ತಾನೆ. ಅತ್ಯುನ್ನತಶ್ರೇಣಿಯ ತುಂಬಾ ಮುದುಕನಾದವನನ್ನು ಬಿಟ್ಟು ಮತ್ತು ವಿಶೇಷವಾಗಿ ಅರಸನ ಅನುಮತಿಯಿಲ್ಲದೆ ಯಾರಿಗೂ ಅವರನ್ನು ನೋಡಲು ಅವಕಾಶವಿರಲಿಲ್ಲ. ರಾಣಿಯರು ನಡೆಸುತ್ತಿದ್ದ ಜೀವನರೀತಿಯ ಮೇಲೆ ಪೇಯಿಸ್ ತುಸು ಬೆಳಕು ಚೆಲ್ಲುತ್ತಾನೆ; "ಅವರು ಹೊರಗೆ

ಹೋಗಲು ಬಯಸಿದಾಗ ಅವರನ್ನು ಯಾರಿಗೂ ಕಾಣದಂತೆ ಮುಚ್ಚಿದ ಮೇನೆಗಳಲ್ಲಿ ಹೊತ್ತೊಯ್ಯಲಾಗುತ್ತಿತ್ತು; ಮತ್ತು ಎಲ್ಲ ಮುನ್ನೂರು ಅಥವಾ ನಾನೂರು ನಪುಂಸಕರೂ ಪೂರ್ತಿಯಾಗಿ ಅವರೊಡನೆ ಇರುತ್ತಿದ್ದರು; ಉಳಿದೆಲ್ಲ ಜನರೂ ಅವರಿಂದ ದೂರದಲ್ಲಿರುತ್ತಾರೆ. ಈ ರಾಣಿಯರಲ್ಲಿ ಪ್ರತಿಯೊಬ್ಬಳೂ ಬಹಳಷ್ಟು ಧನ, ಸಂಪತ್ತು ಮತ್ತು ಸ್ವಂತದ ಆಭರಣಗಳನ್ನು ಎಂದರೆ ತೋಳಬಂದಿಗಳು, ಕೈಬಳೆಗಳು, ಸಣ್ಣ ಮುತ್ತುಗಳು, ಮುತ್ತುಗಳು ಹಾಗೂ ವಜ್ರಗಳನ್ನು ಹೊಂದಿರುತ್ತಾಳೆ; ಅದು ಕೂಡ ದೊಡ್ಡ ಪ್ರಮಾಣದಲ್ಲಿ ಎಂದು ನಮಗೆ ಅವರು ಹೇಳಿದರು. ಅವರಲ್ಲಿ ಪ್ರತಿಯೊಬ್ಬಳಿಗೆ ಅನೇಕ ರತ್ನಗಳು, ಮಾಣಿಕ್ಯಗಳು, ವಜ್ರಗಳು, ಮುತ್ತುಗಳು ಮತ್ತು ಸಣ್ಣ ಮುತ್ತುಗಳಿಂದ ಸಾಧ್ಯವಿದ್ದಷ್ಟೂ ಚೆಂದವಾಗಿ ಅಲಂಕೃತರಾದ ಅರವತ್ತು ಪರಿಚಾರಿಕೆಯರು ಇರುವರೆಂದೂ ಅವರು ನಮಗೆ ತಿಳಿಸಿದರು". ಅರಮನೆಯೊಳಗೆ ಅರಸನು ತಾನೊಬ್ಬನೆ ಇರುವನು ಮತ್ತು ತನ್ನ ಪತ್ನಿಯರಲ್ಲೊಬ್ಬಳ ಸಹವಾಸ ಬೇಕೆನಿಸಿದಾಗ ಒಬ್ಬ ನಪುಂಸಕನಿಗೆ ಆಕೆಯನ್ನು ಕರೆತರುವಂತೆ ಆದೇಶಿಸುವನು ಹಾಗೂ ರಾಣಿಯು ರಾಜನಿದ್ದಲ್ಲಿಗಾಗಲಿ ಇಲ್ಲವೆ ರಾಜನೆ ರಾಣಿ ಇದ್ದಲ್ಲಿ ಗಾಗಲಿ ಬರುವರು. ಹೀಗೆ ಅವನು ಬೇರೆ ಯಾರಿಗೂ ತಿಳಿಯದಂತೆ ತನಗೆ ಹಿತವೆನಿಸುವಂತೆ ಸಮಯ ಕಳೆಯುವನು ಎಂದು ಪೇಯಿಸ್ ದಾಖಲಿಸಿದ್ದಾನೆ[೫೦]. ರಾಜನ ಸ್ತ್ರೀಯರಬಗ್ಗೆ ನಮಗೆ ದೊರೆಯುವ ಬಾರ್ಬೋಸ್‌ನ ಕಥನ ಹೀಗಿದೆ; "ಅವರು ಹಾಡುವರು, ಆಡುವರು ಹಾಗೂ ಅರಸನಿಗೆ ಸಾವಿರ ಇತರ ಅಮೋದ ಪ್ರಮೋದಗಳನ್ನು ನೀಡುವರು. ಈ ಮೇಲೆ ನಾನು ತಿಳಿಸಿದಂತೆ, ಸ್ನಾನಕ್ಕಾಗಿ ಇರುವ ಅನೇಕ ಕೆರೆಗಳಲ್ಲಿ ಅವರು ದಿನನಿತ್ಯ ಮೀಯುವರು. ಅವರು

ಮೀಯುವುದನ್ನು ನೋಡಲು ಅರಸನು ಹೋಗುವನು ಹಾಗೂ ಆತನಿಗೆ ಅತಿ ಮೆಚ್ಚಿಕೆಯಾಗುವ ಸ್ತ್ರೀಯನ್ನು ತನ್ನ ಕೋಣೆಗೆ ಕರೆತರುವಂತೆ ಹೇಳಿಕಳಿಸುವನು.

ಈ ಕಥನಗಳಿಂದ 1336 ರಿಂದ 1565ರ ವರೆಗೆ ಮಧ್ಯಕಾಲೀನ ವಿಜಯನಗರದಲ್ಲಿ ಅರಸನ ಅಂತಃಪುರದ ಸಾಮಾನ್ಯ ಪರಿಸ್ಥಿತಿಯು ವೈಭವದಲ್ಲಿ ಅತ್ಯಲ್ಪ ಏರಿಳಿತಗಳೊಂದಿಗೆ ಒಂದೇ ಆಗಿತ್ತೆಂದು ಸ್ಪಷ್ಟಪಡುತ್ತದೆ.

ಜನಸಾಮಾನ್ಯರಲ್ಲಿ ಸ್ತ್ರೀಯರು ಸಾಧಾರಣವಾಗಿ ಸುರಕ್ಷಿತರಾಗಿದ್ದರು ಮತ್ತು ಮನೆಯ ಕೆಲಸಕಾರ್ಯಗಳು, ವ್ಯಾಪಾರ ಮತ್ತು ವ್ಯವಸಾಯಗಳಲ್ಲಿ ಅವರು ಪುರುಷರಿಗೆ ಸಹಾಯಮಾಡುತ್ತಿದ್ದರೂ ಬಹುಮಟ್ಟಿಗೆ ಅವರ ಸ್ಥಾನ ಅಡುಗೆ ಮನೆಗೆ ಸೀಮಿತವಾಗಿತ್ತು. ಜಾತಿಯು ಸಮಾಜದ ಪ್ರಧಾನ ಲಕ್ಷಣವಾಗಿದ್ದು, ಸ್ತ್ರೀಯು ತನ್ನ ಗಂಡನ ಜಾತಿಯ ವೃತ್ತಿಯಲ್ಲಿ ತನ್ನ ಪಾತ್ರವನ್ನು ವಹಿಸುತ್ತಿದ್ದಳು. ಹೀಗೆ ಕುಂಬಾರ ಸ್ತ್ರೀಯು ತನ್ನ ಗಂಡನಿಗೆ ಮಡಕೆಕುಡಿಕೆ ತಯಾರಿಸುವಲ್ಲಿ ನೆರವಾಗುತ್ತಿದ್ದರೆ. ವ್ಯವಸಾಯದ ಕೆಲಸಕಾರ್ಯಗಳಲ್ಲಿ ರೈತನಿಗೆ ಆತನ ಹೆಂಡತಿಯು ಸಹಾಯಮಾಡುತ್ತಿದ್ದಳು[51]. ವಿಜಯನಗರಕ್ಕೆ ಬೇಟಿ ನೀಡಿದ ವಿದೇಶೀ ಪ್ರವಾಸಿಗರು ಸಾಮಾನ್ಯ ಸ್ತ್ರೀಯರು ಮತ್ತು ಅವರ ಮನೆಯ ಕೆಲಸಕಾರ್ಯಗಳಿಗೆ ಸಂಬಂಧಪಟ್ಟಂತೆ ಯಾವದೇ ಕಥನವನ್ನು ನೀಡುವುದಿಲ್ಲ; ಇದಕ್ಕೆ ಕಾರಣವೆಂದರೆ ಅವರು ತಮ್ಮ ಭೇಟಿಯ ಕಾಲದಲ್ಲಿ ನೋಡಿದುದು ವಾರಾಂಗನೆಯರು, ನರ್ತಕಿಯರು ಹಾಗೂ ಅರಮನೆಯ ಸೇವೆಯಲ್ಲಿರುವ ಸ್ತ್ರೀಯರನ್ನು ಮಾತ್ರ, ನಗರದಲ್ಲಿ ಅವರಿಗಾಗಿಯೇ ಮೀಸಲಾಗಿದ್ದ ಒಂದು ಭಾಗದಲ್ಲಿ ವೇಶ್ಯಾಯರನ್ನೂ ಅವರು ಗಮನಿಸಿದರು. ಕುಟುಂಬದ ಸ್ತ್ರೀಯರ ಬಗ್ಗೆ ಕೆಲವು ಅಭಿಪ್ರಾಯಗಳನ್ನು

ತಿಳಿಸಿರುವುದು ಪೇಯಿಸ್ ಮಾತ್ರ. "ಬ್ರಾಹ್ಮಣರು ಎಲ್ಲರೂ ವಿವಾಹಿತರಾಗಿರುವರು ಮತ್ತು ಬಹಳ ಸುಂದರವಾದ ಪತ್ನಿಯರನ್ನು ಹೊಂದಿರುವರು; ಪತ್ನಿಯರು ಏಕಾಂತಪ್ರಿಯರಾಗಿದ್ದು ತಮ್ಮ ಮನೆಯಿಂದ ಹೊರಬರುವುದು ಅತಿ ವಿರಳ, ಈ ಸ್ತ್ರೀಯರು ತಿಳಿ ಬಣ್ಣದವರು. ಈ ಬ್ರಾಹ್ಮಣರ ಜಾತಿಯಲ್ಲಿ ನಾಡಿನಲ್ಲಿಯೇ ಅತ್ಯಂತ ಸುಂದರ ಪುರುಷರು ಮತ್ತು ಸ್ತ್ರೀಯರಿರುವರು" ಎಂದು ಆತ ಹೇಳುತ್ತಾನೆ. ಸಾಮ್ರಾಜ್ಯಕ್ಕೆ ಬೇಟಿಕೊಟ್ಟ ತೆಲಗು ಕವಿ ಶ್ರೀನಾಥನ ವರ್ಣನೆಯಲ್ಲಿ ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದ ಸ್ತ್ರೀಯರ ಬಗ್ಗೆ ಕೆಲವು ತುಣುಕು ನೋಟಗಳಿವೆ. ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾದ ಪಾಲನಾಡಿನಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ಜೀವನದ ಕಷ್ಟ ಕಾರ್ಪಣ್ಯಗಳನ್ನು ವಿವರಿಸುತ್ತ "ಸ್ತ್ರೀಯರು ಅಪ್ಸರೆ ಅಥವಾ ರಂಭೆಯರಷ್ಟು ಸುಂದರವಾಗಿದ್ದಿರಬಹುದಾದರೂ ನೂಲಬೇಕು" ಎಂದು ಕವಿಯು ತಿಳಿಸುತ್ತಾನೆ. ಆತ ಪುರೋಹಿತನ ಮನೆಯೊಂದನ್ನು ವರ್ಣಿಸುವಾಗ ಅಲ್ಲಿನ "ತಲೆಗಳಲುಗದ ವಿಧವೆಯರ" ಬಗ್ಗೆ ಉಲ್ಲೇಖಿಸುತ್ತಾನೆ. ಹಾಗೆಯೇ ಮುಂದುವರಿದು "ಅಲಂಕರಣ ಭೂಷಿತರಾದ ಮತ್ತು ಕಸ್ತೂರಿ ಲೇಪಿತರಾದ, ಕಪ್ಪು ಜಡೆಗಳಿಂದ ಕೂಡಿದ ಸ್ತ್ರೀಯರನ್ನು" ಆತ ಉಲ್ಲೇಖಿಸುತ್ತಾನೆ. ವಿಜಯನಗರದ ತಮಿಳು ಭಾಗಗಳಲ್ಲಿನ ಸ್ತ್ರೀಯರನ್ನು ವರ್ಣಿಸುತ್ತ ಅವರು "ಬರಿದೆದೆ" ಯವರೆಂದು ಕವಿಯು ತಿಳಿಸುತ್ತಾನೆ.

ಸ್ತ್ರೀಯರು ಧಾರ್ಮಿಕ ಸ್ವಭಾವದವರೂ, ಅತಿಥಿ ಅಭ್ಯಾಗತರನ್ನು ಅದರಿಸುವವರೂ ಮತ್ತು ತಮ್ಮ ಗಂಡಂದಿರಿಗೆ ನಿಷ್ಠರೂ ಆಗಿದ್ದರು[52]. ವಿವಾಹ ಮತ್ತು ಕೌಟುಂಬಿಕ ಜೀವನ ಸ್ತ್ರೀಯರ ಮುಖ್ಯ ಜೀವನಗತಿಯಾಗಿದ್ದರೂ ಅವರಲ್ಲಿ

ಹಲವರು ಲಲಿತಕಲೆಗಳಲ್ಲಿ ಸುಶಿಕ್ಷಿತರಾಗಿದ್ದರು. ಬಾರ್ಬೋಸ್‌ನ ಪ್ರಕಾರ "ಅವರು ತಮ್ಮ ಸ್ತ್ರೀಯರಿಗೆ ಬಾಲ್ಯದಿಂದಲೆ ಹಾಡುವುದು, ನುಡಿಸುವುದು ಮತ್ತು ನರ್ತಿಸುವುದು ಹಾಗೂ ಸುತ್ತ ತಿರುಗುವುದು ಮತ್ತು ಹಲವು ಲಘು ಹೆಜ್ಜೆಗಳನ್ನು ಹಾಕುವುದನ್ನು ಕಲಿಸುವರು". ಸ್ತ್ರೀಯರು ಧೈರ್ಯಶಾಲಿಗಳಾಗಿದ್ದರು ಹಾಗೂ ಆಪತ್ತಿನಿಂದಾಗಿ  ಅಗತ್ಯಬಿದ್ದಾಗ ಹೋರಾಡಲೂ ಸಮರ್ಥರಾಗಿದ್ದರು. ಹೀಗೆ ಸುಮಾರು ಕ್ರಿ.ಶ. 1446ರ ವೇಳೆಗೆ ಹರಿಯಕ್ಕ ಎಂಬಾಕೆಯು ತನ್ನ ತಂದೆಯನ್ನು ಕೊಂದ ಮಲ್ಲರೊಡನೆ ಹೋರಾಡಿ ಸೇಡನ್ನು ತೀರಿಸಿಕೊಂಡಳು. ಪುರುಷರಂತೆ ಸ್ತ್ರೀಯರೂ ವ್ಯಾಪಾರ ವ್ಯವಹಾರ ನಡೆಸಿದುದುಂಟು; ತಮ್ಮ ಕುಂದುಕೊರತೆಗಳನ್ನು ಅಥವಾ ಬೇಡಿಕೆಗಳನ್ನು ಹೇಳಿಕೊಳ್ಳಲು ಅರಸನನ್ನು ಅವರು ಭೇಟಿಯಾದುದುಂಟು. ಹೀಗೆ 1433ರಲ್ಲಿ ಒಬ್ಬ ಕೈಕೋಲರ್‌ನ ಅಕ್ಕ ಅರಮವಲತ್ತ ನಾಚಿಯಾರ್ ಎಂಬಾಕೆಯು ಇಮ್ಮಡಿ ದೇವರಾಯನನ್ನು ಸಂದರ್ಶಿಸಿ, ಗ್ರಾಮವೊಂದರ ಸರ್ವಮಾನ್ಯ ದತ್ತಿಯನ್ನೊಳಗೊಂಡ ತಾಮ್ರಶಾಸನವೊಂದನ್ನು ಆತನಿಂದ ಪಡೆದುಕೊಂಡಳು. ಗ್ರಾಮವು ಸರ್ವಮಾನ್ಯ ಎಂದರೆ ಎಲ್ಲ ಸವಲತ್ತುಗಳನ್ನು ಹೊಂದಿದ್ದು ತೆರಿಗೆಗಳಿಂದ ಮುಕ್ತವಾಗಿತ್ತು[53].

ನರ್ತನ ಗಾಯನದಲ್ಲಿ ಮತ್ತು ಪುರುಷರನ್ನು ರಂಜಿಸುವಲ್ಲಿ ಇರುವ ತಮ್ಮ ಕಲಾತ್ಮಕ ಪ್ರತಿಭೆಗಳಿಂದಾಗಿ ಸಮಾಜದಲ್ಲಿ ಪ್ರಮುಖ ಸ್ಥಾನಮಾನವನ್ನು ಹೊಂದಿದ್ದಂತೆ ತೋರುವ, ವಿಜಯನಗರದಲ್ಲಿನ ವೇಶ್ಯೆಯರ ಬಗ್ಗೆ ನಮಗೆ ವಿದೇಶೀ ಪ್ರವಾಸಿಗರಿಂದ ವಿಶದ ಕಥನಗಳು ದೊರೆಯುತ್ತವೆ. ಅವರು ಆಸ್ಥಾನಕ್ಕೆ ಬಂದು ಅರಮನೆಯ ಮುಖ್ಯ ಸಮಾರಂಭ ಮತ್ತು ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ವಾಸ್ತವವಾಗಿ ಆಸ್ಥಾನದ ಸಂಪ್ರದಾಯಗಳಲ್ಲಿ ಮಹಿಳೆಯರ ಮತ್ತು ನೃತ್ಯಾಂಗನೆಯರ ಉಪಸ್ಥಿತಿಯು ಅವಶ್ಯಕ ವೈಶಿಷ್ಟ್ಯವಾಗಿತ್ತು. ಅರಸನ ಜನ್ಮದಿನ ಸಮಾರಂಭ, ಮಹಾನವಮಿ ಉತ್ಸವ, ದೀಪಾವಳಿ ಹಬ್ಬ ಹಾಗೂ ಅರಸನ ಪಟ್ಟಾಭಿಷೇಕ ಸಮಾರಂಭಗಳಲ್ಲಿ ರಾಜನ ಆಸ್ಥಾನದಲ್ಲಿ ನೃತ್ಯಾಂಗನೆಯರು ಪ್ರಮುಖವಾಗಿ ಕಾಣಿಸಿಕೊಳ್ಳುತ್ತಿದ್ದರು. ವಿಜಯನಗರ ಪಟ್ಟಣವು ವಾರಾಂಗನೆಯರ ದೊಡ್ಡ ಕೇಂದ್ರವಾಗಿತ್ತು ಹಾಗೂ ಅವರ ಬಗ್ಗೆ ಅಬ್ದುಲ್ ರಝಾಕ್‌ನ ಕಥನ ನಮಗೆ ದೊರೆಯುತ್ತದೆ. ಆ ಪಟ್ಟಣದ 12,000 ರಕ್ಷಕರ ಸಂಬಳ ಸಾರಿಗೆಗಳನ್ನು ಅಲ್ಲಿನ ವೇಶ್ಯಾಗೃಹಗಳ ವರಮಾನದಿಂದ ಪಡೆದ ಮೊತ್ತದಲ್ಲಿ ನೀಡಲಾಗುತ್ತಿತ್ತೆಂದು ಆತ ಹೇಳುತ್ತಾನೆ. “ಆ ಮನೆಗಳ ವೈಭವ, ಹೃದಯ ಸಮ್ಮೋಹನಗೊಳಿಸುವ ಅವರ ಸೌಂದರ್ಯ, ಅವರ ಬೆಡಗು ಬಿನ್ನಾಣ ಮತ್ತು ಪ್ರಣಯದ ನೋಟಗಳು ಎಲ್ಲವೂ ವರ್ಣನೆಗೆ ಮೀರಿದವು. ಒಂದು ಉಲ್ಲೇಖನೀಯ ಸಂಗತಿ ಹೀಗಿದೆ; ಟಂಕಸಾಲೆಯ ಹಿಂದೆ ಒಂದು ಪೇಟೆ ಇದ್ದು ಅದು 300 ಅಡಿಗಿಂತ ಹೆಚ್ಚು ಉದ್ದ ಮತ್ತು 20 ಅಡಿಗಿಂತ ಹೆಚ್ಚು ಅಗಲವಾಗಿದೆ. ಅದರ ಎರಡೂ ಪಾರ್ಶ್ವಗಳಲ್ಲಿ ಮನೆಗಳು ಮತ್ತು ನಾಲ್ಕು ಪ್ರದರ್ಶನ ಶಾಲೆಗಳು ಇವೆ. ಮಧ್ಯಾಹ್ನದ ಪ್ರಾರ್ಥನಾ ಸಮಯದ ತರುವಾಯ ವಾರಾಂಗನೆಯರು ಸುಂದರವಾಗಿ ಅಲಂಕೃತವಾದ ಈ ಮನೆಗಳ ಬಾಗಿಲುಗಳಲ್ಲಿ ಕುರ್ಚಿ ಹಾಗೂ ಉದ್ದಪೀಠಗಳ ಮೇಲೆ ಸ್ವತಃ ಆಸೀನರಾಗಿರುತ್ತಾರೆ[54]. ಪ್ರತಿಯೊಬ್ಬರೂ ಮುತ್ತುರತ್ನಗಳು ಮತ್ತು ಬೆಲೆಬಾಳುವ ಬಟ್ಟೆಬರೆ ಧರಿಸುತ್ತಾರೆ. ಅವರೆಲ್ಲರೂ ಅತಿಶಯವಾಗಿ ಸುಂದರರಾದ ತರುಣಿಯರು. ಈ ಸ್ಥಳದ ಮೂಲಕ ಹಾದುಹೋಗುವ ಯಾವುದೇ ಮನುಷ್ಯ ತಾನು

ಬಯಸಿದವರನ್ನು ಆರಿಸಿಕೊಳ್ಳುತ್ತಾನೆ. ಈ ವೇಶ್ಯಾಗೃಹಗಳ ಸೇವಕರು ಅವರಿಗಾಗಿ ತೆಗೆದುಕೊಂಡು ಹೋಗುವ ಪ್ರತಿಯೊಂದು ವಸ್ತುವಿನ ಬಗೆಗೂ ಎಚ್ಚರಿಕೆ ವಹಿಸುತ್ತಾರೆ ಮತ್ತು ಏನಾದರೂ ಕಳೆದುಹೋದಲ್ಲಿ ಅವರನ್ನು ಕೆಲಸದಿಂದ ತೆಗೆದುಹಾಕಲಾಗುತ್ತದೆ. ಈ ಏಳು ಕೋಟೆಯೊಳಗೆ ಅನೇಕ ವೇಶ್ಯಾಗೃಹಗಳಿವೆ ಹಾಗೂ ಈ ಮೊದಲು ತಿಳಿಸಿದಂತೆ ಅವುಗಳಿಂದ ಬರುವ ಆದಾಯವು 12,000 ಫಣಂಗಳಾಗಿದ್ದು ಅದು ರಕ್ಷಕರ ವೇತನ ಪಾವತಿಗೆ ಸಲ್ಲುತ್ತದೆ". ದೇವಾಲಯ ಹಾಗೂ ಅರಮನೆಗೆ ಸೇರಿದ ನೃತ್ಯಾಂಗನೆಯರಿದ್ದಾರೆ; ಹಬ್ಬಹರಿದಿನಗಳಲ್ಲಿ ಅವರನ್ನು ಆಹ್ವಾನಿಸಲಾಗುತ್ತದೆ ಮತ್ತು ಅರಸನ ಸನ್ನಿಧಿಯಲ್ಲಿ ತಾಂಬೂಲ ಹಾಕಿಕೊಳ್ಳು ಅಪರೂಪದ ಸವಲತ್ತನ್ನು ಅನುಭೋಗಿಸುತ್ತಾರೆ; ಅರಸನೇ ಅನುಮತಿ ಕೊಟ್ಟ ಹೊರತು, ಅಂಥದ್ದನ್ನು ಮಾಡಲು ಮಹಾಪ್ರಭುಗಳಿಗೆ ಕೂಡ ಧೈರ್ಯವಿರುತ್ತಿರಲಿಲ್ಲ. ಈ ಸಾರ್ವಜನಿಕ ಸ್ತ್ರೀಯರ ಅಪಾರ ಸಂಪತ್ತು ಮತ್ತು ಅವರು ಧರಿಸುತ್ತಿದ್ದ ಅಮೂಲ್ಯ ರತ್ನಾಭರಣಗಳ ಬಗ್ಗೆ ಪೇಯಿಸ್ ಉಲ್ಲೇಖಿಸುತ್ತಾನೆ. ದಂಡಯಾತ್ರೆಗಳ ಕಾಲದಲ್ಲಿ ಈ ಸಾರ್ವಜನಿಕ ಸ್ತ್ರೀಯರು ಸೈನ್ಯದ ಜೊತೆಯಲ್ಲಿ ಹೋಗುತ್ತಿದ್ದುದರ ಬಗೆಗೂ ನಮಗೆ ತಿಳಿದುಬರುತ್ತದೆ.

**ಸಂಗಮರ ಕಾಲದ ವೇಷಭೂಷಣಗಳು:**

ಮಧ್ಯಯುಗದಲ್ಲಿ ವಿಜಯನಗರ ಸಾಮ್ರಾಜ್ಯವು ಉಚ್ಛ್ರಾಯಕಾಲದಲ್ಲಿದ್ದಾಗ ಸಾಂಪ್ರದಾಯಿಕ ಹಿಂದೂ ವೇಷಭೂಷಣಗಳು ಬಳಕೆಯಲ್ಲಿದ್ದವು. ಕುದರೆ, ರೇಷ್ಮೆ, ಪದ್ಮರಾಗ ಮತ್ತಿತರ ಅಮೂಲ್ಯ ರತ್ನಾಭರಣಗಳ ವ್ಯಾಪಾರ ಮಾಡಲು ದೂರದ

ದೇಶಗಳಿಂದ ವರ್ತಕರು ವಿಜಯನಗರಕ್ಕೆ ಬಂದರು ಮತ್ತು ಅರಮನೆಯಲ್ಲಿ ಚೀನೀ ರೇಷ್ಮೆಯು ಉಪಯೋಗದಲ್ಲಿದ್ದಂತೆ ಕಂಡುಬರುತ್ತದೆ. ಅರಮನೆಯಲ್ಲಿ ತಾನು ಕಂಡ ಸ್ತ್ರೀಯರ ಸೌಂದರ್ಯದಿಂದ ಮತ್ತು ಅವರು ಧರಿಸಿದ ವೇ಼ಷಭೂಷಣಗಳಿಂದ ಡ್ಯುರೇಟ್ ಬಾರ್ಬೋಸ್ ಆಶ್ಚರ್ಯಚಕಿತನಾದ. "ಸ್ತ್ರೀಯರು ಐದು ಗಜ ಉದ್ದದ ತುಂಬ ತೆಳು ಹತ್ತಿಯ ಅಥವಾ ತಿಳಿ ಬಣ್ಣದ ರೇಷ್ಮೆಯ ಬಿಳಿ ಬಟ್ಟೆಯನ್ನು ಉಟ್ಟುಕೊಳ್ಳುತ್ತಾರೆ. ಅದರ ಒಂದು ಭಾಗ ಅವರ ಕಳೆಭಾಗದ ಸುತ್ತ ಇರುತ್ತದೆ ಮತ್ತು ಇನ್ನೊಂದು ಭಾಗವನ್ನು ಅವರೆದೆಗೆ ಅಡ್ಡಲಾಗಿ ಒಂದು ಭುಜದ ಮೇಲೆ ಇನ್ನೊಂದು ತೋಳು ಮತ್ತು ಭುಜ ಸೆರಗಿಲ್ಲದಂತೆ ತೆರೆದಿರುವ ರೀತಿಯಲ್ಲಿ ಹೂಲೆದಿರುತ್ತಾರೆ" ಎಂದು ಆತ ಹೇಳುತ್ತಾನೆ. ಇದು ಭಾರತೀಯ ಸ್ತ್ರೀಯರು ಉಡುವ ಸಾಂಪ್ರದಾಯಿಕ ಸೀರೆಯ ವರ್ಣನೆ[55]. ಕ್ರಿ.ಶ. 1333 ರಿಂದ 1342ರ ವರೆಗೆ ಭಾರತದಲ್ಲಿದ್ದ ಇಬನ್–ಎ–ಬತೂತ್‌ನು ತಾನು ಹೊನ್ನವೂರಿನಲ್ಲಿ ಕಂಡ ಸ್ತ್ರೀಯರ ಉಡುಪನ್ನು ಉಲ್ಲೇಖಿಸುತ್ತಾನೆ; " ಈ ನಗರದ ಸ್ತ್ರೀಯರು ... ಹೊಲಿದ ಬಟ್ಟೆಬರೆಗಳನ್ನೆಂದೂ ತೊಟ್ಟುಕೊಳ್ಳುತ್ತಿರಲಿಲ್ಲ. ಅದಕ್ಕೆ ತದ್ವಿರುದ್ಧ. ಉದಾಹರಣೆಗೆ ಅವರಲ್ಲಿ ಒಬ್ಬಳು ತನ್ನ ಸೊಂಟದ ಸುತ್ತ ಬಟ್ಟೆಯ ತುಂಡಿನ ಒಂದು ಭಾಗವನ್ನು ಕಟ್ಟಿಕೊಳ್ಳುವಳು; ಉಳಿದ ಭಾಗವನ್ನು ತಲೆಯ ಮತ್ತು ಎದೆಯ ಮೇಲೆ ಇರಿಸಿಕೊಳ್ಳಲಾಗುವುದು". ಸಂಗಮ ಅರಸರ ಆಸ್ಥಾನದಲ್ಲಿ "ಸುಂದರ ವೇಷಭೂಷಿತರಾದ ಮತ್ತು ಹೊಚ್ಚ ಹೊಸ ಗುಲಾಬಿ ಹೂಗಳಂತೆ ಹೃದಯ ಸೂರೆಗೊಳ್ಳುವ ಪ್ರದರ್ಶನಾಕೃತಿಗಳುಳ್ಳ" ಹಾಡುಗಾರರನ್ನು ಅಬ್ದುಲ್ ರಝಾಕ್‌ನು ಕೂಡ ಕಂಡಿದ್ದನು, ಮಾನ್ಯವರ ಮತ್ತು ಬಡವರ ರೀತಿನೀತಿಗಳ ಸೂಕ್ಷ್ಮ ಪರಿಶೀಲಕನಾದ ಬಾರ್ಬೋಸ್‌ನು ವಿಜಯನಗರ ಸಾಮ್ರಾಜ್ಯದ

ಕಾಲದಲ್ಲಿ ಸ್ತ್ರೀಯರು ತೊಡತ್ತಿದ್ದ ಆಭರಣಗಳನ್ನು ಗಮನಿಸಿದ್ದಾನೆ. “ರೇಷ್ಮೆಯಲ್ಲಿ ಚೆನ್ನಾಗಿ ಕಸೂತಿ ಕೆಲಸಮಾಡಿದ ಚರ್ಮದ ಪಾದರಕ್ಷೆಗಳನ್ನು ಅವರು ಧರಿಸುತ್ತಾರೆ; ಅವರ ತಲೆಯ ಮೇಲೆ ಮುಸುಕಿರುವುದಿಲ್ಲ ಮತ್ತು ಅವರ ತಲೆಯ ತುದಿಯಲ್ಲಿ ಗಂಟು ಬರುವಂತೆ ಕೂದಲನ್ನು ಬಿಗಿಯಾಗಿ ಒಟ್ಟುಗೂಡಿಸಿರುತ್ತಾರೆ ಹಾಗೂ ಅವರ ತಲೆಗೂದಲಲ್ಲಿ ಅನೇಕ ಸುವಾಸಿತ ಹೂಗಳನ್ನು ಅವರು ಮುಡಿದು ಕೊಂಡಿರುತ್ತಾರೆ” ಎಂದು ಆತ ತಿಳಿಸುತ್ತಾನೆ. ಈ ವರ್ಣನೆಯು ಆಧುನಿಕ ಕಾಲದ ಸ್ತ್ರೀಯರ ವಿಷಯದಲ್ಲಿಯೂ ಚೆನ್ನಾಗಿ ಹೊಂದಿಕೆಯಾಗುತ್ತದೆ. ಸಂಪ್ರದಾಯಗಳು ಸುಲಭವಾಗಿ ಅಳಿಯುವುದಿಲ್ಲ ಮತ್ತು ಅವು ಕಾಲಗತಿಯಲ್ಲಿ ಉಳಿದುಬಂದಿವೆ ಎನ್ನುವುದನ್ನು ಇದು ತೋರಿಸಿಕೊಡುತ್ತದೆ. ಮೂಗುಬೊಟ್ಟು, ಕಿವಿಯ ಓಲೆ ಮತ್ತಿತರ ಒಡವೆಗಳ ಬಗ್ಗೆ ತಿಳಿಸುತ್ತ ಬಾರ್ಬೋಸ್ ಹೀಗೆ ಹೇಳುತ್ತಾನೆ; “ಮೂಗಿನ ಹೊಳ್ಳೆಗಳೊಂದರೆ ಪಕ್ಕದಲ್ಲಿ ಅವರೊಂದು ಚಿಕ್ಕ ರಂಧ್ರವನ್ನು ಮಾಡುವರು: ಅದರ ಮೂಲಕ, ಮುತ್ತು, ನೀಲಮಣಿ ಅಥವಾ ಪದ್ಮರಾಗ ಪದಕ ಸಹಿತವಾದ, ನಾಜೂಕಾದ ಚಿನ್ನದ ತಂತಿಯೊಂದನ್ನು ತೂರಿಸುವರು. ಹಾಗೆಯೇ ಕಿವಿಯಲ್ಲಿಯೂ ಅವರು ರಂಧ್ರ ಕೊರೆಸಿಕೊಳ್ಳುವರು ಹಾಗೂ ಅವುಗಳಲ್ಲಿ ಅನೇಕ ಹರಳುಗಳನ್ನು ಕೂರಿಸಿದ ಕಿವಿಯೊಲೆಗಳನ್ನು ಧರಿಸುವರು; ಅವರ ಕೊರಳುಗಳಲ್ಲಿ ಚಿನ್ನದ ಕಂಠಹಾರಗಳನ್ನು ಮತ್ತು ಒಡವೆಗಳನ್ನು ಹಾಗೂ ತುಂಬ ಉತ್ಕೃಷ್ಟವಾದ ಹವಳದ ಮಣಿಗಳನ್ನು ಧರಿಸುವರು; ಚಿನ್ನದ ಮತ್ತು ರತ್ನಾಭರಣಗಳ ಹಾಗೂ ಅನೇಕ ಉತ್ತಮ ಹವಳದ ಮಣಿಗಳ ತೋಳ್ಬಂದಿಗಳನ್ನು ಅವರ ತೋಳುಗಳಿಗೆ ತೊಡಿಸಲಾಗಿರುತ್ತದೆ[56]. ಹೀಗೆ, ಈ ಜನರ ಬಹುಭಾಗ ತುಂಬ ಶ್ರೀಮಂತವಾಗಿದೆ”.

ಪೇಯಿಸ್ ಕೂಡ ವಿಜಯನಗರದ ಸ್ತ್ರೀಯರನ್ನು ಕುರಿತಂತೆ ಪ್ರಶಂಸೆಯ ಮಾತುಗಳ ವಿವರಣೆಯನ್ನು ನೀಡಿದ್ದಾನೆ. "ಅವರು ತುಂಬ ಶ್ರೀಮಂತ ಮತ್ತು ಶ್ರೇಷ್ಠ ಬಟ್ಟೆಬರೆ ಹೊಂದಿರುವರು; ತಲೆಯ ಮೇಲೆ ಅವರು ಎತ್ತರದ ಟೋಪಿಯನ್ನು ಧರಿಸುತ್ತಿದ್ದು ಅದನ್ನು ಅವರು 'ಕೊಲ್ಲಾಯಿ'ಗಳೆಂದು ಕರೆಯುವರು ಹಾಗೂ ಈ ಟೋಪಿಗಳ ಮೇಲೆ ದೊಡ್ಡ ಮುತ್ತುಗಳಿಂದ ಮಾಡಿದ ಹೂವುಗಳನ್ನು ಧರಿಸುವರು; ಕೊರಳಲ್ಲಿ ತುಂಬ ಹೇರಳವಾಗಿ ಪಚ್ಚೆ, ವಜ್ರ, ಮಾಣಿಕ್ಯ ಮತ್ತು ಮುತ್ತು ಜೋಡಿಸಿದ ಕಂಠಾಭರಣಗಳು; ಇದಲ್ಲದೆ ಅನೇಕ ಮುತ್ತಿನ ಹಾರಗಳು ಮತ್ತು ದವಾಲಿಗಾಗಿ ಬೇರೆಯವು; ತೋಳಿನ ಕೆಳಭಾಗದಲ್ಲಿ ಅನೇಕ ಕಡಗಗಳು; ಅರ್ಧಭಾಗ ಬರಿದಾದ ಮೇಲ್ತೋಳಿನ ಮೇಲೆ ಅದೇ ತೆರನ ಅಮೂಲ್ಯ ರತ್ನಗಳುಳ್ಳ ತೋಳ್ಬಂದಿಗಳು; ಸೊಂಟದ ಮೇಲೆ ಬಂಗಾರದ ಮತ್ತು ಬೆಲೆಯುಳ್ಳ ಹರಳುಗಳ ಡಾಬುಗಳು; ಈ ಡಾಬುಗಳು ಒಂದರ ಕಳಗೊಂದರಂತೆ ಅರ್ಧ ತೊಡೆಯವರೆಗೂ ನೇತಾಡುತ್ತವೆ; ಈ ಡಾಬುಗಳಲ್ಲದೆ ಇನ್ನೂ ಅನೇಕ ಆಭರಣಗಳು ಅವರಲ್ಲಿವೆ ಹಾಗೂ ಸುತ್ತ ಮುತ್ತುಗಳ ಹಲವು ಸರಗಳನ್ನು ಧರಿಸುತ್ತಾರೆ. ಅವರು ಮಿಕ್ಕವುಗಳಿಗಿಂತ ಹೆಚ್ಚು ಬೆಲೆಯ ಕಾಲಂದಿಗೆಗಳನ್ನು ಧರಿಸುತ್ತಾರೆ. ಎಂದು ಆತ ಹೇಳುತ್ತಾನೆ. ವಿಜಯನಗರ ದೊರೆಗಳ ಕಾಲದ ರತ್ನಾಭರಣಗಳ ವಿಶದವಾದ ವರ್ಣನೆಯ ಬಗ್ಗೆ ಹೊಯ್ಸಳ ಶಿಲ್ಪಕಲೆಯ ಸ್ತ್ರೀಮೂರ್ತಿಗಳು ಒಂದು ಕಲ್ಪನೆಯನ್ನು ಮೂಡಿಸಬಲ್ಲವು. ಮಹಾಸೇನಾನಿ ಜೈನ ಇರುಗಪ್ಪದಣ್ಣಾಯಕನು ತಮ್ಮ ದೇಶವನ್ನು ಗೆದ್ದಾಗ ಅಲ್ಲಿನ ಸ್ತ್ರೀಯರು ತಮ್ಮ ಒಡವೆ ವಸ್ತ್ರಗಳನ್ನು ಉಪೇಕ್ಷಿಸಿದ ಪಾಡನ್ನು ಇಮ್ಮಡಿ ದೇವರಾಯನ ಕಾಲದ ಶಾಸನವೊಂದು ವಿವರಿಸುತ್ತದೆ. ಕ್ರಿ.ಶ. 1422ರ ತೇದಿಯ

ಈ ಶಾಸನವು ಹೇಳುವುದು ಹೀಗೆ “ಕುಂಡಲಗಳನ್ನು ಮರೆತ ಕಿವಿಗಳಿಂದ, ತಿಲಕ ರಹಿತವಾದ ಹಣೆಗಳಿಂದ, ಓರಣ ಮಾಡದ ಗುಂಗುರುಕೂದಲಿಂದ, ಮುತ್ತಿನಹಾರಗಳ ಸ್ಪರ್ಶವಿಲ್ಲದ ಪಯೋಧರಗಳಿಂದ, ತಾಂಬೂಲದಿಂದ ಉಂಟಾಗುವ ರಾಗದಿಂದ ರಹಿತವಾದ ತೊಂಡೆಯಂಥ ಅಧರಗಳಿಂದ ವೈರಿ ರಾಜರ ಪತ್ನಿಯರು ಮತ್ತೆ ಆತನ ಪರಾಕ್ರಮವನ್ನು ಎಲ್ಲೆಡೆಸ್ಪಷ್ಟವಾಗಿ ತೋರುವಂತೆ ಮಾಡುತ್ತಿದ್ದಾರೆ”[57].

ಬೇರೆ ಬೇರೆ ಸಾಮಾಜಿಕ ಮತ್ತು ಧಾರ್ಮಿಕ ಜನಸಮುದಾಯಗಳಲ್ಲಿ ಉಡಿಗೆ ತೊಡಿಗೆಗಳಿಗೆ ಸಂಬಂಧಿಸಿದಂತೆ ಏಕರೂಪತೆ ಇದ್ದಂತೆ ಕಾಣುವುದಿಲ್ಲ. ಹಾಗಿದ್ದರೂ ರೈತಾಪಿ ಜನ ಮತ್ತು ಕೆಳವರ್ಗದವರಲ್ಲಿ ಉಡಿಗೆತೊಡಿಗೆಯಲ್ಲಿ ಸ್ವಲ್ಪ ಏಕರೂಪತೆ ಇತ್ತು: ಮುಖ್ಯವಾಗಿ ಕನಿಷ್ಠ ಮಿತಿಗನುಗುಣವಾಗಿ ಬಟ್ಟೆಬರೆ ಧರಿಸುತ್ತಿದ್ದರು. ವಿಧೇಶೀ ಪ್ರವಾಸಿಗರು ವೇಷಭೂಷಣಗಳ ಬಗ್ಗೆ ಕೊಡುವ ವಿವರಣೆಯು ಸಾಮಾನ್ಯ ಜನರಿಗಿಂತ ಹೆಚ್ಚಾಗಿ ಸಿರಿವಂತವರ್ಗದವರಿಗೆ ಸಂಬಂಧಿಸುತ್ತದೆ; ಸಾಮಾನ್ಯ ಜನರ ಬಟ್ಟೆಬರೆ ಬಗ್ಗೆ ಈ ಪ್ರವಾಸಿಗರ ಕಥನಗಳಿಂದ ಅಲ್ಲೊಂದು ಇಲ್ಲೊಂದು ತುಣುಕು ಚಿತ್ರಗಳನ್ನು ಹುಡುಕಿಕೊಳ್ಳಬಹುದಷ್ಟೇ. ಅಬ್ದುಲ್ ರಝಾಕ್‌ನು “ಝ್ಯೆತುನ್ (ಸ್ಯಾಟಿನ್) ಬಟ್ಟೆಯ ನಿಲುವಂಗಿ ಧರಿಸಿದ ಹಾಗೂ ತನ್ನ ಕೊರಳ ಸುತ್ತ ರಾಜಶ್ರೇಷ್ಟವಾದ ಅಪ್ಪಟ ಮುತ್ತುಗಳ ಕೊರಳಪಟ್ಟಿಯನ್ನು – ಅದರ ಬೆಲೆಯನ್ನು ರತ್ನಪಡಿ ವ್ಯಾಪಾರಿಗೂ ಲೆಕ್ಕಹಾಕಲು ಕಷ್ಟವಾಗುವುದು – ಹಾಕಿಕೊಂಡಿದ್ದ” ಇಮ್ಮಡಿ ದೇವರಾಯನನ್ನು ನೋಡಿದನು. ಅರಸನು ಚಿನ್ನದ ಗುಲಾಬಿಗಳಿಂದ ಹೆಣೆಯಲಾದ ಉಡುಪನ್ನು ತೊಟ್ಟಿದ್ದನೆಂದು ಹಾಗೂ ತಲೆಯ ಮೇಲೆ ಗ್ಯಾಲಿಸಿಯನ್ ಶಿರಸ್ತ್ರಾಣದ

ಮಾದರಿಯ ಜರತಾರಿ ಟೊಪ್ಪಿಗೆಯೊಂದನ್ನು ಹಾಕಿಕೊಂಡಿದ್ದನೆಂದು ಪೇಯಿಸ್ ತಿಳಿಸುತ್ತಾನೆ[58].

ಸಿರಿವಂತ ಜನರು ಪಾದರಕ್ಷೆಗಳನ್ನು ಬಳಸುತ್ತಿದ್ದರು. ಕ್ರಿ.ಶ. 1375ರ ತೇದಿಯ ಶಾಸನವೊಂದರಲ್ಲಿ ಚಮ್ಮಾರರ ಮೇಲೆ ತೆರಿಗೆ ವಿಧಿಸಿದ ಉಲ್ಲೇಖವೊಂದು ನಮಗೆ ದೊರೆಯುತ್ತದೆ. ಈ ಪಾದರಕ್ಷೆಗಳು ರೋಮನ್ ಚಪ್ಪಲಿಗಳಲ್ಲಿರುವಂತೆಯೇ ಪ್ರಾಚೀನ ರೀತಿಯಲ್ಲಿ ಚೂಪು ತುದಿಗಳನ್ನುಳ್ಳವಾಗಿದ್ದವೆಂದು, ಮತ್ತೆ ಕೆಲವು ಅಟ್ಟೆಗಳನ್ನು ಬಿಟ್ಟು ಬೇರೇನು ಇರದೆ ಮೇಲ್ಭಾಗದಲ್ಲಿ ಕಾಲನ್ನು ಸರಿಯಾಗಿ ಇರಿಸಿಕೊಳ್ಳಲು ಸಹಾಯಕವಾಗುವಂತೆ ಕೆಲವು ಪಟ್ಟಿಗಳನ್ನುಳ್ಳ ಪಾದರಕ್ಷೆಗಳಿದ್ದವೆಂದು ಪೇಯಿಸ್ ಹೇಳುತ್ತಾನೆ. ವಾಸ್ತವವಾಗಿ ಸಿರಿವಂತರಷ್ಟೇ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಿದ್ದದು; "ಅರಸರು ಮತ್ತು ಅಧಿಪರು ಮಳೆ ಬಿಸಿಲುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಛತ್ರಿಗಳನ್ನು ಬಳಸುತ್ತಿದ್ದರು ಹಾಗೂ ಅವನ್ನು ಛತ್ರಧಾರಿಗಳು ಹಿಡಿಯುತ್ತಿದ್ದು, ಅವು ಬಂಗಾರದ ಕುಚ್ಚು ಮತ್ತು ರತ್ನಾಭರಣ ಹಾಗೂ ದೊಡ್ಡ ಮುತ್ತುಗಳ ಸಹಿತವಾಗಿ ರೇಷ್ಮೆಯ ಬಟ್ಟೆಯಲ್ಲಿ ಸೊಗಸಾಗಿ ತಯಾರಾದವಾಗಿದ್ದವು; ಕೆಲಚವನ್ನು ಮಡಚಿ ಮತ್ತು ಬಿಚ್ಚಿ ಮಾಡಬಹುದಿತ್ತು ಹಾಗೂ ಅವುಗಳ ಬೆಲೆಯ ಮುನ್ನೂರು ಅಥವಾ ನಾನೂರು 'ಕ್ರುಸೆಡೊ'ಗಳಾಗುತ್ತಿತ್ತು. ದಾರುಣ ದಾರಿದ್ರ್ಯದಿಂದಾಗಿ ಬಹುಪಾಲು ಸಾಮಾನ್ಯ ಜನರಿಗೆ ಸುಧಾರಣ ಚಪ್ಪಲಿಗಳನ್ನು ಹಾಕಿಕೊಳ್ಳುವುದಾಗಲಿ ಅಥವಾ ಛತ್ರಿಯನ್ನು ಕೊಂಡು ಹಿಡಿದುಕೊಳ್ಳುವುದಾಗಲೀ ಸಾಧ್ಯವಾಗಲಿಲ್ಲ[59].

ಸಾಮಾನ್ಯ ಜನರು ಕೆಳಭಾಗದಲ್ಲಿ ನಡುಪಟ್ಟಿಯಂತೆ ಬಟ್ಟೆ ಧರಿಸುತ್ತಿದ್ದು ಅವರು ಅದನ್ನು ಹಲವು ಮಡಿಕೆಗಳಾಗಿ ತುಂಬ ಬಿಗಿಯಾಗಿ ಕಟ್ಟಿಕೊಳ್ಳುತ್ತಿದ್ದರು ಹಾಗೂ ಹತ್ತಿಯ ಅಥವಾ ರೇಷ್ಮೆಯ ಇಲ್ಲವೇ ಒರಟು ಅಂಗಿಗಳನ್ನು ಹಾಕಿಕೊಳ್ಳುತ್ತಿದ್ದರು. ಅವರು ತೆಲೆಯ ಮೇಲೆ ಪುಟ್ಟ ರುಮಾಲಗಳನ್ನು ಸುತ್ತಿಕೊಂಡರೆ ಕೆಲವರು ರೇಷ್ಮೆಯ ಅಥವಾ ಜರತಾರಿ ಟೊಪ್ಪಿಗೆಗಳನ್ನು ಹಾಕಿಕೊಳ್ಳುತ್ತಿದ್ದರು. ಉಣ್ಣೆಯ ಬಟ್ಟೆಗಳನ್ನು ಅವುಗಳ ಅತಿಶಾಖದಿಂದಾಗಿ ಜನರು ಧರಿಸುತ್ತಿರಲಿಲ್ಲ; ಹೆಚ್ಚಾಗಿ ನಾರುಬಟ್ಟೆಗಳನ್ನು ಧರಿಸುತ್ತಿದ್ದರು. ದೇಶದ ನಿವಾಸಿಗಳೆಲ್ಲ ಅವರು ಬಡವರಾಗಿರಲಿ, ಪೇಟೆಯ ಕರ್ಮಿಗಳು ಕೂಡ ಒಡವೆ ಮತ್ತು ಗಿಲೀಟಿನ ಅಭರಣಗಳನ್ನು ತಮ್ಮ ಕಿವಿಗಳಲ್ಲಿ ಮತ್ತು ಕೊರಳು, ತೋಳು, ಮಣಿಕಟ್ಟು ಮತ್ತು ಬೆರಳುಗಳಲ್ಲಿ ಧರಿಸುತ್ತಿದ್ದರೆಂಬುದನ್ನು ಅಬ್ದುಲ್ ರಝಾಕ್‌ನು ಗಮನಿಸಿದ್ದಾನೆ.

**ಸಂಗಮರ ಕಾಲದ ವಸತಿ:**

ವಿದೇಶೀ ಪ್ರವಾಸಿಗರು ವಿಜಯನಗರಕ್ಕೆ ಭೇಟಿಕೊಟ್ಟು ಅಲ್ಲಿನ ಮಹಾವೈಭವ, ಭವ್ಯ ಕಟ್ಟಡಗಳು ಮತ್ತು ಪೇಟೆಗಳನ್ನು ವರ್ಣಿಸಿದ್ದಾರೆ ಹಾಗೂ ಇಲ್ಲಿನ ಅರಮನೆಯನ್ನು ಯೂರೋಪಿನ ದೊರೆಗಳ ಅರಮನೆಗಳೊಂದಿಗೆ ತುಲನೆ ಮಾಡಿದ್ದಾರೆ. ಮಧ್ಯಕಾಲೀನ ಭಾರತದಲ್ಲಿ ದಕ್ಷಿಣದ ವಿಜಯನಗರವು ನಾಗರಿಕತೆಯ ಹೆಚ್ಚು ಉನ್ನತ ಮಟ್ಟವನ್ನು ತಲುಪಿತ್ತು. ವಿಜಯನಗರ ಪಟ್ಟಣವು ಕ್ರಿ.ಶ. 1336ರಲ್ಲಿ ಸ್ಥಾಪನೆಯಾಗಿ ಕ್ರಿ.ಶ. 1565ರಲ್ಲಿ ಅಳಿದುಹೋಯಿತು. ಸಾಮ್ರಾಜ್ಯದ ಸುಮಾರು ಇನ್ನೂರ ಮೂವತ್ತು ವರ್ಷಗಳ ಕಾಲದ ವಸ್ತುತಃ ಅಸ್ತಿತ್ವದ ಅವಧಿಯ ನಡುವಣ

ಸ್ಥಾನವನ್ನು ಹೊಂದಿದ ಇಮ್ಮಡಿ ದೇವರಾಯನ ಆಳ್ವಿಕೆಯ ಸುಮಾರು ಕಾಲು ಶತಮಾನದಲ್ಲಿ ಆ ನಗರವು ವೈಭವೋನ್ನತಿಯನ್ನು ಹೊಂದಿದ್ದಿರಬೇಕು. ತನ್ನ ಜೀವನ ವಿಧಾನಕ್ಕೆ ಸಂಬಂಧಿಸಿದಂತೆ ವಿಜಯನಗರವು ಉನ್ನೆತ ಗುಣಮಟ್ಟವನ್ನು ಸಾಧಿಸಿದ್ದ ಕಾಲವೆಂದು ನಾವು ಪರಿಗಣಿಸಬಹುದು. ಜನಪದ ಅಥವಾ ಸಾಮಾನ್ಯ ಜನರಿಗೆ ಹೋಲಿಸಿದರೆ ಪೌರ ಅಥವಾ ರಾಜಧಾನಿ ಮತ್ತು ಇತರ ದೊಡ್ಡ ನಗರಗಳಲ್ಲಿ ವಾಸಿಸುತ್ತಿದ್ದ ನಾಗರಿಕರು ಜೀವನದ ಎಲ್ಲ ಅವಶ್ಯಕತೆ ಹಾಗೂ ಸುಖೋಪಭೋಗಗಳೊಂದಿಗೆ ಹೆಚ್ಚು ಸುಖಕರವಾದ ಮನೆಗಳಲ್ಲಿ ವಾಸಿಸುತ್ತಿದ್ದರೆಂದು ಕಾಣುತ್ತದೆ[೬೦].

ನಗರಯೋಜನೆ ಮತ್ತು ಕಟ್ಟಡಗಳು, ದೇವಾಲಯಗಳು ಹಾಗೂ ವಾಸದ ಮನೆಗಳ ನಿರ್ಮಾಣ ಕಾರ್ಯಗಳು ಶಾಸ್ತ್ರ ವಿಧಿಸುವ ನಿಯಮಾನುಸಾರವಾಗಿದ್ದವು. ಸಾಮಾನ್ಯ ಜನರ ಮನೆಗಳು ಚಿಕ್ಕದಾಗಿದ್ದವು ಮತ್ತು ಅವುಗಳ ಸುತ್ತ ತೋಟಗಳಿದ್ದವು. ಅವನ್ನು ಇಟ್ಟಿಗೆ ಮತ್ತು ಸುಟ್ಟ ಹಂಚಿನಿಂದ ಕಟ್ಟುತ್ತಿದ್ದರು. ತಾಳಿಕೋಟೆಯ ಕದನವಾದ ಕೇವಲ 18 ವರ್ಷಗಳ ತರವಾಯ ಈ ಭಾಗಗಳಲ್ಲಿ ಪ್ರವಾಸ ಮಾಡಿದ ಆನ್‌ಸ್ಕಾಟೆನ್ ಎಂಬಾತ ಜನರು ವಾಸಿಸುತ್ತಿದ್ದ ಮನೆಗಳ ವರ್ಣನೆಯನ್ನು ಹೀಗೆ ಮಾಡುತ್ತಾನೆ; "ಅವರು ಹುಲ್ಲಿನ ಪುಟ್ಟ ಮನೆಗಳಲ್ಲಿ ವಾಸಿಸುತ್ತಾರೆ; ಅವುಗಳ ಬಾಗಿಲು ಎಷ್ಟು ಕೆಳಗಿದ್ದವೆಂದರೆ ಜನರು ಒಳ ಹೊರಗೆ ನುಸುಳಿ ಕೊಂಡು ಓಡಾಡಬೇಕು; ಅವರ ಮನೆ ಸಾಮಾನುಗಳೆಂದರೆ ನೆಲದ ಮೇಲೆ ನಿದ್ರಿಸಲೊಂದು ಚಾಪೆ; ತಮ್ಮ ಭತ್ತ ಕುಟ್ಟಿಕೊಳ್ಳಲು ನೆಲದ ಮೇಲೊಂದು ಕುಳಿ; ಒಂದು ಆಶ್ಚರ್ಯವೆಂಬಂತೆ ಅವರು ಬದುಕುತ್ತಾರೆ ಮತ್ತು ಅಷ್ಟೊಂದು

ಸಂಪಾದಿಸುತ್ತಾರೆ". ಇದು ಸ್ಪಷ್ಟವಾಗಿ ಗ್ರಾಮೀಣಪ್ರದೇಶದ ರೈತಾಪಿ ಜನರ ವರ್ಣನೆ. ಜನರಿಗೆ ಮನೆಯ ನಿವೇಶನಗಳು ದೊರಕುತ್ತಿದ್ದವು. ಕ್ರಿ.ಶ. 1421-22ರ ತೇದಿಯ ಶಾಸನವೊಂದು ಖಾಸಾಗಿ ವ್ಯಕ್ತಿಯೊಬ್ಬನನಿಗೆ ಒಂದು ಮನೆಯ ನಿವೇಶನವನ್ನು ದಾನವಿತ್ತ ವಿಷಯವನ್ನು ತಿಳಿಸುತ್ತದೆ. ಸಂಗಮ ವಂಶದ ರಾಜನಾದ ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ಜಯಗೊಂಡ ಚೋಳಮಂಡಲದ ಎಂಟು ಗೃಹನಿವೇಶನಗಳು ಮದನ್ವಕ್ಕಂನ 'ಸ್ಥಾನತ್ತಾರ'ರಿಗೆ ನಷ್ಟವಾಯಿತೆಂದು ಘೋಷಿತವಾಗಿ, ಅದೇ ಊರಿನ ಕೈಕ್ಕೋಲರ್ ಬೀದಿಯಲ್ಲಿ ಹೊಸ ನವೇಶನಗಳನ್ನು ಅವರಿಗೆ ನೀಡಲಾಯಿತು. ಮಧ್ಯಮ ವರ್ಗದ ಜನರ ಮನೆಗಳನ್ನು ಅನೇಕ ಬಯಲು ಸ್ಥಳ ಸಹಿತವಾದ ಉದ್ದನೆಯ ಬೀದಿಗಳಲ್ಲಿ ವೃತ್ತಿಗಳಿಗನುಸಾರವಾಗಿ ಕಟ್ಟಲಾಯಿತು. ಈ ರೀತಿಯಲ್ಲಿ ಕೈಗೆಲಸಗಾರರಿಗೆ ಇರುವ ಬೀದಿಯನ್ನು 'ಕಮ್ಮಾಲತೇರು' ಎಂದು ಹಾಗೂ ನೇಯ್ಗೆಯವರಿಗೆ ಇರುವ ಬೀದಿಯನ್ನು 'ಕೈಕೋಲರ್ ತೇರು' ಎಂದು ಕರೆಯಲಾಯಿತು. ಮನೆಗಳು ಮಣ್ಣುನೆಲವನ್ನು ಸಗಣಿಯಿಂದ ಸಾರಿಸಲಾಗಿರುತ್ತಿತ್ತು[61].

ವಿಜಯನಗರ ಪಟ್ಟಣದಲ್ಲಿನ ಅರಸನ ಅರಮನೆ ಗಣ್ಯರ ಭವನಗಳು ಅನೇಕ ಸಂದರ್ಶಕರ ಗಮನ ಸೆಳೆದಿವೆ. ಅಬ್ದುಲ್ ರಝಾಕ್‌ನ ಪ್ರಕಾರ ನಗರವು ಏಳು ಗೋಡೆಗಳಿಂದ ಕೂಡಿದ್ದು, ಏಳನೆಯ ಕೋಟೆಯಲ್ಲಿ ಅರಸನ ಅರಮನೆಯು ಇತ್ತು. ಪೇಯಿಸ್‌ನ ಪ್ರಕಾರ ಅರಸನ ಅರಮನೆಯು ತುಂಬ ಭದ್ರವಾದ ಗೋಡೆಯಿಂದ ಸುತ್ತುವರಿಯಲ್ಪಟ್ಟಿತ್ತು ಹಾಗೂ ಲಿಸ್ಬನ್ನಿನ ಎಲ್ಲ ದುರ್ಗಗಳಿಗಿಂತ ಹೆಚ್ಚು ಸ್ಥಳವನ್ನು ಹೊಂದಿತ್ತು. ಅರಮನೆಯೊಳಗೆ ಎಡಗಡೆಯಲ್ಲಿ ಒಂದರ ಮೇಲೊಂದರಂತೆ ಎರಡು

ಕೋಣೆಗಳಿದ್ದವೆಂದು ಪೇಯಿಸ್ ಮುಂದುವರಿದು ತಿಳಿಸುತ್ತಾನೆ. ಕೆಳಗಿನದು ನೆಲದ ಮಟ್ಟಕಿಂತ ತಗ್ಗಾಗಿದ್ದು ಗಿಲೀಟು ಮಾಡಿದ ತಾಮ್ರದ ಹೊದಿಕೆಯುಳ್ಳ ಎರಡು ಪುಟ್ಟ ಮೆಟ್ಟಲುಗಳಿಂದ ಕೂಡಿತ್ತು ಮತ್ತು ಅಲ್ಲಿಂದ ಮೇಲಿನವರೆಗೆ ಪೂರ್ತಿಯಾಗಿ ಬಂಗಾರದ ಪದರು ಕೂಡಿಸಲಾಗಿದೆ. ಬೆತ್ತದ ಕೆಲಸದಿಂದ ಮಾಡಿದ ಮತ್ತು ಅಮೂಲ್ಯ ರತ್ನಾಭರಣಗಳಿಂದ ಅಲಂಕರಿಸಿದ ನಾಲ್ಕು ಪಾರ್ಶ್ವದ ದ್ವಾರಮಂಟಪವೊಂದನ್ನು ಅದು ಹೊಂದಿತ್ತು. ಆ ಕೋಣೆಯಲ್ಲಿ ಒಂದು ಮಂಚವಿತ್ತು. “ಅದು ದ್ವಾರಮಂಟಪಕ್ಕೆ ಸದೃಶವಾದ ಕಾಲುಗಳನ್ನು ಹೊಂದಿದ್ದು ಅಡ್ಡಪಟ್ಟಿಗಳನ್ನು ಬಂಗಾರದಿಂದ ಹೊದಿಸಲಾಗಿತ್ತು ಹಾಗೂ ಅದರ ಮೇಲೆ ಕಪ್ಪು ಸ್ಯಾಟಿನ್ ಬಟ್ಟೆಯ ಮತ್ತೆಯಿತ್ತು”. ಅರಮನೆಯು ಗೋಡೆಗಳ ಮೇಲೆ ಚಿತ್ರಗಳನ್ನು ಹೊಂದಿದ್ದರೆ ಅದರ ಹಿಂದಿದ್ದ ಕೋಣೆಯು ಕೆತ್ತನೆಗಳುಳ್ಳ ಕಲ್ಲಿನ ಮತ್ತು ದಂತದ ಕಂಬಗಳನ್ನೊಳಗೊಂಡ ನರ್ತನ ಶಾಲೆಯಾಗಿತ್ತು. ಅರಸನ ಅರಮನೆಯಲ್ಲಿ ಅನೇಕ ಕೋಣೆಗಳಿದ್ದವು; ಅವುಗಳಲ್ಲೊಂದರ ಮುಂದೆ “ಪ್ರೇಮಿೀಳೆಯರಂತೆ ಬಿಲ್ಲು ಹಿಡಿದ ಸ್ತ್ರೀಯರ ಆಕೃತಿಗಳು” ಇದ್ದವು[62].

ಶ್ರೀಮಂತರ ಮನೆಗಳು ಅರಸನ ಅರಮನೆಯಂಥ ಮಾದರಿಯ ಭವನಗಳಾಗಿದ್ದವು. ಅವು ಅವರಣಗೋಡೆಗಳಿಂದ ಕೂಡಿದ್ದವು. ದಳವಾಯಿಗಳ, ಮತ್ತಿತರ ಸಿರಿವಂತರ ಹಾಗೂ ಪ್ರತಿಷ್ಠಿತರ ಮನೆಗಳು ನೋಡಲು ಸುಂದರವಾಗಿರುವ ಆಕೃತಿ ಮತ್ತು ಅಲಂಕಾರಗಳನ್ನು ಹೊಂದಿದ್ದವೆಂದು ಪೇಯಿಸ್ ತಿಳಿಸುತ್ತಾನೆ. ನೃತ್ಯಾಂಗನೆಯರು ಮನೆಗಳಲ್ಲೂ ವಾಸಿಸುತ್ತಿದ್ದುದುಂಟು. ನಗರವು ಎಷ್ಟು ವಿಶಾಲವಾಗಿತ್ತೆಂದರೆ ಅಲ್ಲಿ “ಒಂದು ನೂರು ಸಾವಿರ” ವಾಸದ ಮನೆಗಳಿದ್ದವು.

ಸಿರಿವಂತರ ಮನೆಗಳಲ್ಲಿ ಮೇಲ್ಹಾವಣಿಗೆ ಕಬ್ಬಿಣ ಅಥವಾ ಇತರ ಲೋಹದ ಸರಪಳಿಗಳಿಂದ ನೇತುಹಾಕಿದ ತೂಗುಮಂಚಗಳಿದ್ದರೆ, ಸಂದರ್ಶಕರ ಉಪಯೋಗಕ್ಕಾಗಿ ಕೆಲವು ಹೆಚ್ಚಿನ ಹಾಸಿಗೆಗಳು ಮತ್ತು ಚಾಪೆಗಳು ಇರುತ್ತಿದ್ದವು. ಹೊಸ ಮನೆಗೆ ವಾಸಿಸಲು ಹೋಗುವಾಗ 'ಗೃಹಪ್ರವೇಶ'ವೆಂಬ ಹೆಸರಿನ ಸಮಾರಂಭವೊಂದು ನಡೆಯುತ್ತಿತ್ತೆಂದು ಇಮ್ಮಡಿ ದೇವರಾಯನ ಬಂಧುವೊಬ್ಬನು ತನ್ನ ಹೊಸ ಮನೆಯ ಪ್ರವೇಶದ ಧಾರ್ಮಿಕ ಸಮಾರಂಭ ಹಾಗೂ ತತ್ಸಂಬಂಧದ ಔತಣಕ್ಕೆ ಬರಬೇಕೆಂದು ಅರಸನನ್ನು ಆಹ್ವಾನಿಸಿದ ಆತನ ಉದ್ದೇಶ ಅರಸನನ್ನು ಕೊಲ್ಲುವುದಾಗಿದ್ದರೂ ಘಟನೆಯಿಂದ ಸ್ಪಷ್ಟಪಡುತ್ತದೆ.

**ಆಹಾರಾಭ್ಯಾಸಗಳು**:

ಆಹಾರಕ್ಕೆ ಸಂಬಂಧಿಸಿದಂತೆ ಸಾಂಪ್ರದಾಯಿಕ ನೀತಿ ನಿಯಮಗಳಿದ್ದವಾದರೂ ವಿಜಯನಗರದಲ್ಲಿ ಸರ್ವಸಾಮಾನ್ಯವಾಗಿದ್ದ ಆಹಾರದ ಸ್ವರೂಪವು ಭೌತಿಕ ಪರಿಸರ, ಜನರ ಅಭ್ಯಾಸ ಮತ್ತು ಪದ್ಧತಿಗಳ ಪರಿಣಾಮವಾಗಿತ್ತು. ಬ್ರಾಹ್ಮಣ, ವೈಶ್ಯ, ಜೈನ ಮತ್ತು ಲಿಂಗಾಯತರನ್ನು ಹೊರತುಪಡಿಸಿ ರಾಜಕುಟುಂಬದವರೂ ಸೇರಿದಂತೆ ಇತರರು ಮಾಂಸ, ಮೀನು ಮತ್ತು ಹಕ್ಕಿಯ ಮಾಂಸಾಹಾರ ಸೇವನೆಯ ಅಭ್ಯಾಸ ಮಾಡಿಕೊಂಡಿದ್ದರು. ಇಮ್ಮಡಿ ದೇವರಾಯನ ಆಸ್ಥಾನದಲ್ಲಿ ಅಬ್ದುಲ್ ರಝಾಕ್‌ನು ತಂಗಿದ್ದಾಗ ಆತನಿಗೆ ಪ್ರತಿದಿನ ಎರಡು ಕುರಿ, ನಾಲ್ಕು ಜೊತೆ ಕೋಳಿ, ಐದು ಮಣ ಅಕ್ಕಿ, ಒಂದು ಮಣ ಬೆಣ್ಣೆ, ಒಂದು ಮಣ ಸಕ್ಕರೆ ಮತ್ತು ಎರಡು ಚಿನ್ನದ ವರಾಹಗಳನ್ನು ಸರಬರಾಜು ಮಾಡುವ

ವ್ಯವಸ್ಥೆಯಾಗಿತ್ತು. ಸಾಮ್ರಾಜ್ಯದಲ್ಲಿ ಆಹಾರ ಪದಾರ್ಥಗಳು ಸಮೃದ್ಧವಾಗಿದ್ದವು. ಈ ರಾಜ್ಯಗಳು ಒಳ್ಳೆಯ ಸಾಗುವಳಿ ಮಾಡಿದವು ಹಾಗೂ ಬಹಳ ಫಲವತ್ತಾದವು; ಮತ್ತು ಆಕಳು, ಎಮ್ಮೆ ಹಾಗೂ ಕುರಿ ಮುಂತಾದ ಜಾನುವಾರುಗಳು ವಿಪುಲತೆಯಿಂದ ಕೂಡಿವೆ. ಹಾಗೂ ಬೆಟ್ಟಗುಡ್ಡಗಳಿಗೆ ಸೇರಿದ ಮತ್ತು ಮನೆಯಲ್ಲಿ ಸಾಕಿದ ಎರಡೂ ಬಗೆಯ ಪಕ್ಷಿಗಳು ಕೂಡ, ಮತ್ತು ನಮ್ಮ ಪ್ರಾಂತದಲ್ಲಿನಕ್ಕಿಂತ ಹೆಚ್ಚು ವೈವಿಧ್ಯವಾಗಿ ನಮ್ಮ ಭಾಗದಲ್ಲಿ ಬಿತ್ತದ ಭತ್ತ ಮತ್ತು ಮುಸುಕಿನ ಜೋಳ, ಧಾನ್ಯಗಳು, ಅವರೆ ಮತ್ತು ಇತರ ವಿಧದ ಬೆಳೆಗಳು ಹೊಲಗಳಲ್ಲಿ ಸಮೃದ್ಧವಾಗಿವೆ; ಅಪರಿಮಿತ ಹತ್ತಿ ಬಹಳ ಗೋಧಿ ಇವೆ ಎಂದು ಪೇಯಿಸ್ ತಿಳಿಸುತ್ತಾನೆ. ನಗರದಲ್ಲಿ ವಾರದ ಸಂತೆಗಳು ನಡೆಯುತ್ತಿದ್ದವು[63]. ಜೀವಂತ ಪಕ್ಷಿಗಳನ್ನು ಮಾರಲಾಗುತ್ತಿತ್ತು ಹಾಗೂ ನದಿಗಳಿಂದ ತಂದ ಮೀನುಗಳು ಬೃಹತ್ ಪ್ರಮಾಣದಲ್ಲಿದ್ದವು. ದ್ರಾಕ್ಷಿ, ಕಿತ್ತಳೆ, ನಿಂಬೆ, ದಾಳಿಂಬೆ, ಹಲಸು ಮತ್ತು ಮಾವಿನಹಣ್ಣುಗಳು ಪೇಟೆಯಲ್ಲಿ ಸಮೃದ್ಧವಾಗಿ ತುಂಬಿ ತುಳುಕುತ್ತಿದ್ದವು; ಎಲ್ಲವೂ ತುಂಬ ಅಗ್ಗವಾಗಿದ್ದವು. ಜನರಿಗೆ ಊಟದ ತರುವಾಯ ತಾಂಬೂಲ ಹಾಕಿಕೊಳ್ಳುವ ಅಭ್ಯಾಸವಿತ್ತು. ಅರಸ ಮತ್ತು ಗಣ್ಯರು “ತಮ್ಮ ದೈವಪೂಜೆಗೆ ವಿರುದ್ಧವಾದುದರಿಂದ ನಿಷೇಧಿತವಾದ ಗೋಮಾಂಸವನ್ನು ಮಾತ್ರ ಬಿಟ್ಟು ಇತರ ಮಾಂಸ ಮತ್ತು ಮೀನುಗಳನ್ನು ತಿನ್ನುತ್ತಿದ್ದರು” ಎಂದು ಬಾರ್ಬೋಸ್ ಹೇಳುತ್ತಾನೆ.

ಬ್ರಾಹ್ಮಣರು ಎಂದೂ ಯಾವುದೇ ಜೀವಿಯನ್ನು ಸಾಯಿಸಲಿಲ್ಲ ಅಥವಾ ತಿನ್ನಲಿಲ್ಲ. ಅವರ ಆಹಾರವು ಜೇನುತುಪ್ಪ, ಬೆಣ್ಣೆ, ಅಕ್ಕಿ, ಸಕ್ಕರೆ ಮತ್ತು ಹಾಲುಗಳನ್ನೊಳಗೊಂಡಿದ್ದುದನ್ನು ಹಾಗೂ ಜಂಗಮರು ಕೂಡ ಮಾಂಸವನ್ನಾಗಲಿ

ಅಥವಾ ಮೀನನ್ನಾಗಲಿ ತಿನ್ನುತ್ತಿರಲಿಲ್ಲ ವೆನ್ನುವುದನ್ನು ಬಾರ್ಬೋಸ್‌ನೂ ಗಮನಿಸಿದ್ದಾನೆ. ಜನರು ಆಹಾರ ತಯಾರಿಸಲು "ಬಿತ್ತಿದ ಬೀಜಗಳಿಂದ" ತೆಗೆದ ಎಣ್ಣೆಯನ್ನು ಧಾರಾಳವಾಗಿ ಬಳಸುತ್ತಿದ್ದರು. ರಾಗಿ, ಅಕ್ಕಿ ಮತ್ತು ಜೋಳಗಳು ಜನರ ಮುಖ್ಯ ಆಹಾರವಾಗಿದ್ದರೆ, ಮಹಮ್ಮದೀಯ ನಿವಾಸಿಗಳು ಹೆಚ್ಚು ಗೋದಿಯನ್ನು ಬಳಸುತ್ತಿದ್ದರು[64].

**ಸಂಸ್ಕಾರಗಳು:**

ಜನಜೀವನವು ಸಾಂಪ್ರದಾಯಿಕವಾಗಿ ಧಾರ್ಮಿಕ ಅಚಾರ ವಿಚಾರಗಳಿಗೆ ಸಂಬಂಧಪಟ್ಟತ್ತು ಹಾಗೂ ದೇವರಿಗೆ ಪ್ರಾರ್ಥನೆ ಸಲ್ಲಿಸದೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ನಾಮಕರಣ, ಮದುವೆ ಮತ್ತು ಶವಸಂಸ್ಕಾರಗಳು ಧರ್ಮಕ್ಕೆ ಸಂಬಂಧಿಸಿದುದಾಗಿದ್ದು, ಅವಕ್ಕೆ ಧಾರ್ಮಿಕ ಕ್ರಮಾಚರಣೆಗಳನ್ನು ನಡೆಸಲಾಗುತ್ತಿತ್ತು.

1. **ನಾಮಕರಣ:**

ಅರಸ ಹಾಗೂ ಆತನ ಸಾಮಂತರಿಗೆ ತಮ್ಮ ಮಕ್ಕಳ ನಾಮಕರಣ ಸಮಾರಂಭದ ಕಾಲದಲ್ಲಿ ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ದಾನಧರ್ಮಾದಿಗಳನ್ನು ಮಾಡುವುದು ಪದ್ಧತಿಯಾಗಿತ್ತು. ಈ ರೀತಿಯಲ್ಲಿ ಇಮ್ಮಡಿ ದೇವರಾಯನ ಮಗನಾದ ಮಲ್ಲಿಕಾರ್ಜುನರಾಯನು ತನ್ನ ಮಗನಾದ ನಾಲ್ಕನೆಯ ದೇವರಾಯನ ನಾಮಕರಣೋತ್ಸವ ಕಾಲದಲ್ಲಿ ಸ್ನಾನ ಮಾಡಿ ಗ್ರಾಮವೊಂದನ್ನು ದತ್ತಿ ನೀಡಲು ಸಿದ್ಧನಾದುದನ್ನು ಕಾಣುತ್ತೇವೆ.

ಸಾಮ್ರಾಜ್ಯದ ಎಲ್ಲ ಪ್ರಜೆಗಳಲ್ಲಿಯೂ ಹೊಸದಾಗಿ ಹುಟ್ಟಿದ ಮಗುವಿಗೆ ನಾಮಕರಣ ಮಾಡುವ ಪದ್ಧತಿ ಆಚರಣೆಯಲ್ಲಿತ್ತು. ಅರಸ ಹಾಗೂ ಪ್ರಾಂತಗಳನ್ನು ಆಳುತ್ತಿದ್ದ ಶ್ರೀಮಂತರಲ್ಲಿ ಜನ್ಮದಿನದ ಉತ್ಸವ ಸಮಾರಂಭಗಳು ಸಾಮಾನ್ಯವಗಿದ್ದವು. ವಿಜಯನಗರ ಸಾಮ್ರಾಟರಿಗೆ ಅವರ ಅಜ್ಜಂದಿರ ಹೆಸರಿಡುತ್ತದ್ದರು; ಈ ಪದ್ಧತಿಯನ್ನು ಹೆಚ್ಚು ವಿಶೇಷವಾಗಿ ಸಂಗಮ ವಂಶದಲ್ಲಿಯೇ ಗಮನಿಸಬಹುದು[65].

**2. ಮದುವೆ:**

ಜನರು ಸಾಂಪ್ರದಾಯಿಕ ವಿವಾಹಪದ್ಧತಿಗಳನ್ನು ಅನುಸರಿಸುತ್ತಿದ್ದರು; ಅವರ ಬಗ್ಗೆ ಬಹಳಷ್ಟನ್ನು ಅವು ಹೇಳುತ್ತವೆ. ರಾಜಕುಟುಂಬದ ಮದುವೆಗಳು ಬೃಹತ್ಪ್ರಮಾಣದವು ಮತ್ತು ಅತಿ ವೆಚ್ಚದವಾಗಿದ್ದವು. ತಮ್ಮ ಬೆಳೆಯುತ್ತಿರುವ ಮಕ್ಕಳ ಮದುವೆ ಬಗ್ಗೆ ತಂದೆ-ತಾಯಿಗಳ ಚಿಂತೆ ತೀವ್ರವಾಗಿತ್ತು ಹಾಗೂ ಕಠಿಣ ವಿವಾಹ ರೂಢಿಸಂಪ್ರದಾಯಗಳು ಜನರ ಜೀವನವನ್ನೇ ಕಿತ್ತು ತಿನ್ನುತ್ತಿದ್ದವು. ಕರ್ನಾಟಕದ ಕ್ರಿ.ಶ. 1407ರ ಶಾಸನವೊಂದು ಕೆಲವು ವಿವಾಹ ರೂಢಿಸಂಪ್ರದಾಯಗಳ ಸುಳಿವು ನೀಡುತ್ತದೆ ಮತ್ತು ಮದುವೆಯನ್ನು ಮಾಡಿದವರು ಸಾಗರೆಯ ಶಂಕರೇಶ್ವರ ದೇವಾಲಯದ ಅರ್ಚಕನಿಗೆ ದೇವರ ಖರ್ಚು ವೆಚ್ಚಗಳಗಾಗಿ ನಿಗದಿತ ಮೊತ್ತವನ್ನು ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ. ಪ್ರವಾಸಿಗರು ದಾಖಲಿಸಿರುವಂತೆ ಬಾಲ್ಯ ವಿವಾಹಗಳು ಸಾಮಾನ್ಯವಾಗಿದ್ದವು. ವರದಕ್ಷಿಣೆ ಪದ್ಧತಿಯು ಪ್ರಧಾನವಾಗಿತ್ತು ಮತ್ತು ಹಿಂದೂ ಕುಟುಂಬಗಳ ಐಹಿಕ ಸಂಪತ್ಸಮೃದ್ಧಿಯ ಬಗ್ಗೆ ತಿಳಿಸುವಂತಿತ್ತು.

ಕೆಲವೊಮ್ಮೆ ಗ್ರಾಮಗಳನ್ನು ಬಳುವಳಿಯಾಗಿ ನೀಡಿದುದುಂಟು. ಆಳುವ ಪ್ರಭು ಬೊಮ್ಮಿಯಕ್ಕ ಹೆಗ್ಗಡತಿಯ ಮಗನು ಕ್ರಿ.ಶ. 1424ರಲ್ಲಿ ಒಂದು ಮದುವೆಯ ಕಾರಣದಿಂದಾಗಿ ಭೂಮಿ ಮಾರಾಟಮಾಡಿದನು. ದಕ್ಷಿಣೆಯ ಪದ್ಧತಿಯನ್ನು ವಿರೋಧಿಸುವ ಉದ್ದೇಶದಿಂದ ಮದುವೆಗೆ ಸಂಬಂಧಿಸಿದ 'ಧರ್ಮ'ದ ಬಗ್ಗೆ ಬ್ರಾಹ್ಮಣರು ಶಕವರ್ಷ 1347ರಲ್ಲಿ (ಕ್ರಿ.ಶ. 1424-25) ಒಪ್ಪಂದವೊಂದನ್ನು ಮಾಡಿಕೊಂಡರು. ಅಲ್ಲಿಂದ ಮುಂದೆ ತಮ್ಮ ಪಂಗಡದ ಮದುವೆಗಳನ್ನು ತಂದೆಯು ತನ್ನ ಮಗಳನ್ನು ವರನಿಗೆ ಉಚಿತವಾಗಿ ಕೊಡುವ ಪದ್ಧತಿಯಾದ ಕನ್ಯಾದಾನದಿಂದ ಮಾತ್ರವೇ ಕೊನೆಗೊಳ್ಳಬೇಕೆಂದು ಹಾಗೂ ಹಣ ಪಡೆಯುವ ತಂದೆ ಮತ್ತು ಹಣ ನೀಡುವ ವರ ಇಬ್ಬರೂ ಅರಸನ ಶಿಕ್ಷೆಗೊಳಪಡಬೇಕು ಮತ್ತು ಸ್ವಜಾತಿ ಬಹಿಷ್ಕೃತರಾಗಬೇಕೆಂದು ಅವರು ನಿರ್ಣಯಿಸಿದರು. ಬ್ರಾಹ್ಮಣರ ನಿರ್ಣಯಕ್ಕ ನುಗುಣವಾಗಿ ಇಮ್ಮಡಿ ದೇವರಾಯನು ಕ್ರಿ.ಶ. 1432ರಲ್ಲಿ ಬಲ್ಲಾಳಪುರದ ಎಲ್ಲ ವರ್ಗಗಳ ಮದುವೆ ತೆರಿಗೆಗಳನ್ನು, ಪ್ರಾಯಶಃ ಬಳುವಳಿ ಪದ್ಧತಿಯನ್ನು ತಡೆಯಲೆಂದಷ್ಟೇ, ಮನ್ನಾ ಮಾಡಿದ. ತಮ್ಮ ಗ್ರಾಮದ ಭೂಮಿಗಳನ್ನು ಹೊರಗಿನವರಿಗೆ ಮಾರಾಟ ಮಾಡುವುದನ್ನು ಅಥವಾ ವರದಕ್ಷಿಣೆಯಾಗಿ ನೀಡುವುದನ್ನು ಕೂಡ ನಿಷೇಧಿಸುವ ಒಪ್ಪಂದವೊಂದು ಮಾಂಗಡಿನ ಗ್ರಾಮಸ್ಥರೊಳಗೆ ಏರ್ಪಟ್ಟ ವಿಷಯವನ್ನು ಶಾಸನವೊಂದು ದಾಖಲಿಸುತ್ತದೆ[66].

**ಶವಸಂಸ್ಕಾರಗಳು ಸತಿ ಅಥವಾ ಆತ್ಮಾ ಹುತಿ ಇತ್ಯಾದಿ:**

ವಿಜಯನಗರದ ಹಿಂದೂಗಳ ಮತ್ತು ಜೈನರ ಮರಣಸಂಸ್ಕಾರಗಳು ಜನನ ಮತ್ತು ವಿವಾಹಗಳಿಗೆ ಸಂಬಂಧಿಸಿದ ಸಂಸ್ಕಾರಗಳಷ್ಟೇ ಮುಖ್ಯವಾದುದಾಗಿದ್ದವು. ತಮಿಳು ದೇಶದಲ್ಲಿ ಮರಣ ಸಂಸ್ಕಾರಗಳನ್ನು ಸುಧೀರ್ಘ ರೀತಿಯಲ್ಲಿ ನಡಸಲಾಗುತ್ತಿತ್ತು. ಮೃತ ಮಾತಾಪಿತರ ಮರಣ ವಾರ್ಷಿಕ ದಿನದಂದು ಅರಸರು ಮತ್ತು ಇತರ ಸಿರಿವಂತ ಜನರು ಭೂಮಿದಾನ ಮಾಡುವುದು ವಾಡಿಕೆಯಾಗಿತ್ತು. ಉದಾಹರಣೆಗೆ, ಕ್ರಿ.ಶ. 1411ರಲ್ಲಿ ಒಂದನೆಯ ದೇವರಾಯನ ಮಗನಾದ ರಾಜಕುಮಾರ ವೀರ ಮಲ್ಲಣ್ಣ ಅಥವಾ ಮಲ್ಲಪ್ಪನು ತನ್ನ ತಾಯಿ ಮಲ್ಲವ್ವೆಯ ಸ್ಮರಣಾರ್ಥ ಗ್ರಾಮವೊಂದನ್ನು ದಾನವಿತ್ತನು. ಕ್ರಿ.ಶ. 1422ರಲ್ಲಿ ಒಂದನೆಯ ದೇವರಾಯನು ಮೃತನಾದಾಗ ಆತನ ಮಗನಾದ ರಾಜಕುಮಾರ ಹರಿಹರನು ದೇವರಾಯ ಮಹಾರಾಯನಿಗೆ ಪುಣ್ಯಲೋಕ ಪ್ರಾಪ್ತಿಯಾಗಬೇಕೆಂದು ಬ್ರಾಹ್ಮಣರಿಗೆ ಗ್ರಾಮವೊಂದನ್ನು ಅಗ್ರಹಾರವಾಗಿ ದಾನ ನೀಡಿದನು.

ಮೃತರನ್ನು ಅವರವರ ಜಾತಿಪದ್ಧತಿಗಳ ಪ್ರಕಾರ ಹೂಳುತ್ತಿದ್ದರು ಇಲ್ಲವೇ ಸುಡುತ್ತಿದ್ದರು. ಪತಿಯು ಮರಣಹೊಂದಿದಾಗ ಪತ್ನಿಯನ್ನು ಆತನೊಡನೆ ಹೂಳುತ್ತಿದ್ದರು ಇಲ್ಲವೇ ಪತಿಯ ಚಿತೆಯಲ್ಲಿ ಸಜೀವವಾಗಿ ಸುಡುತ್ತಿದ್ದರು. ಬಾರ್ಬೋಸ್ ನ್ಯೂನಿಜ್ ಹಾಗೂ ಸೀಸರ್ ಫ್ರೆಡ್ರಿಕ್ ಮೃತ ಪತಿಯೊಂದಿಗೆ ಪತ್ನಿಯನ್ನು ಜೀವಂತವಾಗಿ ಸುಡುತ್ತಿದ್ದ ಬಗ್ಗೆ ಸ್ಪಷ್ಟ ಚಿತ್ರಣವನ್ನು ಕೊಡುತ್ತಾರೆ. ಜೈನರಲ್ಲಿ ಸಲ್ಲೇಖನ ಪದ್ಧತಿ ಇತ್ತು; ಅದರ ಪ್ರಕಾರ ಸ್ತ್ರೀಯು ಉಪವಾಸವ್ರತವನ್ನಾಚರಿಸಿ ಮರಣಹೊಂದುತ್ತಿದ್ದಳು. ಸಲ್ಲೇಖ ವ್ರತವನ್ನಾಚರಿಸಿ ಸ್ವ ಇಚ್ಚೆಯಿಂದ ಮರಣಹೊಂದುತ್ತಿದ್ದ ಪದ್ಧತಿಯು ಪುರುಷರಲ್ಲಿಯೂ ಇತ್ತು; ಕ್ರಿಶ.

1423ರಲ್ಲಿ ಜೈನ ಮಾಣಿಕಸೇನನು ಮೂವತ್ತುಮೂರು ದಿನಗಳ ಕಾಲ ನಿರಾಹಾರದಿಂದ ವ್ರತವನ್ನಾಚರಿಸಿ ಜಿನಪಾದವನ್ನು ಸೇರಿದನು[67].

'ಸತಿ' ಅಥವಾ 'ಸಹಗಮನ'ವು ಹಿಂದೂ ವಿಧವೆಯರು ಪತಿಯ ಚಿತೆಯ ಮೇಲೆ ಉರಿದು ಹೋಗಲು ಅನುಮತಿ ನೀಡಿದ ಒಂದು ಸಾಮಾಜಿಕ ಸಂಸ್ಥೆಯಾಗಿತ್ತು. ಶಾಸನಗಳಿಂದ ಹಾಗೆಯೇ ವಿದೇಶೀ ಪ್ರವಾಸಿಗರ ಕಥನಗಳಿಂದ ಈ ಪದ್ಧತಿಯ ಬಗ್ಗೆ ನಮಗೆ ಸಾಕ್ಷ್ಯಾಧಾರಗಳು ದೊರೆಯುತ್ತವೆ, ವಿಜಯನಗರದಲ್ಲಿ 'ಸತಿ' ಪದ್ಧತಿಯ ಅತ್ಯಂತ ಪ್ರಾಚೀನ ಉದಾಹರಣೆಯು ಕ್ರಿ.ಶ. 1354ರ ಶಾಸನವೊಂದರಲ್ಲಿ ದಾಖಲಾಗಿದೆ. ಹರಿಯಪ್ಪ ಒಡೆಯರ ಆಳ್ವಿಕೆಯ ಕಾಲದಲ್ಲಿ ಮಾಳಗೌಡನು ಸ್ವರ್ಗಸ್ಥನಾದಾಗ ಆತನ ಪತ್ನಿ ಚೆನ್ನಕ್ಕ 'ಸಹಗಮನ' ಆಚರಿಸಿ ಸ್ವರ್ಗ ಸೇರಿದಳೆಂದು ಅದರಲ್ಲಿ ದಾಖಲಿಸಿದೆ.

ಡ್ಯುರೇಟ್ ಬಾರ್ಬೋಸ್ ಸತಿಪದ್ಧತಿಯ ಬಗ್ಗೆ ಸ್ಪಷ್ಟ ಚಿತ್ರವೊಂದನ್ನು ನೀಡುತ್ತಾನೆ. ಆತನ ಪ್ರಕಾರ ಬಡವಳಾದ ಮತ್ತು ಕೆಳ ಜಾತಿಗೆ ಸೇರಿದ ಸ್ತ್ರೀಯು ತನ್ನ ಪತಿಯ ಮೃತನಾದಾಗ ಸ್ಮಶಾನಕ್ಕೆ ಹೋಗುವಳು; ಅಲ್ಲಿ ದೊಡ್ಡ ಹಳ್ಳವೊಂದರಲ್ಲಿ ಸೌದೆರಾಶಿಯೊಂದು ಉರಿಯುತ್ತಿರುವುದು. ಅಲ್ಲಿ ಅಕೆಯ ಪತಿಯ ದೇಹವನ್ನು ಇರಿಸಿ, ಅದು ಉರಿಯ ತೊಡಗಿದಾಗ ಆಕೆಯು ಸ್ವಇಚ್ಛೆಯಿಂದ

ಉರಿಯ ಮಧ್ಯಕ್ಕೆ ಹಾರಿಕೊಳ್ಳುವಳು; ಅಲ್ಲಿ ಎರಡೂ ದೇಹಗಳು ಬೂದಿಯಾಗುವುವು. ಆದರೆ ಉನ್ನತ ವರ್ಗದ ಸ್ತ್ರೀಯು ತಕ್ಷಣವೇ ತನ್ನನ್ನು ಸುಟ್ಟು ಕೊಳ್ಳುವುದಿಲ್ಲ; ಆಕೆಯು ಜ್ವಾಲೆಗೆ ಹಾರಿಕೊಳ್ಳುವ ಮೊದಲು ಕೆಲವು ವಿಧಿಗಳನ್ನು ಆಚರಿಸುವಳು. ಸ್ವಲ್ಪ ಕಾಲವನ್ನು ಆಕೆಯು ಉತ್ಸವದ ಸಂಗೀತದಲ್ಲಿ ಹಾಡುವುದು,

ನರ್ತಿಸುವುದು ಮತ್ತು ಔತಣವೇರ್ಪಡಿಸುವುದು ಇವುಗಳಲ್ಲಿ ಕಳೆಯುವಳು; ತರುವಾಯ ತಾನು ಹೊಂದಿದ್ದ ಎಲ್ಲ ಸಿರಿವಂತ ವೇಷಭೂಷಣಗಳಿಂದ ಅಲಂಕೃತಳಾಗುವಳು ಮತ್ತು ಉಳಿದ ಆಸ್ತಿಪಾಸ್ತಿಯನ್ನು ಮಕ್ಕಳು, ಬಂಧು ಮತ್ತು ಮಿತ್ರರಿಗೆ ಹಂಚುವಳು. ಇದಾದ ನಂತರ, ಅಚ್ಚ ಬೂದು ಅಥವಾ ಬಿಳಿ ಬಣ್ಣದ ಕುದುರೆಯನ್ನು ಏರಿ ಊರಿನ ಬೀದಿಗಳಲ್ಲಿ ಸಾಗಿ ಸ್ಮಶಾನವಿರುವ ಘಾಟನ್ನು ತಲುಪುವಳು: ಅಲ್ಲಿ ಅಕೆಗಾಗಿ ಬೆಂಕಿ ಉರಿಯುತ್ತಿರುವುದು. ಅಲ್ಲಿ ಅಕೆಯು ನಡುವನ್ನು ಮುಚ್ಚಿದ ಪುಟ್ಟ ತುಂಡೊಂದನ್ನು ಬಿಟ್ಟು ತನ್ನ ಉಳಿದೆಲ್ಲ ಬಟ್ಟೆಗಳನ್ನು ತಗೆಯುವಳು ಹಾಗೂ ಅಲ್ಲಿ ಸೇರಿದ ಜನರನ್ನು ಉದ್ದೇಶಿಸಿ ತಾನು ಗಂಡನ ಮೇಲಣ ಪ್ರೀತಿಯಿಂದಾಗಿ ಆತ್ಮಾಹುತಿ ಮಾಡಿಕೊಳ್ಳುತ್ತಿರುವುದಾಗಿ ಹಾಗೆ ಮಾಡಿಕೊಳ್ಳಬೇಕಾದ ಕಟ್ಟುಪಾಡಿರದಿದ್ದರೂ ಸಂಕ್ಷಿಪ್ತಭಾಷಣ ಮಾಡುವಳು[68]. ಆ ಮೇಲೆ ಆಕೆ ತನ್ನ ತಲೆಯ ಮೇಲೆ ಎಣ್ಣೆ ಸುರಿದುಕೊಂಡು ಉರಿಗೆ ಹಾರಿ ಸುಟ್ಟು ಹೋಗುವಳು.

ಈ ದಹನ ಪದ್ಧತಿಯ ಬಗ್ಗೆ ನ್ಯೂನಿಜ್ ಮತ್ತಷ್ಟು ವಿವರಗಳನ್ನು ನೀಡುತ್ತಾನೆ: ಪತಿಯ ಶವಕ್ಕೆ ಬೆಂಕಿ ಹಚ್ಚಿದ ತರುವಾಯ ಶಾಸ್ತ್ರನಿಯಮಾನುಸಾರ ಕೆಲವು ಸಂಸ್ಕಾರಗಳನ್ನು ಬ್ರಾಹ್ಮಣನೊಬ್ಬ ನಡೆಸುತ್ತಿದ್ದನು. ಅದಾದ ಮೇಲೆ ಅಕೆ ತನ್ನೆಲ್ಲ ಒಡವೆ ವಸ್ತ್ರಗಳನ್ನು ನೆಂಟರಿಷ್ಟರಿಗೆ ಹಂಚಿಬಿಟ್ಟು ಹಳದಿ ಬಣ್ಣದ ನಿಲುವಂಗಿಯನ್ನು ಧರಿಸುತ್ತಿದ್ದಳು. ಆ ಮೇಲೆ ಆಕೆಯು ಬೆಂಕಿಯ ಕುಣಿ ಇದ್ದಲ್ಲಿಗೆ ಹಾಡುತ್ತ, ಓಡುತ್ತ ಹೋಗಿ ಅದಕ್ಕೆ ಮೂರು ಸುತ್ತು-ಸುತ್ತಿ ಬಂದು, ಕುಣಿಯ ಬಳಿ ಎತ್ತರವಾಗಿ ಮಾಡಿದ ಕೆಲವು ಮೆಟ್ಟಿಲುಗಳನ್ನು ಏರುತ್ತಿದ್ದಳು ಹಾಗೂ ಬೆಂಕಿಯು ತನಗೆ

ಕಾಣದಂತೆ ತಡೆಯುವ ಚಾಪೆಯೊಂದನ್ನು ಕೈಯಲ್ಲಿ ಹಿಡಿದು ಅವುಗಳ ಮೇಲ್ಭಾಗದಲ್ಲಿ ನಿಲ್ಲುತ್ತಿದ್ದಳು. ಅಲ್ಲಿ ಸೇರಿದ ಜನರು ಅಕ್ಕಿ ಕಟ್ಟಿದ ಅರಿವೆಯನ್ನು ಮತ್ತು ವೀಳೆಯದೆಲೆ ಇರುವ ಮತ್ತೊಂದನ್ನು, ತನ್ನನ್ನು ಸಿಂಗರಿಸಿಕೊಳ್ಳಲು ಇವೆಲ್ಲ ಬೇಕೆಂದು ಹೇಳುತ್ತ ಬೆಂಕಿಯಲ್ಲಿ ಎಸೆಯುತ್ತಿದ್ದರು. ಕೊನೆಯಲ್ಲಿ ಆಕೆಯು ಎಲ್ಲರಿಂದಲೂ ಬೀಳ್ಕೊಳ್ಳುತ್ತಿದ್ದಳು ಹಾಗೂ ತಲೆಯ ಮೇಲೆ ಎಣ್ಣೆಯ ಪಾತ್ರೆಯೊಂದನ್ನು ಇಟ್ಟುಕೊಂಡು ದುಡುಮ್ಮನೆ ಬೆಂಕಿಗೆ ಹಾರಿಬೀಳುತ್ತಿದ್ದಳು[69].

ಸತಿ ಅಥವಾ ಆತ್ಮಾಹುತಿಯ ಆಚರಣೆಯು ವಿಜಯನಗರದ ಕಾಲದಲ್ಲಿ ಬಹಳ ಜನಪ್ರಿಯ ಮತ್ತು ಹೆಚ್ಚು ವ್ಯಾಪಕವಾಗಿದ್ದರೂ ಅದು ವಿಧವೆಯರ ಮೇಲೆ ಬಲವಂತವಾಗಿ ಹೊರಿಸಿದುದೆಂದು ತೋರುವುದಿಲ್ಲ. ಈ ಆಚರಣೆಯ ಪ್ರತ್ಯಕ್ಷ ಸಾಕ್ಷಿಗಳಾದ ಪ್ರವಾಸಿಗರ ಪ್ರಕಾರ ಅದು ಯಾವಾಗಲೂ ಕಡ್ಡಾಯವಾಗಿರಲಿಲ್ಲ. ಬ್ರಾಹ್ಮಣರಲ್ಲಿ ವಿಧವೆಯರು ಕೇಶಮುಂಡನವನ್ನು ಮಾಡಿಸಿಕೊಳ್ಳಲೇಬೇಕಾಗಿತ್ತು ಹಾಗೂ ಎಲ್ಲ ಸಾಮಾಜಿಕ ಸಮಾರಂಭಗಳಿಂದ ಅವರು ದೂರವಿರುತ್ತಿದ್ದರು. ತಮ್ಮ ಮೃತ ಪತಿಯೊಡನೆ ಸ್ತ್ರೀಯರ ದಹನವು ಸ್ವ ಇಚ್ಛೆಯಿಂದ ನಡೆಯುವುದಾಗಿತ್ತು. ಬಾರ್ಬೋಸ್‌ನ ಪ್ರಕಾರ ಗಂಭೀರ ಸಮಾರಂಭದಲ್ಲಿ ಪ್ರಸನ್ನ ಮುಖಭಾವದ ಸ್ತ್ರೀಯರು ತಮಗೆ 'ಇಷ್ಟಬಂದಂತೆ ವರ್ತಿಸುವ' ಸ್ವಾತಂತ್ರ್ಯವಿದ್ದರೂ ತಾವು ತಮ್ಮ ಗಂಡಂದಿರ ಮೇಲಣ ಪ್ರೀತಿಯಿಂದಾಗಿ ತಮ್ಮನ್ನು ಸುಟ್ಟುಕೊಳ್ಳುತ್ತಿರುವ ವಿಷಯವನ್ನು ಬಹಿರಂಗಪಡಿಸುತ್ತಿದ್ದರು.

ಸಹಗಮನ ಪದ್ಧತಿಯು ಆಚರಣೆಯಲ್ಲಿದ್ದ ಜನವರ್ಗಗಳೆಂದರೆ ಸಾಮಾನ್ಯವಾಗಿ ಸಾಮ್ರಾಜ್ಯದ ಅರಸ, ಮಹಾಪ್ರಭುಗಳು, ವೀರರು ಹಾಗೂ

ಹೋರಾಡುವ ಜನರನ್ನೊಳ್ಳಗೊಂಡ ಕುಲೀನವರ್ಗ. 'ಗೌಡ' ಮತ್ತು 'ನಾಯಕ'ರಲ್ಲಿ ಕೂಡ ಈ ಪದ್ಧತಿಯು ಆಚರಣೆಯಲ್ಲಿತ್ತು. ಬ್ರಾಹ್ಮಣ ವಿಧವೆಯರೂ ಸತಿಯನ್ನಾಚರಿಸಿದುದುಂಟು, ಬಾರ್ಬೋಸ್‌ನ ಪ್ರಕಾರ ಅರಸನು ಮೃತನಾದಾಗ ಆತನೊಡನೆ ನಾನೂರು ಐನೂರು ಸ್ತ್ರೀಯರು ತಮ್ಮನ್ನು ದಹಿಸಿಕೊಳ್ಳುತ್ತಿದ್ದರು. ಅರಸನು ಮೃತನಾದಾಗ ಆತನ ನಿಷ್ಠ ಅನುಯಾಯಿಗಳು ತಮ್ಮ ಜೀವತ್ಯಾಗಮಾಡುತ್ತಿದ್ದ ನಿದರ್ಶನಗಳು ಕೂಡ ಇವೇ. ಈ ರೀತಿಯಲ್ಲಿ ಇಮ್ಮಡಿ ದೇವರಾಯನು ಮರಣಹೊಂದಿದಾಗ ಚಂದ್ರಗುತ್ತಿಯ ಸೆಟ್ಟಿಗಳು ಆತ್ಮಾಹುತಿ ಮಾಡಿಕೊಂಡ ವಿಷಯ ನಮಗೆ ತಿಳಿದುಬರುತ್ತದೆ[70].

ಕ್ರಿ.ಶ. 1429ರಲ್ಲಿ ಮಾದಿಗನು ಸ್ವರ್ಗಸ್ಥನಾದಾಗ ಆತನ ಪತ್ನಿ ಕೂಡ ಮೃತಳಾದಳು. ಕ್ರಿ.ಶ. 1431ರಲ್ಲಿ ಬೊಮ್ಮಗೌಡನು ಮಡಿದಾಗ ಆತನ ಹೆಂಡತಿಯು ಆತನ ಚಿತೆಯನ್ನು ಹೊಕ್ಕು ಮರಣ ಹೊಂದಿದಳು. ಕ್ರಿ.ಶ. 1424ರಲ್ಲಿ ಗೋವೆ-ಗುತ್ತಿ ರಾಜ್ಯದ ಎಡೆನಾಡು ಎಪ್ಪತ್ತರ ಭೈರಪ್ಪಗೌಡನು ತನ್ನ ಹೆಂಡತಿಯೊಡನೆ ವೈಕುಂಠಪ್ರಾಪ್ತನಾದನು. ಕ್ರಿ.ಶ. 1430ರಲ್ಲಿ ಹರಿಗೆನಾಯಕನ ಮಗನಾದ ಜಂಬೆನಾಯಕನು ಹೋರಾಟವೊಂದರಲ್ಲಿ ಸತ್ತಾಗ ಆತನೊಡನೆ ಆತನ ಪತ್ನಿಯರಾದ ಕಾಮವ್ವನಾಯಕ್ತಿ ಮತ್ತು ಲಕ್ಕವ್ವನಾಯಕ್ತಿಯರು ಮರಣಹೊಂದಿದರು. ಕ್ರಿ.ಶ. 1445ರಲ್ಲಿ ರಾಮಗೌಡನ ಮಗನಾದ ಭೈರವಗೌಡನು ಮೃತನಾದಾಗ ಆತನ ಸತಿ ಭೈರಿಗೌಡ್ತಿಯು ಸಹಗಮನವನ್ನು ಆಚರಿಸಿ ಆತನೊಡನೆ ಒಂದುಗೂಡಿದಳು. ಕ್ರಿ.ಶ. 1426ರಲ್ಲಿ ಕಪ್ಪರಹಳ್ಳಿಯ ಕದನದಲ್ಲಿ ನಾಚಯ್ಯನು ನಿಧನವಾದಾಗ ಆತನ ಪತ್ನಿ ಬಿರಬ್ಬೆಯು ಚಿತೆ ಏರಿದಳು; ಆಕೆಗಾಗಿ ಜಕ್ಕೋಜನು

ಮಹಾಸತಿ ಕಲ್ಲನ್ನು ನಿಲ್ಲಿಸಿದನು. ಕ್ರಿ.ಶ. 1427ರಲ್ಲಿ ಕಿರ್ತಿಗೌಡನು ಕದನವೊಂದರಲ್ಲಿ ಮರಣಹೊಂದಿದಾಗ ಆತನ ಪತ್ನಿಯು ಸತಿಯಾಚರಿಸಿದಳು. ಕ್ರಿ.ಶ. 1432ರಲ್ಲಿ ಕುಂಬತಿ ರಾಣಿಯ ನಾಯಕನು ಮೃತನಾದ ಆತನ ಹೆಂಡತಿ ಚೌಡನಾಯಕಿಯು ಸಹಗಮನ ಮಾಡಿದಳು. ಕ್ರಿ.ಶ. 1437ರಲ್ಲಿ ಹೇಮವಳ್ಳಿ ಬೊಮ್ಮನಾಯಕನು ಮರಣಹೊಂದಿದ ಹಾಗೂ ಆತನ ಹೆಂಡತಿ ಕಾಮವೆ ನಾಯಕ್ತಿಯು ಮಹಾಸತಿಯಾದಳು. ಸಮಾರು ಕ್ರಿ.ಶ. 1442ರಲ್ಲಿ ಹರೂರಿನ ಅಮ್ಮಗೌಡ ತನ್ನ ಹೆಂಡತಿಯೊಡನೆ ಮರಣವನ್ನೈದಿದನು. ಕ್ರಿ.ಶ. 1445ರಲ್ಲಿ ಬೊಮ್ಮರಸಗೌಡನು ಮೃತನಾದಾಗ, 'ಭೂತಳದೊಳಗುಳ್ಳ ಯುವತಿಯ ಶಿರೋಮಣಿ' ಎನಿಸಿದ ಆತನ ಪತ್ನಿಯು ಮಹಾದಾಸೆಯಿಂದ ಸಹಗಮನವನ್ನಾಚರಿಸಿದಳು ಮತ್ತು ಅವರಿಬ್ಬರೂ ಒಂದಾಗಿ ಶಿವಪಾದವನ್ನು ಸೇರಿದರು.

ಆತ್ಮಾಹುತಿಯನ್ನು ಆಚರಿಸುವ ವಿಧವೆಯು ಎಡಗೈಯಲ್ಲಿ ಕನ್ನಡಿ ಮತ್ತು ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು, ಕುದುರೆಯನ್ನೇರಿ ಸುಡುಗಾಡಿಗೆ ಮೆರವಣಿಗೆಯಲ್ಲಿ ಸಾಗುತ್ತಿದ್ದದನ್ನು ವಿದೇಶಿ ಪ್ರವಾಸಿಗರು ಗಮನಿಸಿದ್ದಾರೆ. ಮಾಸ್ತಿಕಲ್ಲುಗಳು ಮೇಲೆತ್ತಿದ ಕೈಯ ಚಿತ್ರವನ್ನು ಹೊಂದಿರುತ್ತವೆ. "ಈ ಮಾಸ್ತಿಕಲ್ಲು ಕೂಡ ಒಂದು ಕಲ್ಲಿನ ಹಲಗೆಯಿಂದ ಕೂಡಿದ್ದು ಅದರ ಮೇಲೆ ಕಂಬ ಅಥವಾ ಸ್ತಂಭವೊಂದರ ಶಿಲ್ಪವಿದ್ದು, ಅದರ ಮಧ್ಯಭಾಗವು ಚಾಚಿರುವ ಹಾಗೆ ಇರುತ್ತದೆ; ಸಹಜ ಗಾತ್ರದ ಅಥವಾ ಇನ್ನೂ ದೊಡ್ಡದಾದ ಮಾನವ ತೋಳೊಂದನ್ನು ಅಲ್ಲಿ ಉಬ್ಬುಗೆತ್ತನೆಯಲ್ಲಿ ಪ್ರತಿನಿಧಿಸಲಾಗಿರುತ್ತದೆ; ಬೆರಳುಗಳನ್ನು ಹಿಗ್ಗಿಸಿದಂತೆ ಕೈ ನೇರವಾಗಿ ಮೇಲೆತ್ತಿರುವಂತೆ ಇರುತ್ತದೆ; ಹೆಬ್ಬೆರಳು ಮತ್ತು ತೋರುಬೆರಳುಗಳ

ನಡುವಣ ಖಾಲಿ ಜಾಗದಲ್ಲಿ ಕೆಲವೊಮ್ಮೆ ನಿಂಬೆಹಣ್ಣೊಂದನ್ನು ಬಿಡಿಸಿರುವುದುಂಟು[71]. ಈ ಎದ್ದು ಕಾಣುವ ಚಿಹ್ನೆಯ ಕೆಳಗಡೆ ಅನೇಕ ಸಂದರ್ಭಗಳಲ್ಲಿ ಪುರುಷನ ಅಥವಾ ಸ್ತ್ರೀಯ ಕಿರುಶಿಲ್ಪದ ಪ್ರಾತಿನಿಧ್ಯವಿರುತ್ತದೆ. ಕೆಲವೊಮ್ಮೆ ಪುರುಷ ಕುಳಿತ ಭಂಗಿಯಲ್ಲಿ ಮತ್ತು ಆತನ ಸುತ್ತ ಸ್ತ್ರೀ ನರ್ತಿಸುತ್ತಿರುವಂತೆ ಹಾಗೂ ಇತರ ರೀತಿಗಳಲ್ಲಿ ಚಿತ್ರಿಸಿರುವುದುಂಟು. ನಾನು ಗಮನಿಸಿರುವ ಹಾಗೆ ಈ ಕಲ್ಲುಗಳು ಯಾವುದೇ ಶಾಸನವನ್ನು ಎಂದೂ ಹೊಂದಿರುವುದಿಲ್ಲ" ಎಂದು ರೈಸ್ ತಿಳಿಸುತ್ತಾರೆ. ಪತಿನಿಷ್ಠ ಪತ್ನಿಯ ಆತ್ಮಾಹುತಿಯನ್ನು ಸಾರುವ ಸ್ಮಾರಕ ಶಿಲೆ ಅಥವಾ ಸತಿಕಲ್ಲು ಸಾಮಾನ್ಯವಾಗಿ ಎರಡು ಪಟ್ಟಿಕೆಗಳನ್ನು ಹೊಂದಿರುತ್ತದೆ. ಕೆಳಗಣ ಪಟ್ಟಿಯು ಪತಿಯು ಒಬ್ಬ ಅಥವಾ ಇಬ್ಬರು ಪತಿಯರೊಡನೆ ಇರುವುದನ್ನು ನಿರೂಪಿಸುತ್ತದೆ ಹಾಗೂ ಮೇಲಿನ ಪಟ್ಟಿಯಲ್ಲಿ ಶಿವ-ವಿಷ್ಣು ಚಿಹ್ನೆಗಳಾದ ಲಿಂಗ ಅಥವಾ ಶಂಖವನ್ನು ಕಾಣಬಹುದು; ಅದರ ಪಕ್ಕದಲ್ಲಿ ಪತ್ನಿ ಅಥವಾ ಪತಿಯರೊಡನೆ ಇರುವ ಪುರುಷ ಶಿಲ್ಪವು ಅವರೆಲ್ಲರೂ ಸ್ವರ್ಗವನ್ನು ಸೇರಿದುದನ್ನು ತೋರಿಸುತ್ತದೆ. ಸತಿಕಲ್ಲಿನ ಮೇಲೆರುವ ಎತ್ತಿದ ಕೈಯ ಚಿತ್ರದ ಬಗ್ಗೆ ರೈಸ್ ಅದು 'ಮದನ'ನ ಎತ್ತಿದ ಕೈಯನ್ನು ಪ್ರತಿನಿಧಿಸುತ್ತದೆಂದು ಮತ್ತು ಅದನ್ನು ಮದನ ಕೈ ಎಂದು ಕರೆಯಲಾಗುತ್ತದೆಂದು ತಿಳಿಸುತ್ತಾರೆ. ಮದನ ಭಾರತೀಯ ಕಾಮದೇವ ಮತ್ತು ಮದನ ಕೈಯು ವಿಧವೆಯು ತನ್ನ ಪತಿಯೊಡನೆ ತನ್ನನ್ನು ದಹಿಸಿಕೊಳ್ಳಲು ಪ್ರಚೋದಿಸಿದ ಪ್ರೀತಿ ಅಥವಾ ಕಾಮವನ್ನು ಸೂಚಿಸುತ್ತದೆ[72].

ತಮ್ಮ ಗ್ರಾಮಗಳ ಮೇಲೆ ಬಿದ್ದ ಆಕ್ರಮಣಕಾರರ ಅಥವಾ ದರೋಡೆಗಾರರ ವಿರುದ್ಧ ಹೋರಾಡುವ ಅಥವಾ ಗ್ರಾಮ ರಕ್ಷಿಸುವ ಕಾರ್ಯದಲ್ಲಿ ನಿರತರಾಗಿ ಜೀವತೆತ್ತ

ವೀರರ ಗೌರವಾರ್ಥ ನಿಲ್ಲಿಸಿದ. ಕಲ್ಲುಗಳೇ ವೀರಗಲ್ಲುಗಳು. ಕ್ರಿ.ಶ. 1432ರಲ್ಲಿ ಬೊಮ್ಮರಸ ಹೆಗ್ಗಡೆಯ ಮಗನಾದ ಪುಟ್ಟ ಹೆಗ್ಗಡೆಯು ಸಾತಳಿಗೆ ನಾಡಿನ ಕೊಳವಳ್ಳಿಯಲ್ಲಿ ದಾಳ ಮಾಡಿದ ಸೈನ್ಯದ ವಿರುದ್ಧ ಹೋರಾಡಿದ ಹಾಗೂ ಉಂಟಾದ ಕದನದಲ್ಲಿ ಆತ 'ಅಂಬುಗೂಡಾಗಿ' ಮರಣಹೊಂದಿದ. ಕ್ರಿ.ಶ. 1441ರಲ್ಲಿ ಎಳವ ಮಾಲಗನೆಂಬಾತನು ಕೆಲವು ಪ್ರಬಲ ಶತ್ರುಗಳನ್ನು ಇರಿದು ಸ್ವರ್ಗಸ್ಥನಾದನು. ಕ್ರಿ.ಶ. 1422ರಲ್ಲಿ ವಿರುಪಣ್ಣ ಒಡೆಯನ ಮೇಲೆ ಹಾಡುವಳ್ಳಿಯ ಮಹಾಮಂಡಲೇಶ್ವರ ಸಂಗಿರಾಯನು ದಾಳ ಮಾಡಿದಾಗ ಉಂಟಾದ ಹೋರಾಟದಲ್ಲಿ ಕೋಟೆಯಣ್ಣನು ಮರಣಹೊಂದಿದನು. ಆತನಿಗೆ ಮಾಬಣ್ಣನಾಯಕ ಮತ್ತು ಬಂಕಿನಾಯಕರು ವೀರಗಲ್ಲನ್ನು ನಿಲ್ಲಿಸಿದರು. ಯಿಸರಾಚಾರಿಯ ಮಗನಾದ ಮಾಣಿಯಾಚಾರಿಯು ವೀರಗಲ್ಲಿನ ಶಿಲ್ಪ. ಕ್ರಿ.ಶ. 1427ರಲ್ಲಿ ಕೋಟೇಶ್ವರನಾಯಕನು ಕಾಸರಗೋಡಿನಲ್ಲಿ ಕಾದು ಸತ್ತುಬಿದ್ದಾಗ, ಆತನ ತಮ್ಮನು ಆತನ ಅಂತ್ಯಕ್ರಿಯಗಳನ್ನು ಮಾಡಿ ಆತನ ಸಾಹಸಕಾರ್ಯದ ಸ್ಮರಣಾರ್ಥವಾಗಿ ವೀರಗಲ್ಲನ್ನು ನಿಲ್ಲಿಸಿದನು. ಕ್ರಿ.ಶ. 1427ರಲ್ಲಿ ಕಾಯ್ಕಿಣಿಯ ಸಮೀಪದ ಕೋಟದ ಎಲ್ಲೆಯ ಬಳ ಸಂಭವಿಸಿದ ಕದನವೊಂದರಲ್ಲಿ ಹಳವಾಣಿಯ ಬೊಮ್ಮನಾಯಕನ ಮಗ ಜೋಗನಾಯಕನು ಹೋರಾಡಿ ಮಡಿದನು. ಆ ವೀರನ ಸೋದರರಾದ ಕೇಶವನಾಯಕ ಮತ್ತು ಮಲುನಾಯಕರು ಆತನ ನೆನಪಿಗಾಗಿ ಒಂದು ವೀರಗಲ್ಲನ್ನು ನಿಲ್ಲಿಸಿದರು. ಕ್ರಿ.ಶ. 1437ರಲ್ಲಿ ವೀರನಾಗಣ್ಣನು ಕಾದಾಟವೊಂದರಲ್ಲಿ ಸತ್ತು ವೀರಸ್ವರ್ಗ ಸೇರಿದ ಮತ್ತು ಆತನ ಜ್ಞಾಪಕಾರ್ಥ ವೀರಗಲ್ಲೊಂದನ್ನು ನಿಲ್ಲಿಸಲಾಯಿತು. ಕೆಳನಾಡಿನ ಮಳಲೂರ ಪಟ್ಟಣದ ಮಾಯಿದೇವನ ಮಗ ಮಾಯಿತಮ್ಮನು ಶಿವರಾತ್ರಿಯಂದು

ಉಪವಾಸವ್ರತವನ್ನು ಮಾಡುತ್ತಿದ್ದಾಗ ಕಳ್ಳರು ದೇವಾಲಯವನ್ನು ಮುತ್ತಿದರು. ಮಾಯಿತಮ್ಮನು ಕಳ್ಳರ ಮೇಲೆ ಬಿದ್ದು ಹೋರಾಡಿದ ಹಾಗೂ ಗಾಯಗೊಂಡ ಆತ ಕ್ರಿ.ಶ. 1432ರಲ್ಲಿ ಸ್ವರ್ಗಸ್ಥನಾದ. ಕೆಳಲೆನಾಡಿನ ಮಳಲೂರ ಪಟ್ಟಣದ ದೊಡ್ಡ ಶಟ್ಟಿಯ ಮಗನಾದ ತಿರುಮಲಯ್ಯನು ಕ್ರಿ.ಶ. 1437ರಲ್ಲಿ ಹೊಂಗನೂರ ದಾಳಿಯಲ್ಲಿ ಹೋರಾಡಿ ಮಡಿದನು. ಆತನ ಅಣ್ಣನು ವೀರಗಲ್ಲನ್ನು ನಿಲ್ಲಿಸಿದನು[73].

**ಕ್ರೀಡೆ–ವಿನೋದಗಳು:**

ಸಾಮ್ರಾಜ್ಯದ ಸ್ಥಾಪನೆಯಿಂದ ಅದರ ಪತನದವರೆಗೂ ಸುಮಾರು ಮುನ್ನೂರು ವರ್ಷಗಳ ಕಾಲ ವಿಜಯನಗರ ಪಟ್ಟಣವು ಸಂಸ್ಕೃತಿ ಮತ್ತು ಕಲೆಗಳ ಕೇಂದ್ರವಾಗಿತ್ತು. ಹಂಪೆಯಲ್ಲಿನ ಕಟ್ಟಡಗಳ ಮೇಲಿರುವ ಉಬ್ಬು ಚಿತ್ರಗಳು ನೃತ್ಯ ಮತ್ತು ಸಂಗೀತಗಳಿಗೆ ಸಂಬಂಧಿಸಿದ ಮೂರ್ತಿಗಳನ್ನು ತೋರುತ್ತವೆ, ನೃತ್ಯ ಮತ್ತು ಸಂಗೀತ ಪ್ರಾಚೀನ ಕಲೆಗಳು ಮತ್ತು ಸ್ತ್ರೀಯರಿಗೆ ಅವು ಮಹಾಸಾಧನೆಗಳೆಂದು ಅವನ್ನು ಪರಿಗಣಿಸಲಾಗುತ್ತಿತ್ತು. ದೇವಾಲಯಗಳ ನೃತ್ಯಾಂಗನೆಯರು ಹಾಗೂ ಅರಮನೆಯ ಆಸ್ಥಾನದ ವೃತ್ತಿನಿರತ ನರ್ತಕಿಯರು ಈ ಕಲೆಗಳ ಉತ್ತಮ ಪ್ರತಿನಿಧಿಗಳಾಗಿದ್ದರು. ನೃತ್ಯಾಂಗನೆಯರ ಸೌಂದರ್ಯ ಮತ್ತು ಅವರ ನೃತ್ಯಗತಿಯ ಲಾವಣ್ಯಚಾತುರ್ಯಗಳಿಂದ ಅಬ್ದುಲ್ ರಝಾಕ್‌ನು ಆಶ್ಚರ್ಯಚಕಿತನಾಗಿದ್ದನು. ಪೇಯಿಸ್ ತಾನು 'ದಾರ್ಚಾ' ಎಂದು ಕರೆದ ಪಟ್ಟಣದಲ್ಲಿ "ಬ್ರಾಹ್ಮಣರು ದೇವಾಲಯದಲ್ಲಿ ದೇವರ ಮೂರ್ತಿಗೆ ನೈವೇದ್ಯ ಮಾಡುತ್ತಿದ್ದುದನ್ನು ಗಮನಿಸಿದ್ದಾನೆ; ದೇವರನ್ನೆ ಪೂಜಿಸುವಾಗ ಆ ದೇವಾಲಯಕ್ಕೆ ಸೇರಿದ ಸ್ತ್ರೀಯರು ನರ್ತಿಸುತ್ತಾರೆ

ಮತ್ತು ಆತನಿಗೆ ಆಹಾರವನ್ನು ಮತ್ತು ಇತರ ಆವಶ್ಯಕವಾದುದೆಲ್ಲವನ್ನು ನೀಡುತ್ತಾರೆ; ಈ ಸ್ತ್ರೀಯರಿಗೆ ಜನಿಸಿದ ಎಲ್ಲ ಹುಡುಗಿಯರೂ ದೇವಾಲಯಕ್ಕೆ ಸೇರುತ್ತಾರೆ". "ಪ್ರತಿ ಶನಿವಾರ ನರ್ತಕಿಯರು ಅರಮನೆಗೆ ಹೋಗಿ ಅರಮನೆಯ ಒಳಗಡೆ ಇರುವ ರಾಜನ ವಿಗ್ರಹದ ಮುಂದೆ ನೃತ್ಯಮಾಡಬೇಕು ಮತ್ತು ಭಾವಭಂಗಿ ತೋರಬೇಕು" ಎಂದೂ ನ್ಯೂನಿಜ್ ಹೇಳುತ್ತಾನೆ. ಪೇಯಿಸ್‌ನ ಪ್ರಕಾರ ಅರಮನೆಯ ಕುಟುಂಬದ ಸ್ತ್ರೀಯರಿಗಾಗಿಯೇ ನರ್ತನಶಾಲೆಯೊಂದಿತ್ತು; ಅಲ್ಲಿಗೆ ಅರಸನು ತನ್ನ ಸ್ತ್ರೀಯರನ್ನು ನೃತ್ಯ ಕಲಿಯಲು ಕಳುಹಿಸಿಕೊಡುತ್ತಿದ್ದನು. ಈ ಹಜಾರದಲ್ಲಿ ಪಟ್ಟಿಕೆಗಳಿದ್ದು, ಪ್ರತಿಯೊಂದು ಪಟ್ಟಿಕೆಯೂ ನರ್ತನಾಂತ್ಯದಲ್ಲಿನ ಸರಿಯಾದ ದೇಹಭಂಗಿಯನ್ನು ಹೊಂದಿತ್ತು; "ಸ್ತ್ರೀಯರಿಗೆ ಕಲಿಸಲೆಂದು ಹೀಗೆ ಮಾಡಿದೆ; ನರ್ತನಾಂತ್ಯದಲ್ಲಿ ತಾವು ಯಾವ ಭಂಗಿಯಲ್ಲಿ ಉಳಿಯಬೇಕೆಂಬುದು ಮರೆತುಹೋದಾಗ ಅವರು ಆ ನರ್ತನದ ಅಂತ್ಯದ ಭಂಗಿ ಇರುವ ಫಲಕವನ್ನು ನೋಡಬಹುದು. ಅದರಿಂದ ತಾವು ಏನು ಮಾಡಬೇಕೆನ್ನುವುದನ್ನು ಅವರು ಲಕ್ಷ್ಯದಲ್ಲಿಡುತ್ತಾರೆ". ಈ ಅರಮನೆಯ ನಾಟ್ಯದ ಹಜಾರವು ಕರ್ನಾಟಕದೇಶದಲ್ಲಿ 'ಪಟ್ಟದ ನಾಟಕ ಶಾಲೆ' ಎಂದು ಪರಿಚಿತವಾಗಿತ್ತು[74].

ಪುರುಷ ಮತ್ತು ಸ್ತ್ರೀಯರ ಜನಪ್ರಿಯ ಕ್ರೀಡೆಗಳಲ್ಲಿ ಕೋಲಾಟ, ಬೇಟೆ ಮತ್ತು ಕುಸ್ತಿ ಸೇರಿದ್ದವು. ಮಧ್ಯಮಶ್ರೇಣಿಯವರಲ್ಲಿ ದ್ವಂದ್ವಯುದ್ಧವು ಸಾಮಾನ್ಯವಾಗಿತ್ತು. "ಸ್ತ್ರೀ ಪ್ರೇಮದಿಂದಾಗಿ ಅನೇಕ ದ್ವಂದ್ವಯುದ್ಧಗಳು ನಡೆಯುತ್ತಿದ್ದು ಅವುಗಳಲ್ಲಿ ಅನೇಕರು ಜೀವ ಕಳೆದುಕೊಳ್ಳುತ್ತಿದ್ದರು". ದ್ವಂದ್ವಯುದ್ಧದಲ್ಲಿ ಕಾದಾಡಲು ಅರಸನ ಅನುಮತಿ ಆವಶ್ಯಕವಾಗಿತ್ತು. ವಿಜಯನಗರದಲ್ಲಿ ಸ್ತ್ರೀಯರಿಗೆ ಕುಸ್ತಿಯ

ಪರಿಚಯವಿತ್ತು ಮತ್ತು ಮಹಾನವಮಿ ಉತ್ಸವದ ಕಾಲದಲ್ಲಿ ಅರಸನ ಮುಂದೆ ನಡೆಯುತ್ತಿದ್ದ ಕುಸ್ತಿ ಪಂದ್ಯಗಳಲ್ಲಿ ಅವರು ಭಾಗವಹಿಸುತ್ತಿದ್ದರು. ಇಮ್ಮಡಿ ದೇವರಾಯನಿಗೆ ಚದುರಂಗದ ಆಟವೆಂದರೆ ಬಹಳ ಪ್ರೀತಿ; ಒಂದು ಸಂದರ್ಭದಲ್ಲಿ ಆತ ಆ ಆಟವನ್ನು ಉತ್ತಮನಂಬಿಯೊಡನೆ ಆಡಿದ್ದುಂಟು. ಆತ ಆನೆ ಬೇಟೆಯಲ್ಲಿ ಹೆಚ್ಚು ಪ್ರೀತಿಯುಳ್ಳವನಾಗಿದ್ದ ಮತ್ತು 'ಗಜಬೇಂಟೆಕಾರ' ಎನ್ನುವ ಬಿರುದನ್ನು ಸಂಪಾದಿಸಿದ್ದ. ಕ್ರಿ.ಶ. 1434ರಲ್ಲಿ ಆತ ಬೇಟೆಗಾಗಿ ಮಾಚನಹಳ್ಳಿಗೆ ಹೋಗಿದ್ದನು ಹಾಗೂ ಜಟಂಗಿ ರಾಮ ದೇವಾಲಯವನ್ನು ಸಂದರ್ಶಿಸಿದ್ದನು. ಪಕ್ಷಿಬೇಟೆಗಾಗಿ ಗಿಡುಗಗಳನ್ನು ಬಳಸಿಕೊಳ್ಳಲಾಗುತ್ತಿತ್ತು. ಕ್ರಿ.ಶ. 1434ರ ತೇದಿಯ ಶಾಸನವೊಂದು "ಸಾಳುವ ತಿಪ್ಪರಾಯ ಒಡೆಯರು ರಾಯಪಕ್ಷಿಗಳಗೆ ಗಿಡುಗನಂತಿದ್ದಾನೆಂದು 'ರಾಯಪಕ್ಷಿ ಸಾಳುವ' ತಿಳಿಸುತ್ತದೆ. ಹುಂಜದ ಕಾಳಗವು ಸಾಮಾನ್ಯ ಕ್ರೀಡೆಯಾಗಿತ್ತು. ಜನಪದ ನರ್ತನ, ಜನಪದ ಸಂಗೀತ ಮತ್ತು ಜನಪದ ರಂಗಭೂಮಿಗಳು ಜನರಿಗೆ ಮನೋರಂಜನೆಯನ್ನು ನೀಡುತ್ತಿದ್ದವು[75].

**ಅಡಿಟಿಪ್ಪಣಿಗಳು:**

1. ಐಯಂಗಾರ್ ಎಸ್.ಕೆ. *ಇಚಿಡಿಟಥಿ ಊಣಾಡಿಥಿ ಔಜ ಗಿಜ್ಞಟಿಚಿತಾಟಿ ಙಚಿತಾಙ ಖಿಟಿಜಚಿ*, ಪು.96

2. *ಅದೇ*, ಪು.99

3. *ಅದೇ,* ಪು.105

4. ನಾಗರಾಜರಾವ್, ಪಿ., *ಖಜಛಿಟಾಚಿ ಚಿಟಿಜ ಊಟಥಿಡಿಥಿ ಆತಚಿಟಾಚಿ: ಏಚಿಡಿಟಿಚಿಣಚಿಞಚಿ ಖುಡಿಂಚಿ ಣುಜಂಡಿ* ಪು.579

5. *ಅದೇ,* ಪು. 583

6. *ಅದೇ,* ಪು.589

7. ಬಿ.ಎಲ್. ರೈಸ್, *ಮೈಸೂರು ಗೆಜೇಟಿಯರ್*, ಭಾಗ-1, ಪು.462

8. *ಅದೇ*, ಪು.463

9. ಆರ್.ಎಸ್. ಪಂಚಮುಖಿ, *ಖಜಛಿಟಾಚಿ ಚಿಟಿಜ ಊಟಥಿಡಿಥಿ ಗಿಟಚಿಥಿಚಿಟಿಚಿಣಚಿಡಿಚಿ ಕಾಡಿಟಜ*, ಪು.589

10. *ಅದೇ*, ಪು.593

11. ಶ್ರೀ ಕಂಠ ಶಾಸ್ತ್ರಿ, *ಆಜಚಿಚಿಟಿಥಿಟಿಚಿಟಿಣ ಔಜ ಖಚಿಟಿಞಾಡಿಟಿ ಏಟಾಜಿಚಿಣಟಿಣಿಜ ಣಟಿಜಜಿ ಗಿಟಿಚಿಥಿಚಿಟಚಿರಚಿಡಿಚಿ,* ಪು.309

12. *ಅದೇ,* ಪು.311

13. ಎಚ್. ಎಂ. ನಾಗರಾಜು, *ವಿಜಯನಗರದ ಇಮ್ಮಡಿದೇವರಾಯ,* ಪು.225

14. *ಅದೇ,* ಪು.226

15. *ಅದೇ,* ಪು.227

16. ಎನ್. ವೆಂಕಟರಮಣಯ್ಯ, *ವಿಜಯನಗರ ಚರಿತ್ರೆ,* ಪು. 67

17. *ಅದೇ,* ಪು.71

18. ಪಾಂಡುರಂಗರಾವ ದೇಸಾಯಿ, *ಹಂಪೆ,* ಪು. 27

19. *ಅದೇ,* ಪು.29

20. ಎ.ಎಸ್. ನಂಜುಂಡಸ್ವಾಮಿ, *ವಿಜಯನಗರದ ಇತಿಹಾಸ,* ಪು.79

21. *ಅದೇ,* ಪು.82

22. ಎನ್. ಚಿನ್ನಸ್ವಾಮಿ ಸೋಸಲೆ, *ಸಾಮ್ರಾಜ್ಯ ಮತ್ತು ಸಂಸ್ಥಾನ,* ಪು. 111

23. *ಅದೇ,* ಪು.117

24. *ಅದೇ,* ಪು.119

25. ಜಿ.ಎಸ್, ದೀಕ್ಷಿತ್ (ಸಂ), *ಸಂಗಮರ ಕಾಲದ ವಿಜಯನಗರ,* ಪು. 31

26. *ಅದೇ,* ಪು. 44

27. *ಅದೇ,* ಪು. 97

28. ಸದಾನಂದ ಕನವಳ್ಳಿ, *ಮರೆತಹೋದ ಮಹಾಸಾಮ್ರಾಜ್ಯ ವಿಜಯನಗರ,* ಪು.62

29. *ಅದೇ,* ಪು.69

30. *ಅದೇ,* ಪು.73

31. ಎಸ್.ವೈ. ಸೋಮಶೇಖರ್, *ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ,* ಪು.117

32. *ಅದೇ,* ಪು.119

33. ಕೆ. ಕುಶಾಲಪ್ಪ ಗೌಡ (ಅನು.), *ಮಧುರಾವಿಜಯಂ*, ಪು.1

34. *ಅದೇ,* ಪು.44

35. *ಅದೇ,* ಪು.65

36. ಲಕ್ಷ್ಮಣ ತೆಲಗಾವಿ, *ರಾಮರಾಜನ ಬಖೈರು,* ಪು.65

37. *ಅದೇ,* ಪು.71

38. ಗುರುಮೂರ್ತಿ ಪೆಂಡಕೂರು (ಅನು.), *ಭಗ್ನ ವಿಜಯನಗರ ಚರಿತ್ರೆ*, ಪು.21

39. *ಅದೇ,* ಪು.27

40. *ಅದೇ,* ಪು.31

41. ಬಿ.ಎ. ವಿವೇಕ ರೈ (ಸಂ), *ಪ್ರವಾಸಿ ಕಂಡ ವಿಜಯನಗರ,* ಪು.73

42. *ಅದೇ,* ಪು.79

43. ಎಂ. ಕೊಟ್ರೇಶ್, *ಬಳ್ಳಾರಿ ಜಿಲ್ಲೆಯ ಕೋಟೆಗಳು*, ಪು.143

44. *ಅದೇ,* ಪು.145

45. ಸುಚೇತಾ ನವರತ್ನ (ಅನು.), *ಅಚ್ಯುತರಾಯಾಭ್ಯುದಯಂ*, ಪು.119

46. *ಅದೇ,* ಪು.121

47. ಎಂ. ಎಲ್. ಶಿವಶಂಕರ, *ವಿಜಯನಗರ ಅಧ್ಯಯನ ಸಂಪುಟ-2*, ಪು.43

48. *ಅದೇ,* ಪು. 51

49. ಎಂ. ಎಲ್. ಶಿವಶಂಕರ, *ವಿಜಯನಗರ ಅಧ್ಯಯನ ಸಂಪುಟ-3,* ಪು.36

50. *ಅದೇ,* ಪು. 41

51. ಐಯಂಗಾರ್ ಎಸ್.ಕೆ. *ಇಚಿಡಿಟಥಿ ಊಚಿಣಾಡಿಥಿ ಠಜಿ ಗಿಜ್ಞಚಿಟಿಚಿತ್ಞಚಿಟಿ ಖಚಿಣಾಚಿ ಖಿಟಿಜಚಿಚಿ,* ಪು.114

52. *ಅದೇ,* ಪು.117

53. ನಾಗರಾಜರಾವ್, ಪಿ., *ಖಜಚಿಟಿಚಿಚಿ ಚಿಟಿಜ ಕ್ಞಟಿಚಿಥಿ ಆಥಿಟಿಚಿ: ಏಚಿಡಿಟಿಚಿಣಚಿಞಚಿ ಖುಡಿಣಾ ಣುಜಂಡ್ಞ* ಪು.583

54. ಬಿ.ಎಲ್. ರೈಸ್, *ಮೈಸೂರು ಗೆಜೇಟಿಯರ್, ಭಾಗ-1,* ಪು.481

55. *ಅದೇ,* ಪು.483

56. ಆರ್.ಎಸ್. ಪಂಚಮುಖಿ, *ಖಜಚಿಟಿಚಿಚಿ ಚಿಟಿಜ ಕ್ಞಟಿಚಿಥಿ ಗಿಟಚಿಥಿಚಿಟಿಚಿಡಿಚಿಡಿಚಿ ಕಚಿಟಿಜ,* ಪು.591

57. *ಅದೇ,* ಪು.596

58. ಶ್ರೀ ಕಂಠ ಶಾಸ್ತ್ರಿ, *ಆಜಚಿಚಿಟಿಣಚಿಟಿಣ ಠಜಿ ಖಚಿಟಿಞಾಡಿಣಾ ಏಣಾಜಿಚಿಣಣಾಜ ಣಚಿಜಜಿ ಗಿಟಚಿಥಿಚಿಟಿಚಿಡಿಚಿಡಿಚಿ,* ಪು.167

59. *ಅದೇ,* ಪು.199

60. *ಅದೇ,* ಪು.201

61. ಎನ್. ವೆಂಕಟರಮಣಯ್ಯ, *ವಿಜಯನಗರ ಚರಿತ್ರೆ*, ಪು.71

62. *ಅದೇ,* ಪು.77

63. ಎಸ್.ವೈ. ಸೋಮಶೇಖರ್, *ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ,* ಪು.179

64. *ಅದೇ,* ಪು.181

65. ಬಿ.ಎ. ವಿವೇಕ ರೈ (ಸಂ), *ಪ್ರವಾಸಿ ಕಂಡ ವಿಜಯನಗರ*, ಪು.79

66. *ಅದೇ,* ಪು.83

67. ಎಂ. ಕೊಟ್ರೇಶ್, *ಬಳ್ಳಾರಿ ಜಿಲ್ಲೆಯ ಕೋಟೆಗಳು*, ಪು.111

68. *ಅದೇ,* ಪು. 117

69. ಎಂ. ಎಲ್. ಶಿವಶಂಕರ, *ವಿಜಯನಗರ ಅಧ್ಯಯನ ಸಂಪುಟ-4*, ಪು.49

70. *ಅದೇ,* ಪು.53

71. *ವಿಜಯನಗರ ಅಧ್ಯಯನ ಸಂಪುಟ-5*, ಪು.23

72. *ಅದೇ,* ಪು.29

73. ಎನ್. ಚಿನ್ನಸ್ವಾಮಿ ಸೋಸಲೆ, *ಸಾಮ್ರಾಜ್ಯ ಮತ್ತು ಸಂಸ್ಥಾನ,* ಪು.211

74. *ಅದೇ,* ಪು.216

75. ಜಿ.ಎಸ್, ದೀಕ್ಷಿತ್ (ಸಂ), *ಸಂಗಮರ ಕಾಲದ ವಿಜಯನಗರ*, ಪು.77

## ಅಧ್ಯಾಯ 4

## ವಿಜಯನಗರದ ಸಂಗಮರ ಕಾಲದ ಶಿಕ್ಷಣ ಮತ್ತು ಸಾಹಿತ್ಯ

---

❖ **ಶಿಕ್ಷಣ:**

ದಿವಂಗತ ಹಯವದನರಾಯರು ಮೈಸೂರು ಗೆಜೆಟಿಯರ್ ಸಂಪುಟ ನಾಲ್ಕರಲ್ಲಿ ಹಿಂದಿನ ಕಾಲದ ಶಿಕ್ಷಣ ಪದ್ಧತಿಯನ್ನು ಅವಲೋಕಿಸುತ್ತಾ ಸಾರ್ವಜನಿಕ ಶಿಕ್ಷಣವನ್ನು ಹಿಂದೆಂದೂ ಸರ್ಕಾರದ ಕರ್ತವ್ಯವೆಂದು ಪರಿಗಣಿಸಿದ ಹಾಗೆ ಎಲ್ಲೂ ಕಾಣುವುದಿಲ್ಲ ಎಂದು ಹೇಳಿದ್ದಾರೆ. ಈ ಮಾತಿಗೆ ವಿಜಯನಗರ ಸಾಮ್ರಾಜ್ಯವು ಹೊರತಾಗಿರಲಿಲ್ಲ ಎಂದು ಹೇಳಬಹುದು. ವಿಜಯನಗರದರಸರು ವಿದ್ವತ್ತನ್ನು ಮತ್ತು ಶಿಕ್ಷಣದ ಪ್ರಸಾರವನ್ನು, ಪ್ರೋತ್ಸಾಹಿಸಿದಕ್ಕೆ ಕಾರಣವೆಂದರೆ ಸ್ವತ: ಅವರೇ ವಿದ್ಯಾವಂತರಾಗಿದ್ದರು ಎನ್ನುವುದು ಒಂದು ರೀತಿಯದಾದರೆ, ಮತ್ತೊಂದು ಕಡೆ ಅವರೆ ಮೂಲ ಸಂಪ್ರದಾಯಗಳಿಗೆ ಮನಸೋತು ಸಾರ್ವಜನಿಕ ಶಿಕ್ಷಣವನ್ನು ಸಂಪೂರ್ಣವಾಗಿ ಬದಿಗೊತ್ತಿದ್ದರು ಎಂದು ಹೇಳಬಹುದು. ರಾಜಕುಮಾರರ ವಿದ್ಯಾಭ್ಯಾಸದಿಂದ ಮುಂದುವರಿದ ಈ ಪರಂಪರೆಯು ನಂತರದ ವಿಜಯನಗರದ ಅರಸರೂ ಸಹ ಅನುಸರಿಕೊಂಡು ಬಂದರು. ಎಷ್ಟೋ ವೇಳೆ ರಾಜರೇ ಈ ಬಗ್ಗೆ ತನ್ನ ಉತ್ತರಾಧಿಕಾರಿಯಾಗುವವರಿಗೆ ತಿಳುವಳಿಕೆ ಕೊಟ್ಟಿದ್ದೂ ಕಂಡುಬರುತ್ತದೆ[1].

ವಿಜಯನಗರ ಕಾಲದ ಶಿಕ್ಷಣದ ವಿಚಾರವನ್ನು ನಾವು ಬಹಳ ಮಟ್ಟಿಗೆ ಶಾಸನಗಳಿಂದ ಸಂಗ್ರಹಿಸಬಹುದಾಗಿದೆ. ಇವುಗಳಲ್ಲಿ ಕೆಲವಂತೂ ಸ್ವಾರಸ್ಯಪೂರ್ಣವಾದ ವಿವರಗಳನ್ನು ಒದಗಿಸುತ್ತವೆ. ಅಷ್ಟೇ ಅಲ್ಲದೆ ಅಂದಿನ ಕಾಲದ

ಸಮಕಾಲೀನ ಸಾಹಿತ್ಯವು ಈ ವಿಚಾರವಾಗಿ ಹೆಚ್ಚಿನ ಬೆಳಕನ್ನು ಚೆಲ್ಲುತ್ತದಲ್ಲದೆ, ಈ ಶಿಕ್ಷಣದ ಚಟುವಟಿಕೆಗಳು ಅಂದು ಕೆಲವೇ ವರ್ಗಗಳ ಬೌದ್ಧಿಕ, ನೈತಿಕ ಹಾಗೂ ಸಾಂಸ್ಕೃತಿಕ ವಿಷಯಗಳ ಮೇಲೆ ಗಮನಹರಿಸಲು ನಿಜವಾದ ಆಧಾರವಾಗಿರುತ್ತಿದ್ದವು. ಇವುಗಳ ಆಧಾರದ ಮೇಲೆಯೇ ಅಂದಿನ ಸಾಮ್ರಾಜ್ಯದ ಅಡಿಗಲ್ಲು ಇದ್ದಿತೆಂದು ಹೇಳಬಹುದಾಗಿದೆ.

**ಪ್ರಾಥಮಿಕ ಶಿಕ್ಷಣ**:

ಅಂದಿನ ಕಾಲದಲ್ಲಿ ಶಿಕ್ಷಣಕ್ಕೆ 'ಬಾಲಬೋಧೆ' ಎಂದು ಹೆಸರಿದ್ದಿತ್ತೆನ್ನಬಹುದು. ಕನಕದಾಸರು ತಮ್ಮ 'ಮೋಹನತರಂಗಿಣಿ'ಯಲ್ಲಿ ಕಸೆ ಅಂಗಿ ತೊಟ್ಟು ಕೈಯಲ್ಲಿ ಬೆತ್ತ ಹಿಡಿದು ಔಷಧಿಗಳನ್ನು ರಚಿಸುವುದರಲ್ಲಿ ನಿಪುಣರಾದ, ಪ್ರಾಥಮಿಕ ಶಾಲೆಯ ಉಪಾಧ್ಯಾಯರ ಚಿತ್ರವೂ, ಅಂದಿನ ಮಕ್ಕಳ ಪುಸ್ತಕಗಳು ವರ್ಣ ಚಿತ್ರಗಳಿಂದ ಕೂಡಿದ್ದವೆಂಬ ಸಂಗತಿಯೂ ದೊರೆಯುತ್ತದೆ. ಪ್ರಾಥಮಿಕ ಹಂತದಲ್ಲಿ ಮಕ್ಕಳು ಮಣ್ಣಿನ ಅಥವಾ ಮರಳಿನ ಮೇಲೆ ಅಕ್ಷರಾಭ್ಯಾಸ ಮಾಡುವುದನ್ನು ಕಲಿತರು ಎಂಬುವುದು ತಿಳಿದಿರುವ ವಿಷಯವೇ. ಇವುಗಳಿಗೆ "ಧೂಳಾಕ್ಷರ" ಎಂದು ಕರೆಯುತ್ತಿದ್ದರು, ವಿದೇಶಿ ಪ್ರವಾಸಿಗರೊಬ್ಬರ ಪ್ರಕಾರ ಪಾಠಶಾಲೆಯೊಂದರಲ್ಲಿ ಉಪಾಧ್ಯಾಯರಿಂದ ಕಲಿತ ಪಾಠವನ್ನು ಮರೆಯದೆ ನೆನಪಿನಲ್ಲಿಟ್ಟುಕೊಳ್ಳಲು, ವಿದ್ಯಾರ್ಥಿಗಳು ಬಾಯಿಪಾಠಗಳಲ್ಲಿ ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಪುನರಾವರ್ತನೆ ಮಾಡುತ್ತಿದ್ದರು. ನಿದರ್ಶನಕ್ಕೆ "ಒಂದೊಂದ್ಲೆ ಒಂದು" ಎಂಬಂತೆ ಪುನರಾವರ್ತನೆಯನ್ನು ಕೇಳುತ್ತಲೆ ಉಳಿದ ಹುಡುಗರು ಅದನ್ನೆ ಬಾಯಿಯಲ್ಲಿ

ಹೇಳುತ್ತಾ ಎದುರಿಗೆ ಮರಳಿನ ಮೇಲೆ ಅದೇ ಪ್ರಕಾರ ಬರೆಯುತ್ತಿದ್ದರು. ಹೀಗೆ ಪ್ರಾಥಮಿಕ ಪಾಠ ಸಾಗುತ್ತಿದ್ದಿತು ಎಂದು ಹೇಳಿ ಅಂದಿನ ಪ್ರಾಥಮಿಕ ಶಿಕ್ಷಣ ಪದ್ಧತಿಯನ್ನು ಮೆಚ್ಚಿಕೊಂಡಿದ್ದಾನೆ. ವಿದ್ಯಾರ್ಥಿಗಳಿಗೆ ಕಾಗದವನ್ನಾಗಲಿ ಅಥವಾ ಮಸಿಯನ್ನಾಗಲಿ ವ್ಯರ್ಥಮಾಡಿಸದೆ ಓದುಬರಹವನ್ನು ಕಲಿಯುವ ಈ ವಿಧಾನ ನಿಜವಾಗಿಯೂ ಅತ್ಯಂತ ಸುಲಭವಾದದ್ದೆ ಆಗಿತ್ತು[2].

ಇನ್ನೊಂದು ಭಾಗದಲ್ಲಿ ವಿದ್ಯಾರ್ಥಿಗಳು ಅಭ್ಯಾಸ ಮಾಡಬೇಕಾದ ಕೃತಿಗಳೆಂದರೆ ಜೈಮಿನಿ ಭಾರತ, ವಿದುರನೀತಿ, ಅಮರಕೋಶ, ಪಂಚತಂತ್ರ, ಸೋಮೇಶ್ವರಶತಕ ಹಾಗೂ ಕೆಲವು ವಿದ್ಯಾರ್ಥಿಗಳು ಸಂವತ್ಸರಗಳ, ನಕ್ಷತ್ರಗಳ, ದಿಕ್ಸೂಚಿಯ ವಿವರಗಳನ್ನು ದೇವರ ಮಹಿಮಾ ವಿಶೇಷಗಳನ್ನು ಸುತ್ತಿಸುವ ಹಲವು ಬಗೆಯ ಹಾಡುಗಳನ್ನು ಕಲಿಯುತ್ತಿದ್ದರು.

ವಿಜಯನಗರದ ಸಂಗಮ ವಂಶದ ಅರಸರು ಶಿಕ್ಷಣಕ್ಕೆ ಎಷ್ಟರ ಮಟ್ಟಿನ ಪ್ರಾಮುಖ್ಯತೆ ನೀಡಿದರೆಂಬುವುದಕ್ಕೆ ಇಂದಿಗೂ ಕಂಡುಬರುವ ಅಗ್ರಹಾರಗಳು, ದೇವಾಲಯಗಳು ಹಾಗೂ ಮಠಗಳೇ ನಿದರ್ಶನವಾಗಿವೆ. ಪ್ರಾಥಮಿಕ ಹಂತದಲ್ಲಿ ಓದು ಬರಹ ಕೇವಲ ಗಣಿತವನ್ನು ಮಾತ್ರ ಕಲಿಯುವುದಾಗಿದ್ದರೂ ನಮ್ಮಲ್ಲಿ ಇರುವ ನಾಣ್ಣುಡಿ ತಾಯಿಯೇ ಮಗುವಿಗೆ ಮೊದಲ ಗುರು, ಮನೆಯೇ ಮೊದಲ ಪಾಠಶಾಲೆ ಎಂಬ ಮಾತಿಗೆ ನಿದರ್ಶನವೆಂಬಂತೆ ಮೊದಲನೆ ದೇವರಾಯನ ಮಂತ್ರಿಯಾದ ಲಕ್ಷ್ಮೀಧರನಿಗೆ ಅವನ ತಾಯಿ ದಿನವೂ ಹಾಲೆರೆಯುವಾಗ ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯವನ್ನು ಕಟ್ಟಿಸು, ಸೆರೆಯಲ್ಲಿ ಸಿಕ್ಕಿದ ಅನಾಥರನ್ನು ಬಿಡಿಸು, ಮಿತ್ರರಿಗೆ ಆಶ್ರಯನಾಗು, ನಂಬಿದವರಿಗೆ ನೆಲೆಯಾಗು

ನಂತರ ಸುಖಶಾಂತಿಯಿಂದ ರಾಜನಾಗಿ ರಾಜ್ಯಭಾರ ಮಾಡು ಎಂದು ಹೇಳುತ್ತಾ ಬೆಳೆಯಿಸಿದಳಂತೆ[3].

ಮೇಲಿನ ತಾಯಿಯ ಮಾತು ಅಂದಿನ ರಾಜನಾಗುವವನ ಕರ್ತವ್ಯ ಹಾಗೂ ಸಾಮಾನ್ಯ ಜನರ ಮೇಲೆ ಇದ್ದ ಮಮಕಾರವನ್ನು ಸೂಚಿಸುತ್ತದೆ. ಇದನ್ನೇ ತಾಯಿ ಸಂಸ್ಕೃತಿ ಎಂದು ಕರೆಯುವುದಲ್ಲವೆ.

ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರಮುಖ ವಿದ್ಯಾಕೇಂದ್ರಗಳು ಅಗ್ರಹಾರಗಳು, ಮಠಗಳು, ದೇವಸ್ಥಾನಗಳು, ಬ್ರಹ್ಮಪುರಿಗಳು ಮತ್ತು ಘಟಿಕಾ ಸ್ಥಾನಗಳು. ಇವುಗಳಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಅಗ್ರಹಾರಗಳು, ಮಠಗಳು, ಶೈಕ್ಷಣಿಕ ಕ್ಷೇತ್ರದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದವೆಂದು ಕಂಡುಬರುತ್ತದೆ. ವಿಜಯನಗರದ ನಂತರ ಈ ವಿದ್ಯಾಕೇಂದ್ರಗಳ ಘನತೆಯು ಕುಗ್ಗುವಂತೆ ಮಾಡಿದ ಅನೇಕ ಘಟನೆಗಳು ನಡೆದಿರುವುದು ಕಂಡು ಬರುತ್ತದೆ. ಅಂದಿನ ಕಾಲದ ಮಠದ ಶಿಕ್ಷಣವು ಕೇವಲ ಒಂದು ಮತ ಧರ್ಮದ, ಅಚಾರ್ಯಧೋರಣೆಯ ಪೀಠಗಳಾಗಿದ್ದವು. ಇಂಥಹ ಶಿಕ್ಷಣದ ಸುತ್ತ ಮಠಗಳು ತಮ್ಮ ಬಹು ಬಗೆಯ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದವು.

ಅಂದಿನ ಕಾಲದ ಶಿಕ್ಷಣ ಪದ್ಧತಿಯ ಪ್ರಗತಿಯ ಬಗ್ಗೆ ಕುರಿತು ಸೋಮೇಶ್ವರ ಶತಕವು ಹೇಳುವುದರ ರೀತಿಯಲ್ಲಿಯೇ ರಾಜರ ಸಭೆಯು ಕವಿಗಳು, ಗಾಯಕರು, ಪೌರಾಣಿಕರು, ಹಾಸ್ಯಗಾರರು, ಚರಿತ್ರಾಕಾರರು, ಜ್ಯೋತಿಷಿಗಳು, ಚತುರ ವಾಗ್ಮಿಗಳು ಮತ್ತು ಯುದ್ಧಕಲಾ ನಿಪುಣರುಗಳಿಂದ ತುಂಬಿ ಶೋಭಿಸುತ್ತದೆ ಎಂದು ಹೇಳಿರುವುದರಲ್ಲಿಯೇ ಊಹಿಸಬಹುದಾಗಿದೆ. ಸೋಮೇಶ್ವರ ಶತಕದ ಪ್ರಕಾರ

ಶಿಕ್ಷಣವನ್ನು ಯಾವುದರಿಂದ ಕಲಿಯಬೇಕು ಎಂದು ಹೇಳಿರುವುದು ಅತ್ಯಂತ ಮಹತ್ವವಾದದ್ದಾಗಿದೆ. ಇದರ ಪ್ರಕಾರ;

ಅ. ಕೆಲವನ್ನು ಬಲ್ಲವರಿಂದ ಕಲಿಯಬೇಕು

ಆ. ಕೆಲವನ್ನು ಶಾಸ್ತ್ರಗಳಿಂದ ಕಲಿಯಬೇಕು

ಇ. ಕೆಲವನ್ನು ಇತರರ ಕೃತಿಗಳಿಂದ ಅರಿಯಬೇಕು

ಈ. ಕೆಲವನ್ನು ತನ್ನ ಬುದ್ಧಿಶಕ್ತಿಯಿಂದ ತಿಳಿಯಬೇಕು

ಉ. ಕಡೆಯದಾಗಿ ಕೆಲವನ್ನು ಸಜ್ಜನಸಂಗದಿಂದ ಅರಿಯಬೇಕು

ಈ ರೀತಿಯಲ್ಲಿ ಶಿಕ್ಷಣ ಪಡೆದರೆ ಮಾತ್ರ ಮನುಷ್ಯನು, ಹಲವು ಹಳ್ಳ, ತೊರೆ, ನದಿಗಳು ಸೇರಿ ಸಮುದ್ರವಾಗುವ ಹಾಗೆ ಸರ್ವಜ್ಞನಾಗುತ್ತಾನೆ ಎಂದು ಹೇಳಬಹುದಾಗಿದೆ[4].

**ಜನಸಾಮಾನ್ಯರ ಶಿಕ್ಷಣ:**

ಮೇಲೆ ವಿವರಿಸಲಾದ ಶಿಕ್ಷಣಕ್ಷೇತ್ರ, ಶಿಕ್ಷಣ ನೀಡುತ್ತಿದ್ದ ಸ್ಥಳಗಳು ಪ್ರಮುಖವಾಗಿ ಶಿಕ್ಷಣ ಎಂಬ ಪದದ ಅರ್ಥವೇ ಕೆಲವರಿಗೆ ಮಾತ್ರ ಮೀಸಲಾಗಿದ್ದಿತ್ತು ಶಿಕ್ಷಣ ಜನಸಾಮಾನ್ಯರಿಗೆ ಪಡೆಯಲು ಸಾಧ್ಯಾವಾಗುತ್ತಿರಲಿಲ್ಲ. ಅಂದು ಭೀಕರ ಚಂಡುಮಾರುತದ ಹಾಗೆ ಹಾಸುಹೊಕ್ಕಾಗಿದ್ದ ಜಾತಿವ್ಯವಸ್ಥೆಯು ತನ್ನದೆ ಆದಂತಹ ಮೌಢ್ಯದ ವ್ಯವಸ್ಥೆಯಲ್ಲಿ ಮುಳುಗಿಸುವಂತೆ ಮಾಡಿತು. ಬ್ರಾಹ್ಮಣರು ವಿದ್ಯೆ ಎಂಬುವುದು ತಮಗೆ ಮಾತ್ರವೆಂದು ಹೇಳಿ ವೇದ ಉಪನಿಷ್ತಗಳನ್ನು ಹೇಳಿಕೊಂಡು ರಾಜಾಶ್ರಯದಲ್ಲಿ ಉತ್ತಮ ಜೀವನ ನಡೆಸಿದರೆ, ತಾವೇ ಸೃಷ್ಟಿಸಿದ

ಶೂದ್ರರು ಹಾಗೂ ಪಂಚಮರು ಹುಟ್ಟಿರುವುದರ ಬಗ್ಗೆ ಹಲವಾರು ಅಧರ್ಮ ನೀತಿಯನ್ನು ತಿಳಿಸಿ ಅವರನ್ನು ಪ್ರಾಣಿಗಳಿಗಿಂತಲೂ ಹೀನವಾದ ಜೀವನ ನಡೆಸುವಂತೆ ಮಾಡಿದ್ದರೆನ್ನಬಹುದು. ಈ ಗುಂಪಿನಲ್ಲಿ ಯಾರಾದರೂ ಶಿಕ್ಷಣ ಪಡೆಯಲು, ಅದರಲ್ಲಿಯೂ ಸಂಸ್ಕೃತ ಕಲಿಯಲು ಬಯಸಿದರೆ ಆ ವ್ಯಕ್ತಿಗೆ ಕಾಯಿಸಿದ ಕಬ್ಬಿಣದ ಸಲಾಕೆಯಿಂದ ಕಿವಿಗಳಿಗೆ ಎರಕ ಹೊಯ್ಯುವುದು, ನಾಲಗೆ ಕತ್ತರಿಸುವುದು, ಗಡಿಪಾರು ಮಾಡುವುದು ಅಥವಾ ಮರಣದಂಡನೆಗೆ ಒಳಪಡಿಸುವ ಅನಿಷ್ಟ ಪದ್ಧತಿಗಳು ಇದ್ದವು. ಅಂದಿನ ಶಿಕ್ಷಣವು ಕೇವಲ ರಾಜ ಹಾಗೂ ರಾಜಾಶ್ರಯದ ಶ್ರೀಮಂತರು, ಬ್ರಾಹ್ಮಣರುಗಳಿಗೆ ಮಾತ್ರ ಮೀಸಲಾಗಿದ್ದಿತು. ಬೇರೆ ಯಾರೂ ಶಿಕ್ಷಣ ಪಡೆಯದಂತೆ ನಿಷೇಧ ವಿಧಿಸಲಾಗಿತ್ತು[5]. ಸಾಮಾನ್ಯ ಜನತೆಯ ಜೀವನದ ಸೌಕಾರ್ಯಗಳನ್ನು ಯಾವ ದೃಷ್ಟಿಯಿಂದಲೂ ಉತ್ತಮವಾಗಿ ನಿರೂಪಿಸಲು ಸ್ವಲ್ಪವೂ ಗಮನಕೊಡದ, ಕೇವಲ ಅನಿಷ್ಟ ಪದ್ಧತಿಗಳ ತಳಹದಿಯ ಮೇಲೆ ಆಳ್ವಿಕೆ ನಡೆಸಿದ ರಾಜ್ಯಾಡಳಿತವನ್ನು ಸುಭಿಕ್ಷವಾದ ಆಳ್ವಿಕೆಯ ಸಾಮ್ರಾಜ್ಯ, ಸುಭೀಕ್ಷೆಯ ಕಾಲ ಎಂದೆಲ್ಲಾ ಹೇಳುವುದರಲ್ಲಿ ಅರ್ಥವೆಲ್ಲಿದೆ?

❖ **ಸಾಹಿತ್ಯ:**

➢ **ಸಂಸ್ಕೃತ ಗ್ರಂಥಗಳು:**

ವಿಜಯನಗರ ಸಾಮ್ರಾಜ್ಯದ ಪ್ರಾರಂಭಕಾಲದಲ್ಲಿ ರಚಿಸಲಾದ ಸಂಸ್ಕೃತ ಗ್ರಂಥಗಳ ಸಮೀಕ್ಷೆಯನ್ನು ನಡೆಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಸಾಮ್ರಾಜ್ಯದ ಪ್ರಾರಂಭಕಾಲದಿಂದ ಅನುಕ್ರಮವಾಗಿ ಆಡಳಿತ ನಡೆಸಿದ ಮೂವರು ಪ್ರಭುಗಳು ಎಂದರೆ ಮೊದಲನೆ ಹರಿಹರ, ಮೊದಲನೆ ಬುಕ್ಕ ಮತ್ತು ಇಮ್ಮಡಿ ಹರಿಹರ ಇವರುಗಳು ಸಾಹಿತ್ಯ ಮತ್ತು ವಿದ್ವಾಂಸರುಗಳ ಆಶ್ರಯದಾತರೂ ಪೋಷಕರೂ ಆಗಿದ್ದರೆಂಬುದು ಅವಶ್ಯವಾಗಿ ಗಮನಿಸಬೇಕಾದ ಸಂಗತಿ. ಕ್ರಿ.ಶ. 1370ನೆಯ ಇಸವಿಗೆ ಸೇರಿದ ಶಾಸನವೊಂದರಲ್ಲಿ ಮೊದಲನೆಯ ಬುಕ್ಕರಾಜನು ಎಂಟು ಭಾಷೆಗಳಲ್ಲಿ – ಆ ಭಾಷೆಗಳು ಯಾವುದೆಂಬುದನ್ನು ಹೆಸರಿಸದಿದ್ದರೂ – ಪಾಂಡಿತ್ಯವನ್ನು ಪಡೆದಿದ್ದ ಕವಿಯೊಬ್ಬನಿಗೆ ಉಂಬಳಿ ಅಥವಾ ಮಾನ್ಯವನ್ನು ಇತ್ತು ಗೌರವಿಸಿದಂತೆ ಕಾಣಿಸಲಾಗಿದೆ ಎಂಬ ವಿಷಯವನ್ನು ಮೈಸೂರು ಗೆಜೆಟಿಯರ್‌ನಲ್ಲಿ ನಮೂದಿಸಿದೆ. ಇದು ಸಮೃದ್ಧವಾಗಿ ಸಾಹಿತ್ಯಸೃಜನೆ ಮಾಡಿದ ವಿದ್ಯಾರಣ್ಯ ಮತ್ತು ಸಾಯಣರು, ಅವರ ಸಹೋದರ ಭೋಗನಾಥ ಇವರಂತಹ ಗ್ರಂಥಕಾರರು ಪ್ರವರ್ಧಮಾನದಲ್ಲಿದ್ದು ಮೆರೆಯುತ್ತಿದ್ದ ಕಾಲ. ಈ ಕಾಲಕ್ಕೆ ಸಂಬಂಧಿಸಿದ ಸಂಸ್ಕೃತ ಗ್ರಂಥಗಳ ವಿಶೇಷ ಲಕ್ಷಣ ಯಾವುದೆಂದರೆ, ಅವು ಬಹುಮಟ್ಟಿಗೆ ಕಾವ್ಯಸಂಗ್ರಹ ಇಲ್ಲವೇ ಭಾಷ್ಯಗಳಾಗಿರುವುದು ಎಂಬುದು. ಆ ಕಾರಣ ಅವುಗಳಲ್ಲಿ ಸ್ವೋಪ್ರಜ್ಞತೆ, ಸೃಜನಶೀಲತೆ ಹಾಗೂ ಪ್ರತಿಭೆಯ ಕೊರತೆಯಿದೆಯೆಂದು ಭಾವಿಸಲಾಗಿದೆ. ಈ ಕಾಲದ ಗ್ರಂಥಕಾರರಿಗೆ ಹೊಸ ಗ್ರಂಥಗಳ ಸೃಷ್ಟಿಗಿಂತ ತಮ್ಮ ಪುರಾತನ ಸಾಹಿತ್ಯಕೃತಿಗಳ ಸಂಗ್ರಹ, ಸಂರಕ್ಷಣೆಯೇ ಮುಖ್ಯ ಉದ್ದೇಶವಾಗಿದ್ದಿತೆಂದು ತೋರುತ್ತದೆ. ಆದರೂ ಇಂತಹ ಗ್ರಂಥಗಳ ಪರಿಮಾಣ, ಸಂಖ್ಯೆಯೂ ಅದ್ಭುತವೆನಿಸುವಂತಿದ್ದು, ಸೃಜನಶೀಲತೆಯಿಲ್ಲದಿದ್ದರೂ ಅವು ಗುಣ, ಯೋಗ್ಯತೆಯಲ್ಲಿ ಕೆಳಮಟ್ಟದ್ದಂತೂ ಅಲ್ಲ[6].

ಮೊದಲಿಗೆ ಸಂಗ್ರಹ ಗ್ರಂಥಗಳನ್ನು ತೆಗೆದುಕೊಳ್ಳೋಣ. ಖ್ಯಾತಿವೆತ್ತ ಸಾಯಣರದೇ ಈ ಗುಂಪಿನಲ್ಲಿ ಆಶ್ಚರ್ಯವೆನಿಸುವಂತಹ ಕೊಡುಗೆಯಾಗಿದೆ. 'ಸುಧಾನಿಧಿ' ಅಥವಾ 'ಸಾರಸಂಗ್ರಹ'ಗಳು ಸಂಸ್ಕೃತ ಸಾಹಿತ್ಯಕ್ಕೆ ಸಾಯಣರ ಪ್ರಧಾನ ಕೊಡುಗೆಯೆನ್ನಬಹುದು. ಹೀಗಾಗಿ ಅವರು ಸಂಸ್ಕೃತ ಸಾಹಿತ್ಯಚರಿತ್ರೆಯಲ್ಲಿ ಒಂದು ಅನನ್ಯವಾದ ಸ್ಥಾನವನ್ನು ಹೊಂದಿರುತ್ತಾರೆ. ಡಾ. ಕೃಷ್ಣಮೂರ್ತಿಯವರ ಮಾತಿನಲ್ಲಿ ಹೇಳುವುದಾದರೆ 'ಸಾಯಣರ ಪೋಷಕ ದೊರೆ ಮಾತ್ರವಲ್ಲದೆ, ಆತನ ಸೋದರರು, ಮಗ ಮತ್ತಿತರ ಶಾಸನಕವಿಗಳು ನೀಡುವ ಅತಿಶಯೋಕ್ತಿಯಿಂದ ಕೂಡಿರುವ ಪ್ರಶಂಸಾವಾಕ್ಯಗಳಿಂದ ಆತ ವಿಜಯನಗರದ ರಾಜಾಸ್ಥಾನದಲ್ಲಿ ಕಡಿಮೆಯೆಂದರೆ ನಲವತ್ತು ವರ್ಷಗಳಷ್ಟು ಕಾಲಕ್ಕಾದರೂ ಒಬ್ಬ ಗಮನಾರ್ಹ ಹಾಗೂ ಪ್ರಮುಖ ವ್ಯಕ್ತಿಯಾಗಿದ್ದನೆಂದು ನಿರ್ವಿವಾದವಾಗಿ ನಿರ್ಧರಿಸಬಹುದು. ಅವರು ರಾಜ್ಯಾಡಳಿತದಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದುದರ ಜೊತೆಗೆ ಸಾಹಿತ್ಯದ ಅಭಿವೃದ್ಧಿಯಲ್ಲಿಯೂ ಗಮನಾರ್ಹವಾಗಿ ಭಾಗವಹಿಸಿದ್ದರು. ಆ ಕಾಲಕ್ಕಾಗಲೇ ಸಂಸ್ಕೃತ ಸಾಹಿತ್ಯದಲ್ಲಿ ಸೃಜನಶೀಲತೆಯ ಕಾಲವು ಮುಗಿದುಹೋಗಿತ್ತು. ಅಲ್ಲದೆ ಈ ಕಾಲದ ಮುಖ್ಯ ಅಗತ್ಯ ಹಿಂದಿನ ಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಅರ್ಥವಿವರಣೆ ಅಥವಾ ವ್ಯಾಖ್ಯಾನ ಮಾಡುವ ಕೆಲಸವಾಗಿತ್ತು. ಈ ಒಂದು ಗುರುತರವಾದ ಕಾರ್ಯಕ್ಕಾಗಿ ಸಾಯಣರು ತಮ್ಮನ್ನು ಸಮರ್ಪಿಸಿಕೊಂಡುದಲ್ಲದೆ ವಿವಿಧಶಾಖೆಗಳಲ್ಲಿ ಆಗಿನ ಕಾಲಕ್ಕೆ ಉಪಲಬ್ಧವಾಗಿದ್ದ ಶಾಸ್ತ್ರಜ್ಞಾನದ ಸಾರವನ್ನು ಹೊಸರೂಪದಲ್ಲಿ ಸಂಗ್ರಹಿಸಿದರು. 'ಸುಧಾನಿಧಿ' ಎನ್ನುವುದು 'ಸಂಗ್ರಹ'ಗಳು ಎನ್ನುವುದಕ್ಕೆ ಸಾಯಣರು ಹೊಸದಾಗಿ ಸೃಷ್ಟಿಸಿದ ಆಲಂಕಾರಿಕ ಶಬ್ದ'[7].

1. **ಸುಭಾಷಿತ ಸುಧಾನಿಧಿ:**

ವಿಜಯನಗರ ಸಾಮ್ರಾಜ್ಯದ ಪ್ರಾರಂಭದ ದೆಶೆಯಲ್ಲಿ ರಚಿತವಾದ ಸಂಗ್ರಹಗಳಲ್ಲಿ 'ಸುಭಾಷಿತ ಸುಧಾನಿಧಿ' ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಅಧಿಕೃತ ಪ್ರಾಚೀನ ಗ್ರಂಥಗಳಿಂದ ಆಯ್ದ ಉತ್ಕೃಷ್ಟ ಶ್ಲೋಕಗಳಿಂದ ಕೂಡಿರುವ ಈ ಗ್ರಂಥ ಆ ಪ್ರಕಾರದ ಕೃತಿಗಳಲ್ಲೇ ಮೊದಲನೆಯದು. ಇದರಲ್ಲಿ ಧರ್ಮಪರ್ವ, ಅರ್ಥಪರ್ವ, ಕಾಮಪರ್ವ ಹಾಗೂ ಮೋಕ್ಷಪರ್ವ ಎಂದು ನಾಲ್ಕು ಭಾಗಗಳಿವೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವು ಭಾರತೀಯ ದಾರ್ಶನಿಕರು ಅಂಗೀಕರಿಸಿದಂತೆ ಜೀವನದ ನಾಲ್ಕು ವಿಧವಾದ ಮೌಲ್ಯಗಳು ಅಥವಾ ನಾಲ್ಕು ಲಕ್ಷ್ಯಗಳು. ರಚನಾವಿಧಾನದಲ್ಲಿ ಅಳವಡಿಸಿಕೊಂಡಿರುವ ಈ ಮೂಲತತ್ವವೇ ಈ ಗ್ರಂಥಕ್ಕೆ ಪುರಾತನ ಭಾರತೀಯ ಸಂಸ್ಕೃತಿಯ ವಿಶ್ವಕೋಶದ ಮೌಲ್ಯದ ಅರ್ಹತೆಯನ್ನು ತಂದು ಕೊಟ್ಟಿದೆ. ಈ ಗ್ರಂಥದ ನಾಲ್ಕು ಭಾಗಗಳಲ್ಲಿ ಮೊದಲನೆಯದಾದ 'ಅರ್ಥಪರ್ವ'ವು ಉನ್ನತ ಸ್ಥಾನವನ್ನು ಪಡೆದಿದೆ. ಏಕೆಂದರೆ ಈ ಗ್ರಂಥವು ಮುಖ್ಯವಾಗಿ ರಾಜಕುಮಾರರು ಹಾಗೂ ಆಡಳಿತಕಾರರಿಗೆ ಮಾರ್ಗದರ್ಶನವನ್ನು ನೀಡುವುದಕ್ಕಾಗಿಯೇ ವಿರಚಿತವಾಗಿರುವುದು. ಅಲ್ಲದೆ ಇದು ಈ ಗ್ರಂಥದ ಒಂದು ವೈಶಿಷ್ಟ್ಯವೂ ಆಗಿದೆ. ವ್ಯಾಪ್ತಿವಿಸ್ತಾರದಲ್ಲಿ 'ಅರ್ಥಪರ್ವ'ವನ್ನು ಬಿಟ್ಟರೆ ಮುಂದಿನ ಸ್ಥಾನ 'ಧರ್ಮಪರ್ವ'ಕ್ಕೆ ಸಲ್ಲುತ್ತದೆ. ಆನಂತರದ 'ಕಾಮಪರ್ವ'ವು ಬಿಡಿಬಿಡಿಯಾಗಿಯೂ ಸುಂದರವಾಗಿರುವ ಮುತ್ತಿನಂತಹ ಮುಕ್ತಕಗಳಿಂದ ಪೂರ್ಣಗೊಳಿಸಲ್ಪಟ್ಟಿದೆ[8].

**2. ಪುರುಷಾರ್ಥ ಸುಧಾನಿಧೀ:**

ಅದರ ಹೆಸರೇ ಸೂಚಿಸುವಂತೆ ಸಾಯಣರ ಈ ಗ್ರಂಥವು ಪ್ರಾಚೀನ ಕಾಲದಿಂದ ಭಾರತೀಯರು ತಿಳಿದುಕೊಂಡಿರುವ ಮಾನವಜನ್ಮದ ಚತುರ್ವಿಧ ಪುರುಷಾರ್ಥಗಳನ್ನು ಕುರಿತು ವಿಚಾರ ಮಾಡುತ್ತದೆ. ಇದು ವ್ಯಾಸರಿಂದ ರಚಿತವಾದ ಪುರಾಣಗಳಿಂದ ಆಯ್ದು ಸಂಗ್ರಹಿಸಿದ ಪದ್ಯಗಳ ಸಂಕಲನ. ಇದರಲ್ಲಿ ಮಾನವಜನ್ಮದ ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಕುರಿತು ವಿವೇಚಿಸುವ 'ಸ್ಕಂಧ' ಎಂದು ಕರೆಯಲ್ಪಡುವ ನಾಲ್ಕು ಭಾಗಗಳಿವೆ. ಧರ್ಮವನ್ನು ಕುರಿತಾದ ಸ್ಕಂಧದಲ್ಲಿ 48 ಅಧ್ಯಾಯಗಳಿದ್ದು ಅದು ಇಡೀ ಗ್ರಂಥದಲ್ಲಿಯೇ ಪ್ರಮುಖ ಸ್ಥಾನವನ್ನು ಪಡೆದಿದ್ದರೆ, ಅರ್ಥ, ಕಾಮ, ಹಾಗೂ ಮೋಕ್ಷವನ್ನು ಕುರಿತ ಸ್ಕಂಧಗಳಲ್ಲಿ ಕ್ರಮವಾಗಿ 23, 14 ಮತ್ತು 17 ಅಧ್ಯಾಯಗಳಿವೆ. ಪೀಠಿಕೆ ಹಾಗೂ ಮುಕ್ತಾಯದ ಶ್ಲೋಕಗಳು ಈ ಗ್ರಂಥದ ಪ್ರಾಮುಖ್ಯತೆಯನ್ನು ಕುರಿತು ಹೇಳುತ್ತವೆ.

**3. ಅಲಂಕಾರ ಸುಧಾನಿಧಿ:**

ಓರ್ವ ಸಂಗ್ರಹಕಾರನಾಗಿ ಸಾಯಣನು ಸಂಸ್ಕೃತ ಕಾವ್ಯ ಮೀಮಾಂಸೆಯ ವಿಷಯದ ಕಡೆಗೆ ತನ್ನ ಗಮನ ಹರಿಸಿದನು. ಗ್ರಂಥದ ಹೆಸರೇ ತಿಳಿಸುವಂತೆ 'ಅಲಂಕಾರ ಸುಧಾನಿಧಿ'ಯು ಪ್ರಾಚೀನ ಅಲಂಕಾರಿಕರು ನಿರೂಪಿಸುವ ವಿವಿಧ ಅಲಂಕಾರಗಳನ್ನು ಸಂಗ್ರಹಿಸಿ ಹೇಳಿರುವ ಒಂದು ಗ್ರಂಥ. ಸಾಯಣನ 'ಅಲಂಕಾರ

ಸುಧಾನಿಧಿ'ಯು ವಿವಿಧ ಅಲಂಕಾರಗಳ ವಿವರಣೆ, ನಿರೂಪಣೆಗಾಗಿ ಸ್ವತಃ ಸಾಯಣನನ್ನೇ ಕುರಿತ ಪ್ರಶಂಸಾ ಶ್ಲೋಕಗಳನ್ನು ಒಳಗೊಂಡಿರುವ ಒಂದು ವಿಶಿಷ್ಟ ಹಾಗೂ ಅನನ್ಯ ಕೃತಿ. ಇದರಲ್ಲಿನ ಕೆಲವು ಶ್ಲೋಕಗಳು ಭಾಗಶಃ ಸಾಯಣನಿಂದಲೂ, ಭಾಗಶಃ 'ಉದಾಹರಣ ಮಾಲಾ'ವನ್ನು ರಚಿಸಿದನೆಂದು ಹೇಳಲಾದ ಭೋಗನಾಥನೆಂಬುವನಿಂದಲೂ ಬರೆಯಲ್ಪಟ್ಟಿವೆ. ಈ ಶ್ಲೋಕಗಳು ಸಾಯಣನನ್ನು, ಅವನ ರಾಜ್ಯಭಾರ ಮತ್ತು ಆಡಳಿತ ಕ್ರಮವನ್ನು, ಪ್ರಾಚೀನ ಸಾಹಿತ್ಯದಲ್ಲಿ ಅವನಿಗಿದ್ದ ವಿಸ್ತಾರವೂ ಆಳವೂ ಆದ ಜ್ಞಾನವನ್ನು, ಇಮ್ಮಡಿ ಸಂಗಮನ ಗುರುವಾಗಿ ಆತ ನಿರ್ವಹಿಸಿದ ಪಾತ್ರವನ್ನು ಮತ್ತು ಯುದ್ಧರಂಗದಲ್ಲಿ ಪರಾಕ್ರಮಿ ಯೋಧನಾಗಿ ಚಂಪರಾಜನನ್ನು ಸೋಲಿಸಿ ಗರುಡನಗರದ ಕೋಟೆಯನ್ನು ಧೂಳೀಪಟ ಮಾಡಿದ ಸಂಗತಿಯನ್ನು ರಮ್ಯವಾಗಿ ಶ್ಲಾಘಿಸುತ್ತವೆ[9].

**4. ಆಯುರ್ವೇದ ಸುಧಾನಿಧಿ:**

ಹೆಸರೇ ಸೂಚಿಸುವಂತೆ ಇದು ಆಯುರ್ವೇದದ ಅಥವಾ ಭಾರತೀಯ ಔಷಧಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಕುರಿತು ವಿಚಾರ ಮಾಡುವ ಒಂದು ಸಂಗ್ರಹ ಗ್ರಂಥ. ಇದೇ ಗ್ರಂಥಕಾರನ 'ಅಲಂಕಾರ ಸುಧಾನಿಧಿ'ಯಲ್ಲಿ ಇದರ ಹೆಸರನ್ನು ಹೇಳಿರುವ ಕಾರಣ ಈ ಸಂಕಲನ ಗ್ರಂಥವು 'ಅಲಂಕಾರ ಸುಧಾನಿಧಿ'ಗಿಂತ ಮುನ್ನವೇ ರಚಿಸಲ್ಪಟ್ಟುದಾಗಿರಬೇಕು.

**5. ಯಜ್ಞತಂತ್ರ ಸುಧಾನಿಧಿ:**

ಗ್ರಂಥದ ಹೆಸರೇ ಸೂಚಿಸುವಂತೆ ಇದು ವೇದ, ಬ್ರಾಹ್ಮಣ ಮತ್ತಿತರ ಅಧಿಕೃತ ಗ್ರಂಥಗಳಲ್ಲಿ ವಿಚಾರಿಸಲಾಗಿರುವ ಯಜ್ಞಯಾಗಾದಿಗಳ ಹಾಗೂ ಮತಕ್ಕೆ ಸಂಬಂಧಿಸಿದ ಕರ್ಮ ಮತ್ತು ಪ್ರಕ್ರಿಯೆಗಳನ್ನು ಕುರಿತಾದ ಗ್ರಂಥ. ಆನಪ್ರಿಯವಾದ ಶ್ರೌತ ಪ್ರಯೋಗ ಪ್ರಕರಣ ಗ್ರಂಥವೆಂಬುದಾಗಿ ಇದು ಪರಿಗಣಿಸಲ್ಪಟ್ಟಿದೆ.

**6. ಪ್ರಾಯಶ್ಚಿತ್ತ ಸುಧಾನಿಧಿ:**

ಈ ಗ್ರಂಥವನ್ನು ರಚಿಸುವುದರ ಮೂಲಕ ಸಾಯಣರು ಪ್ರಾಯಶ್ಚಿತ್ತ ಅಥವಾ ಧಾರ್ಮಿಕ ಕ್ರಿಯಾ ವಿಧಾನಗಳಲ್ಲಿ ಆದ ಚ್ಯುತಿಗಳಿಗೆ ಪರಿಹಾರೋಪಾಯರೂಪದಲ್ಲಿ ನಡೆಸಬೇಕಾದ ಪ್ರಕ್ರಿಯೆಗಳಿಗೆ ಸಂಬಂಧೀಸಿದಂತೆ ಮಹತ್ತರ ಕೊಡುಗೆ ನೀಡಿದ್ದಾರೆ. 'ಕರ್ಮ ವಿಪಾಕ'ವೆಂದೂ ಕರೆಯಲಾಗಿರುವ ಈ ಕೃತಿ ಪ್ರಾಯಶ್ಚಿತ್ತಾರ್ಥವಾಗಿ ನಡೆಸಬೇಕಾದ ಹಲರೀತಿಯ ಶುದ್ಧೀಕರಣ ವಿಧಾನಗಳನ್ನು ವಿಧಿಸುತ್ತದೆ.

**7. ಧಾತುವೃತ್ತಿ:**

ಸಂಸ್ಕೃತ ವ್ಯಾಕರಣ ಕ್ಷೇತ್ರದಲ್ಲಿ ಸಾಯಣನ 'ಧಾತುವೃತ್ತಿ' ಒಂದು ಉನ್ನತ ಸ್ಥಾನವನ್ನು ಗಳಿಸಿರುತ್ತದೆ. ಇದು ಮಾಧವೀಯ 'ಧಾತುವೃತ್ತಿ' ಎಂಬ ಹೆಸರಿನಿಂದ ಜನಪ್ರಿಯವಾಗಿದೆ. ಈ ಅಂಶವು ಡಾ. ಕೃಷ್ಣಮೂರ್ತಿಯವರು ತಮ್ಮ 'ಸಾಯಣನ ಸುಭಾಷಿತ ಸುಧಾನಿಧಿ' ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುವಾಗ ಕೈತಪ್ಪಿರಬಹುದು[10]. ಆ ಗ್ರಂಥದ 9ನೆಯ ಪುಟದಲ್ಲಿ ಅವರು 'ಧಾತುವೃತ್ತಿ' ಗ್ರಂಥವು ಮಾಧವ ಕೃತವೆಂದು ಹೇಳಿರುತ್ತಾರೆ. 'ಧಾತುವೃತ್ತಿ'ಯು ಸಂಸ್ಕೃತ ಧಾತುಗಳನ್ನು

ಕುರಿತ ಒಂದು ಸಪ್ರಮಾಣವಾದ ಪ್ರಕರಣ ಗ್ರಂಥವಾಗಿದೆ. ಧಾತುಗಳನ್ನು ಸಮಗ್ರವಾದ ರೀತಿಯಲ್ಲಿ ವಿಚಾರ ಮಾಡುವ ವಿಷಯದಲ್ಲಿ ಈ ಗ್ರಂಥವು ಪಾಣಿನಿಯ 'ಧಾತು ಪಾಠ'ವನ್ನು ಅನುಸರಿಸುತ್ತದೆ. ಪೀಠಿಕಾಶ್ಲೋಕಗಳಲ್ಲಿ ಹಾಗೂ ಸಮಾಪ್ತಿ ವಚನಗಳಲ್ಲಿ ಸಾಯಣರು ಈ ಗ್ರಂಥವನ್ನು 'ಮಾಧವೀಯ ಧಾತುವೃತ್ತಿ'ಯೆಂದೇ ಕರೆದಿರುತ್ತಾರೆ.

**೮. ಗಂಗಾದೇವಿಯ 'ಮಧುರಾವಿಜಯಂ'**:

ವಿಜಯನಗರ ಸಾಮ್ರಾಜ್ಯದ ಆರಂಭಿಕ ಕಾಲದಲ್ಲಿ ರಚಿತವಾದ ಸಂಸ್ಕೃತ ಗ್ರಂಥಗಳಲ್ಲಿ ಗಂಗಾದೇವಿಯ 'ಮಧುರಾವಿಜಯಂ'ವು ಒಂದು ಮುಖ್ಯವಾದ ಸ್ಥಾನವನ್ನು ಪಡೆದಿರುತ್ತದೆ. 'ಮಧುರಾವಿಜಯಂ' ಕಾವ್ಯದ ವ್ಯಾಸಂಗದಿಂದ ಗಂಗಾದೇವಿಯು ಓರ್ವ ಉತ್ತಮ ಕವಿಯ ಲಕ್ಷಣಗಳೆಲ್ಲವನ್ನೂ ಹೊಂದಿದ್ದಳೆಂಬ ಅಂಶವನ್ನು ಕಾಣಬಹುದು. ಗಂಗಾದೇವಿಯ ಕಾವ್ಯದ ಅಸಾಧಾರಣ ಲಕ್ಷಣಗಳಲ್ಲಿ ಅವಳು ತನಗಿಂತ ಹಿಂದೆ ಇದ್ದ ಹಾಗೂ ಸಮಕಾಲೀನ ಮಹಾಕವಿಗಳ ಹೆಸರುಗಳನ್ನು ಅವರವರ ವೈಶಿಷ್ಟ್ಯಗಳನ್ನು ನಿರ್ದೇಶಿಸಿ ಹೇಳುತ್ತಾಳೆ ಎನ್ನುವುದು ಮುಖ್ಯವಾದ ಒಂದು ಲಕ್ಷಣ. ಈ ರೀತಿಯಾಗಿ ಅವಳು ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ, ಭಾರವಿ, ದಂಡಿನ್, ಭವಭೂತಿ, ಕರ್ಣಾಮೃತ ಕವಿ, ತಿಕ್ಕಯ್ಯ, ಅಗಸ್ತ್ಯ, ಗಂಗಾಧರ ಮತ್ತು ವಿಶ್ವನಾಥರಂತಹ ಪ್ರಸಿದ್ಧ ಕವಿಗಳನ್ನು ಭಕ್ತಿ ವಿಶ್ವಾಸಗಳಿಂದ ಕಂಡು ಆರಾಧಿಸುತ್ತಾಳೆ[11]. ಇವು ಸಂಸ್ಕೃತ ಸಾಹಿತ್ಯದಲ್ಲಿ ಅದರ ಅತ್ಯುನ್ನತ ಮಟ್ಟದಲ್ಲಿ ಪ್ರಾತಿನಿಧಿಕವಾದ ಹೆಸರುಗಳಾಗಿವೆ ಮತ್ತು ಗಂಗಾದೇವಿಯು

ಅತ್ಯಂತ ಪ್ರಸಿದ್ಧರೂ ಪ್ರತಿಭಾವಂತರೂ ಆದ ಈ ಕವಿಗಳ ವಿಮರ್ಶಕಳ ಪಾತ್ರವನ್ನು ಬಹು ಆಸಾಧಾರಣ ರೀತಿಯಲ್ಲಿ ನಿರ್ವಹಿಸುತ್ತಾಳೆ. ಇವರಲ್ಲಿ ಪ್ರತಿಯೊಬ್ಬ ಕವಿಗೂ ಮೀಸಲಿಟ್ಟಿರುವ ಒಂದೊಂದೇ ಪದ್ಯಗಳಲ್ಲಿ ಅವಳು ಆಯಾ ಕವಿಗಳ ವಿಶಿಷ್ಟ ಯೋಗ್ಯತೆಯನ್ನು ಸ್ಪಷ್ಟಪಡಿಸುತ್ತಾಳೆ".

ಕಾಳಿದಾಸನನ್ನು ಎಲ್ಲ ಕವಿಗಳಿಗೆ ಆದರ್ಶಪ್ರಾಯನಾದವನೆಂದು ಗಂಗಾದೇವಿ ಪರಿಗಣಿಸುತ್ತಾಳೆ. ಗಂಗಾದೇವಿ ಕಾಳಿದಾಸನನ್ನೇ ಅನುಸರಿಸಿ ತನ್ನ ಕಾವ್ಯರಚನಾ ಶಕ್ತಿಯನ್ನು ಸಮರ್ಥವಾಗಿ ಪ್ರದರ್ಶಿಸಿದ್ದಾಳೆಂದು 'ಮಧುರಾವಿಜಯಂ'ದ ಅಧ್ಯಯನದಿಂದ ನಮಗೆ ತಿಳಿದುಬರುತ್ತದೆ.

**೯. ಮಾಧವಚಾರ್ಯರ "ಸರ್ವದರ್ಶನ ಸಂಗ್ರಹ":**

ಅನೇಕ ಶತಮಾನಗಳಿಂದ ಭಾರತದಲ್ಲಿ ಉಚ್ಛ್ರಾಯಸ್ಥಿತಿಯಲ್ಲಿದ್ದ ವಿವಿಧ ದಾರ್ಶನಿಕ ಪದ್ಧತಿಗಳ ಬಗ್ಗೆ ವಿವರಗಳನ್ನು ತಿಳಿಯಲು ಇದು ಅತ್ಯಂತ ಮುಖ್ಯವಾದ ಆಕರಗ್ರಂಥ. ಮಹಾ ಐರೋಪ್ಯ ವಿದ್ವಾಂಸನಾದ ವಿಲ್ಸನ್ನನು ಏಷಿಯಾಟಿಕ್ ರಿಸರ್ಚಸ್‌ನ 16ನೆಯ ಸಂಪುಟದಲ್ಲಿ ಮೊತ್ತ ಮೊದಲು ಕಲ್ಕತ್ತೆಯಲ್ಲಿ ೧೮೨೮ರಲ್ಲಿ ಪ್ರಕಾಶಿಸಲ್ಪಟ "ಹಿಂದೂ ಧಾರ್ಮಿಕ ಪಂಥಗಳ ಇತಿಹಾಸ" ಎಂಬ ಗ್ರಂಥವನ್ನು ರಚಿಸುವ ಸಂದರ್ಭದಲ್ಲಿ ಈ 'ಸರ್ವದರ್ಶನ ಸಂಗ್ರಹ' ಗ್ರಂಥದ ಉಪಯೋಗವನ್ನು ಪಡೆದು ಕೊಂಡನೆಂಬುದು ಗಮನಾರ್ಹವಾದ ವಿಷಯವಾಗಿದೆ. ಡಾ. ಎಸ್. ರಾಧಾಕೃಷ್ಣನ್‌ರವರು ಮತ್ತು ಸಿ.ಎ. ಮೂರ್‌ರವರ "ಂ ಖಾಡಿಛಿಜ ಃಡಿಞ ಟಿ ಖಿಟಿಜಚಿಟಿ ಘಿಟಥಿಯಿಥಿ" ಎಂಬ ಗ್ರಂಥಕ್ಕೆ ಬರೆದಿರುವ ಪ್ರಸ್ತಾವನೆಯಲ್ಲಿ

ಸಂಕ್ಷೇಪವಾಗಿ ತಿಳಿಸಿರುವಂತೆ, ಭಾರತೀಯ ದರ್ಶನದ ಉದ್ದೇಶವನ್ನು ನಾವು ತಿಳಿದುಕೊಂಡ ಪಕ್ಷದಲ್ಲಿ ಈ ಗ್ರಂಥದ ಪ್ರಾಮುಖ್ಯತೆಯನ್ನು ಸ್ಪಷ್ಟವಾಗಿ ಗ್ರಹಿಸಬಹುದು[12].

'ಸರ್ವದರ್ಶನ ಸಂಗ್ರಹ'ವು ಪಾರಮಾರ್ಥಿಕವಲ್ಲದ ಎಂದರೆ ಪ್ರಾಪಂಚಿಕ ದ್ರವ್ಯ ವಾಸ್ತವತಾವಾದಕ್ಕೆ ಸಂಬಂಧಿಸಿದ ಭಾರತೀಯ ದರ್ಶನದಿಂದ ಮೊದಲುಗೊಂಡು ಶಂಕರರ ಅದ್ವೈತ ವೇದಾಂತದಲ್ಲಿ ಮುಕ್ತಾಯವಾಗುವವರೆಗೆ ಭಾರತೀಯ ದರ್ಶನ ಸಿದ್ಧಾಂತದ ಹದಿನಾರು ಪದ್ಧತಿಗಳ ವಿವರಗಳನ್ನು ನೀಡುತ್ತದೆ. ಈ ಮೂಲಕ ಗ್ರಂಥಕಾರರು ವಾಸ್ತವವಾಗಿ ತಾವು 'ಸದ್ವೈತ ವೇದಾಂತ'ದ ನಿಷ್ಠಾವಂತ ಅನುಯಾಯಿಗಳೆಂಬ ಅಂಶವನ್ನು ಪ್ರಕಟಿಸಿರುತ್ತಾರೆ. ಆದರೆ ಆವರು ವಿವರಗಳನ್ನು ಕೊಡುವಲ್ಲಿ ಪ್ರತಿಪದ್ಧತಿಯ ಶ್ರದ್ಧಾಪೂರ್ಣ ವ್ಯಾಸಂಗವು, ಗ್ರಂಥಕರ್ತೃವು ಆಯಾ ಪದ್ಧತಿಯ ಪರವಾಗಿ ಕಂಠೋಕ್ತ ಸಮರ್ಥನೆ ಮಾಡುತ್ತಿರುವನೋ ಎಂಬಂತೆ ವಾದ ಮಾಡುತ್ತಿರುವ ಅಂಶವನ್ನು ತೆರೆದು ತೋರುತ್ತದೆ. ಚಾರ್ವಾಕರ ಭಾರತೀಯ ವಾಸ್ತಾವತಾ ಸಿದ್ಧಾಂತವೂ ಕೂಡ ಸಾಕಷ್ಟು ವಿವರವಾಗಿ ವಿವೇಚಿಸಲ್ಪಟ್ಟಿದೆ. ಹೀಗಾಗಿ ಇಂದಿಗೂ ಸಹ ಚಾರ್ವಾಕದರ್ಶನತತ್ವಗಳನ್ನು ತಿಳಿದುಕೊಳ್ಳುವಲ್ಲಿ ಇದು ಪ್ರಮುಖ ಆಕರಗ್ರಂಥವಾಗಿದೆ[13].

**10. ವಿದ್ಯಾಮಾಧವನ "ವಿದ್ಯಾಮಾಧವೀಯ":**

ಭಾರತೀಯ ಜ್ಯೋತಿಶ್ಶಾಸ್ತ್ರವನ್ನು ಕುರಿತಾದ ಈ ಕೃತಿ ವಿಜಯನಗರ ಪ್ರಾರಂಭಕಾಲದಲ್ಲಿ ರಚಿತವಾಯಿತು. ಬುಕ್ಕರಾಜನ ಆಶ್ರಿತನಾಗಿ ಪ್ರವರ್ಧಮಾನಕ್ಕೆ ಬಂದ ಗ್ರಂಥಕರ್ತನ ಪುತ್ರ ವಿಷ್ಣುವು ಈ ಗ್ರಂಥಕ್ಕೆ ವ್ಯಾಖ್ಯಾನ ಬರೆದಿದ್ದಾನೆ. "ವಿದ್ಯಾಮಾಧವೀಯ"ವು ಅತ್ಯಂತ ಪ್ರಾಚೀನವಾದ ಭಾರತೀಯ ಜ್ಯೋತಿಶ್ಶಾಸ್ತ್ರವನ್ನು ಕುರಿತ ಒಂದು ಸಮಗ್ರ ಪ್ರಕರಣಗ್ರಂಥವೆಂಬುದಾಗಿ ಮಾನ್ಯತೆ ಪಡೆದಿದೆ. ವ್ಯಾಖ್ಯಾನಭಾಗವೂ ಸೇರಿ ಅದು 15000 ಗ್ರಂಥಶ್ಲೋಕಪ್ರಮಾಣವನ್ನು ಹೊಂದಿರುತ್ತದೆ. ನಿಷ್ಠಾವಂತ ಹಿಂದೂಗಳಿಗೆ ಈ ಗ್ರಂಥವು ಅಗತ್ಯ ಸಂದರ್ಭಗಳಲ್ಲಿ ಅವರ ವಿವಿಧ ಧಾರ್ಮಿಕ ಕರ್ಮಗಳ ಬಗ್ಗೆ ಅಧಿಕಾರಯುತವಾದ ಪರಾಮರ್ಶನ ಅಥವಾ ಸಲಹಾಗ್ರಂಥವಾಗಿ ಸ್ವಾಗತಾರ್ಹವಾಗಿದ್ದರೆ, ಭಾರತದ ಇತಿಹಾಸಕಾರನಿಗೆ ಮಧ್ಯಯುಗ ಹಾಗೂ ಆಧುನಿಕ ಕಾಲದಲ್ಲಿನ ಹಿಂದೂಗಳ ಸಮಾಜಶಾಸ್ತ್ರವನ್ನು ಕುರಿತಂತೆ ವಿಷಯ ಸಂಗ್ರಹಣೆಯಲ್ಲಿಯೂ ಅದರ ಪ್ರಾಮುಖ್ಯತೆ ಕಡಿಮೆಯಾದುದೇನೂ ಅಲ್ಲ"[14].

**11. ವೇದಸಾಹಿತ್ಯವನ್ನು ಕುರಿತು ಸಾಯಣನ ಭಾಷ್ಯ ಅಥವಾ ವ್ಯಾಖ್ಯಾನಗಳು:**

ವಿಜಯನಗರ ಸಾಮ್ರಾಜ್ಯದ ಆರಂಭದೆಸೆಯಲ್ಲಿ ರಚಿತವಾದ ಸಂಸ್ಕೃತ ಗ್ರಂಥಗಳಲ್ಲಿ ಸಾಯಣನು ರಚಿಸಿದ ವೈದಿಕಸಾಹಿತ್ಯದ ಮೇಲಿನ ವ್ಯಾಖ್ಯಾನಗಳು ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಒಂದು ಉನ್ನತ ಸ್ಥಾನವನ್ನು ಪಡೆದಿವೆ. ಈ ವಾಖ್ಯಾನಗಳು ನಮ್ಮ ಪ್ರಾಚೀನಕಾಲದ ಧರ್ಮ ಹಾಗೂ ದರ್ಶನ ಸಾಹಿತ್ಯಗಳಲ್ಲಿ

ಸಾಯಣನಿಗಿದ್ದ ವಿಶಾಲವಾದ ಪಾಂಡಿತ್ಯ ಮತ್ತು ಆಳವಾದ ಅರಿಮೆಗೆ ಐತಿಹಾಸಿಕ ಸ್ಮಾರಕಗಳಾಗಿವೆ. ಅವನ ವ್ಯಾಖ್ಯಾನಗಳು "ಮಂತ್ರಗಳ ನಿಸ್ಕೃತಷ್ಟವಾದ ತಿಳಿವಳಿಕೆ ಮತ್ತು ವಿವರಣೆಗೆ, ಪ್ರತಿಪಾದನೆಗೆ ವಿಶ್ವಸಾರ್ಹವೂ ಸುಸಂಗತವೂ ಆದ ಏಕೈಕ ಮಾರ್ಗ-ದರ್ಶಕಗಳಾಗಿವೆ. ಸಾಯಣನು, ಒಂದು ತಲೆಮಾರಿನಿಂದ ಮತ್ತೊಂದಕ್ಕೆ ಕೊಡಲ್ಪಟ್ಟಿರುವಂತೆ ದೇಶೀಯ ವೇದವ್ಯಾಖ್ಯಾನಕಾರದಿಂದ ನಮ್ಮ ಕಾಲದವರೆಗೆ ದತ್ತವಾಗಿರುವ ಮಂತ್ರಗಳಿಗೆ ನೇರವಾಗಿ ಪೂರ್ವಿಕರಿಂದ ಪಾರಂಪರಿಕವಾಗಿ ಬಂದಿರುವ ಅರ್ಥಗಳನ್ನು ನಮಗೆ ಒದಗಿಸಿ ತಿಳಿಯಪಡಿಸುವ ಏಕೈಕ ವ್ಯಾಖ್ಯಾತೃವಾಗಿದಾನೆ. ಈ ಗೌರವಾರ್ಹವಾದ ಪುರಾತನ ಕೃತಿಗಳಲ್ಲಿರುವ ಸೂಕ್ಷ್ಮ ಹಾಗೂ ಸುಲಭಗ್ರಾಹ್ಯವಲ್ಲದ ತತ್ವಗಳನ್ನು ಸಮರ್ಪಕವಾಗಿ ನಿರೂಪಿಸಲು ಈ ವ್ಯಾಖ್ಯಾನವು ಅಪಾರ ಮೌಲ್ಯವುಳ್ಳದ್ದಾಗಿದೆ[15].

**12. ಭೋಗನಾಥರ ಕೃತಿಗಳು:**

ವಿಜಯನಗರದ ಪ್ರಾರಂಭಕಾಲದಲ್ಲಿ ರಚಿತವಾದ ಕೃತಿಗಳ ಪರಿಗಣನೆಯು ಮಾಧವ ಮತ್ತು ಸಾಯಣರ ಕಿರಿಯ ಸಹೋದರನಾದ ಭೋಗನಾಥರ ಗ್ರಂಥಗಳನ್ನು ಹೆಸರಿಸದಿದ್ದಲ್ಲಿ ಪೂರ್ಣವಾಗಲಾರದು. ದುರದೃಷ್ಟವಶಾತ್ ಈಗ ಅವರ ಯಾವ ಕೃತಿಗಳೂ ಲಬ್ಧವಾಗಿರುವುದಿಲ್ಲ. ಸಾಯಣರು ತಮ್ಮಕೃತಿಗಳಲ್ಲಿ ಭೋಗನಾಥರು ರಚಿಸಿರುವ ಈ ಮುಂದೆ ತಿಳಿಸಿರುವ ಆರು ಕೃತಿಗಳಿಂದ ಭಾಗಗಳನ್ನು ಹೆಸರಿಸಿ ಉದ್ಧರಿಸಿರುತ್ತಾರೆ;

* ‘ರಾಮೋಲ್ಲಾಸ’; ರಾಮಾಯಣವನ್ನು ಆಧರಿಸಿದ ಒಂದು ಕಾವ್ಯ.
* ‘ತ್ರಿಪುರ ವಿಜಯ’: ತ್ರಿಪುರಾಸುರರ ಮೇಲೆ ಶಿವನ ವಿಜಯವನ್ನು ವರ್ಣಿಸುವ ಕಾವ್ಯ.
* ‘ಉದಾಹರಣಮಾಲಾ’: ಸಂಸ್ಕೃತ ಅಲಂಕಾರಗಳ ಉದಾಹರಣೆಗಳಾಗಿ ಪರಿಗಣಿಸಬಹುದಾದ ಶ್ಲೋಕಗಳನ್ನೊಳಗೊಂಡಿರುವ ಕಾವ್ಯ. ಇದರ ಎಲ್ಲಾ ಶ್ಲೋಕಗಳೂ ಸಾಯಣರ ಪ್ರಶಂಸಾಪರವಾಗಿರುವುದು ಈ ಕಾವ್ಯದ ವಿಶೇಷಾಂಶ.
* ‘ಮಹಾಗಣಪತಿಸ್ತವ’: ಗಣಪತಿ ದೇವರ ಸ್ತೋತ್ರ.
* ‘ಶೃಂಗಾರ ಮಂಜರಿ’: ಶೃಂಗಾರಭಾವಗಳ ಸಂಬಂಧವಾದ ಚಿತ್ತವೃತ್ತಿಯನ್ನು ವರ್ಣಿಸುವ ಶ್ಲೋಕಗಳನ್ನು ಹೊಂದಿದೆ[16].

**13. ಇತರ ಲಘು ಕಾವ್ಯಗಳು:**

ಈ ಕಾಲದಲ್ಲಿ ಸಂಸ್ಕೃತದಲ್ಲಿ ರಚಿತವಾದ ಇತರ ಕೆಲವು ಲಘುಕಾವ್ಯಗಳೂ ಇವೆ.

* **ಭಾಸ್ಕರನ ‘ಉನ್ನತರಾಘವ:** ಇದೊಂದು ಏಕಾಂಕ ನಾಟಕ. ದೂರ್ವಾಸರ ಶಾಪದ ಕಾರಣವಾಗಿ, ಪುಷ್ಪ ಸಂಚಯನವನ್ನು ನಿಷೇಧಿಸಿದ್ದ ಒಂದು ಹೂದೋಟದಲ್ಲಿ ಸೀತೆಯು ಇದ್ದಕ್ಕಿದ್ದಂತೆ ಅದೃಶ್ಯಗಳಾದ ಸಂದರ್ಭದಲ್ಲಿ ವಿರಹಿ ರಾಮನನ್ನು ವರ್ಣಿಸುತ್ತದೆ. ಈ ಶಾಪದ ಕಾರಣವಾಗಿ ಸೀತೆಯು ಒಂದು ಜಿಂಕೆಯಾಗಿ

ಪರಿವರ್ತಿತಳಾಗಿದ್ದಳು. ಅಗಸ್ತಮುನಿಯು ಸೀತೆಯನ್ನು ಹಿಂದಕ್ಕೆ ಪಡೆಯಲು ರಾಮನಿಗೆ ನೆರವಾಗುತ್ತಾನೆ. ಈ ನಾಟಕವು ಪೂರ್ಣವಾಗಿ ಕಾಳಿದಾಸನ 'ವಿಕ್ರಮೋರ್ವಶೀಯ' ನಾಟಕದ ನಾಲ್ಕನೆಯ ಅಂಕದ ಮಾದರಿಯನ್ನನುಸರಿಸಿ ರಚಿಸಲ್ಪಟ್ಟಿದೆ.

- **ಚಿನ್ನಭಟ್ಟನ 'ತರ್ಕಭಾಷಾಪ್ರವೇಶಿಕಾ'**: ಭಾರತೀಯ ತರ್ಕಶಾಸ್ತ್ರದ ಅಧ್ಯಯನವನ್ನು ಆರಂಭಿಸುವವರಿಗೆ, ಮಿಥಿಲಾನಗರದ ಕೇಶವ ಮಿಶ್ರನ 'ತರ್ಕಭಾಷಾ' ಎಂಬ ಗ್ರಂಥವು ಬಹು ಉಪಯುಕ್ತವಾದುದೆಂಬುದಾಗಿ ಪರಿಗಣಿಸಲ್ಪಟ್ಟಿದೆ. ಭಾರತೀಯ ತರ್ಕಶಾಸ್ತ್ರವನ್ನು ಕುರಿತು ಅದನ್ನು ಒಂದು ಪ್ರವೇಶ ಪಠ್ಯಪುಸ್ತಕವಾಗಿ ಬರಯಲಾಗಿದೆ.

ಈ ರೀತಿಯಾಗಿ ಈ ಸಮೀಕ್ಷೆಯು ವಿಜಯನಗರದ ಪ್ರಾರಂಭಕಾಲದಲ್ಲಿ ಬೆಳಕಿಗೆ ಬಂದ ಸಂಸ್ಕೃತ ಕೃತಿಗಳು, ಅವುಗಳಲ್ಲಿ ಬಹುಪಾಲು ಗ್ರಂಥಗಳು ಸೃಜನಶೀಲ ಲಕ್ಷಣಗಳನ್ನು ಹೊಂದಿಲ್ಲವಾದರೂ, ಅವು ನಮ್ಮ ಪ್ರಾಚೀನ ಮತ ಧರ್ಮಗಳು ಹಾಗೂ ಪರಂಪರೆಯನ್ನು ಅಧಿಕ ಪ್ರಮಾಣದಲ್ಲಿ ಉಳಿಸಿ, ರಕ್ಷಿಸಿಕೊಂಡು ಬರುವುದರಲ್ಲಿ ಬಹು ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡಿವೆಯೆಂಬ ಅಂಶವನ್ನು ಎತ್ತಿ ತೋರಿಸುತ್ತದೆ[17].

- **ಕನ್ನಡ ಹಾಗೂ ತೆಲಗು ಗ್ರಂಥಗಳು**:

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಗೊತ್ತಾದ ಕಾಲದಲ್ಲಿ ಒಂದು ನಿರ್ದಿಷ್ಟವಾದ ಧರ್ಮಕ್ಕೆ ಸೇರಿದ ಕವಿಗಳು ಅಥವಾ ಗ್ರಂಥಕಾರರು ಮೇಲುಗೈ ಹೊಂದಿರುವುದನ್ನು ನಾವು ಗಮನಿಸಬಹುದು. ಕನ್ನಡ ಸಾಹಿತ್ಯದ ಆರಂಭ ದೆಸೆಯಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಕಾವ್ಯಗಳು ಅಧಿಕ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಅಂತಯೇ 12 ಹಾಗೂ 13ನೆಯ ಶತಮಾನಕ್ಕೆ ಆರಿಸಿಕೊಂಡಿರುವ ಕಾಲದಲ್ಲಿ ಜೈನ, ವೀರಶೈವ ಮತ್ತು ವೇದಗಳಿಗೆ ಸಂಬಂಧಿಸಿದ ಅಥವಾ ಬ್ರಾಹ್ಮಣ ಸಾಹಿತ್ಯಗಳು ಏಕಕಾಲದಲ್ಲಿ ನಮಗೆ ಕಾಣಸಿಗುತ್ತದೆ. ಹೀಗೆ ವಿಜಯನಗರದ ಕಾಲವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸಂಕ್ರಮಣಕಾಲವಾಗಿದ್ದಿತು.

ಶ್ರೀನಾಥ ಕವಿಯ ಕಾವ್ಯಗಳು ಸಮಕಾಲೀನ ಜನಜೀವನವನ್ನು ಪ್ರತಿಬಿಂಬಿಸುತ್ತವೆ. ಶ್ರೀನಾಥನು ತನ್ನ ಸಾಹಿತ್ಯಗ್ರಂಥಗಳಲ್ಲಿ ತನ್ನ ಕಾಲದ ಎಲ್ಲ ಮುಖಗಳನ್ನು ಕನ್ನಡಿಸಿದ್ದಾನೆಂದು ಹೇಳಬಹುದು.

ಈಚಿನ ಕಾಲಕ್ಕೆ ನಾವು ತೆಲಗು ಮತ್ತು ಕನ್ನಡ ಭಾಷೆಗಳನ್ನಾಡುವ ಪ್ರದೇಶಗಳನ್ನು ಆಂಧ್ರ ಮತ್ತು ಕರ್ನಾಟಕ ಎಂಬುದಾಗಿ ಗುರುತಿಸುತ್ತೇವೆ. ಆದರೆ ಪ್ರಾರಂಭ ಕಾಲಕ್ಕೆ ಈ ರೀತಿ ಇರಲಿಲ್ಲ. ವಿಜಯನಗರದ ಪ್ರಾರಂಭಕಾಲದ ರಾಜರುಗಳ ಆಳ್ವಿಕೆಯ ಕಾಲದಲ್ಲಿ ತೆಲಗು ಮಾತನಾಡುವ ಪ್ರದೇಶವು ಕನ್ನಡ ಮಾತನಾಡುವ ಪ್ರದೇಶಗಳ ನಿಕಟ ಸಂಪರ್ಕ ಹೊಂದಿತು. ನಿಜಾಂಶವೆಂದರೆ ಅದರ ರಾಜಧಾನಿಯು ದ್ವಿಭಾಷಾ ಪ್ರದೇಶದಲ್ಲಿ ನಲೆಗೊಂಡಿದ್ದಿತು[18].

ಕನ್ನಡ ಸಾಹಿತ್ಯದಲ್ಲಿ ವೀರಶೈವ ಆಂದೋಲನವು ನಡೆದ ಮೇಲೆ, ಕವಿಗಳು ಯಾವೊಬ್ಬ ರಾಜ ಅಥವಾ ಇತರ ವ್ಯಕ್ತಿಗಳ, ಅವರು ಭಕ್ತರಾಗಿದ್ದ ಪಕ್ಷದಲ್ಲಿ ಅದರ ಹೊರತಾಗಿ ಆಶ್ರಯ, ಪ್ರೋತ್ಸಾಹಗಳನ್ನು ಸ್ವೀಕರಿಸುವ ವಿಚಾರದಲ್ಲಿ ಒಂದು ಬಗೆಯ ಜುಗುಪ್ಸೆ ಮತ್ತು ವಿರೋಧಭಾವವನ್ನು ಬೆಳಸಿಕೊಂಡಿದ್ದರು. ಹರಿಹರನು ಯಾವೊಬ್ಬ ರಾಜನ ಆಶ್ರಯ ಪಡೆಯುವುದನ್ನು ಬಹಿರಂಗವಾಗಿ ನಿರಾಕರಿಸಿದವರಲ್ಲಿ ಮೊದಲಿಗನಾಗಿದ್ದನು. ಹರಿಹರನ ಅನಂತರ ಈ ರೂಢಿಯು ಇಳಿಮುಖವಾಯಿತು. ಈ ಎಲ್ಲ ಕಾರಣಗಳಿಂದ ವಿಜಯನಗರದ ಪ್ರಾರಂಭಿಕ ದಸೆಯಲ್ಲಿ ಕನ್ನಡ ಸಾಹಿತ್ಯವು ಯಾರ ಆಶ್ರಯವನ್ನೂ ಪಡೆಯದೆ ಸ್ವತಾಂತ್ರವಾಗಿ ಅಭಿವೃದ್ಧಿ ಹೊಂದಿತು. ಈ ಸತ್ಯಾಂಶವನ್ನು ಗಮನಿಸಿದ ಕೆ. ಈಶ್ವರದತ್ತನು ತನ್ನ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ತೆಲಗು ಸಾಹಿತ್ಯ' ಎಂಬ ಲೇಖನದಲ್ಲಿ ಈ ರೀತಿಯಾಗಿ ಟೀಕೆ ಮಾಡುತ್ತಾನೆ; "ವಿಜಯನಗರದ ಮೊದಲನೆಯ ರಾಜವಂಶವು ಕನ್ನಡ ವಿದ್ವಾಂಸರಿಗೆ ಆಶ್ರಯವನ್ನು ಇತ್ತಿದ್ದಿತು ಮತ್ತು ಅವರಲ್ಲಿ ಕೆಲವರು ಕನ್ನಡ ಕಾವ್ಯಗಳ ಕರ್ತಗಳಾಗಿದ್ದರು. ತಮ್ಮ ಸಾಮ್ರಾಜ್ಯದಲ್ಲಿ ಅರ್ಧದಷ್ಟು ಭಾಗವು ತೆಲಗು ಮಾತನಾಡುವ ಪ್ರದೇಶಗಳಿಂದ ಕೂಡಿದ್ದರೂ ತೆಲಗು ಸಾಹಿತ್ಯದ ಬೆಳವಣಿಗೆಗೆ ಸಮನಾದ ಗಮನವನ್ನು ಕೊಡಲಿಲ್ಲ". ಅನೇಕ ಕನ್ನಡ ಕಾವ್ಯಗಳು ವಿಜಯನಗರದ ಆರಂಭಿಕ ಕಾಲದಲ್ಲಿ ರಚಿತವಾದುವೆಂಬುದು ನಿಸ್ಸಂದೇಹವಾದುದು. ಇದರಿಂದ ಆ ಕಾವ್ಯಗಳನ್ನು ರಚಿಸಿದ ಕವಿಗಳು ರಾಜಾಶ್ರಯವನ್ನು ಹೊಂದಿದ್ದರೆಂದು ಅರ್ಥವಾಗದು.

ಈ ವಿಷಯಗಳನ್ನೆಲ್ಲ ಚರ್ಚಿಸುವುದರ ಮುಖ್ಯ ಉದ್ದೇಶವು, ಹೇಗೆ ಸಮಾನ ಭಾಷೆ ಮತ್ತು ಸಂಸ್ಕೃತಿಗಳನ್ನು ಹೊಂದಿರುವ ಒಂದು ಪ್ರದೇಶವು, ರಾಜಕೀಯ ಕಾರಣಗಳಗಾಗಿ ಪ್ರತ್ಯೇಕವಾಗಿ ವಿಭಾಗಿಸಲ್ಪಟ್ಟಿತು ಎಂಬುದನ್ನು ವಿವರಿಸುವುದೇ ಆಗಿದೆ. ಈ ರಾಜಕೀಯ ವಿಭಜನೆಯು ಸಹಜವಾಗಿಯೇ ಸಾಹಿತ್ಯ ಹಾಗೂ ಮತ್ತಿತರ ಕಲಾ ಪ್ರಕಾರಗಳ ಮೇಲೆ ಪರಿಣಾಮವನ್ನುಂಟುಮಾಡಿದ್ದಿತು.

14ನೆಯ ಶತಮಾನದಲ್ಲಿ ತೆಲಗು ಮಾತನಾಡುವ ಇಡೀ ಪ್ರದೇಶವು ಮೂರು ಭಾಗಗಳಾಗಿ ಪ್ರತ್ಯೇಕಿಸಲ್ಪಟ್ಟಿದ್ದಿತು. ರೆಡ್ಡಿ ರಾಜವನ್ನು ಸ್ಥಾಪಿಸಿದ ಪ್ರೋಲಯ ವೇಮರೆಡ್ಡಿಯು ಸುಮಾರು 28 ವರ್ಷಗಳ ಕಾಲ ಅಂದರೆ ಕ್ರಿ.ಶ. 1325 ರಿಂದ 1353ರವರೆಗೆ ರಾಜ್ಯಭಾರ ಮಾಡಿದನು. ಅವನ ಆಸ್ಥಾನದಲ್ಲಿದ್ದ ಎರ್ರಪ್ರೆಗ್ಗಡ ಎಂಬುವನು “ಹರಿವಂಶಮು”, “ಲಕ್ಷ್ಮೀನರಸಿಂಹ ಪುರಾಣಮು” ಹಾಗೂ ನನ್ನಯ ಮತ್ತು ತಿಕ್ಕಿನ ಕವಿಗಳಿಂದ ಅನುವಾದಿಸಲ್ಪಡದ “ಮಹಾಭಾರತ”ದ ಕೆಲವು ಭಾಗಗಳನ್ನೂ ಬರೆದನು. ಸ್ವತಃ ತಾನೇ “ರಾಮಾಯಣ”ವನ್ನೂ ಬರೆದಿರುವುದಾಗಿ ಹೇಳಿದ್ದರೂ, ದುರದೃಷ್ಟವಶಾತ್ ಅದು ಉಪಲಬ್ಧವಾಗಿಲ್ಲ.

ಅದೇ ಕಾಲದಲ್ಲಿ ಎರ್ರನನ ಸಮಕಾಲೀನ ಕವಿಗಳನೇಕರು ಕೆಲವು ತೆಲಗು ಕಾವ್ಯಗಳನ್ನು ರಚಿಸಿದರು; ಭಾಸ್ಕರನು ‘ರಾಮಾಯಣ’ವನ್ನೂ, ನಾಚನಸೋಮನು ‘ಉತ್ತರ ಹರಿವಂಶಮು’ ಕಾವ್ಯವನ್ನೂ ಬರೆದರು. ಭಾಸ್ಕರ ರಚಿತ ‘ರಾಮಾಯಣ’ವು ‘ಭಾಸ್ಕರ ರಾಮಾಯಣ’ವೆಂದೇ ಪ್ರಸಿದ್ಧವಾಗಿದೆ. ಭಾಸ್ಕರನು ಮೊದಲಲ್ಲಿ ಓರಂಗಲ್ ವಂಶದವರ ಸಾಮಂತನಾಗಿದ್ದು, ಅನಂತರ ಸ್ವತಂತ್ರನಾದ ಸಾಹನಿ ಮಾರಣನೆಂಬ ಬ್ರಾಹ್ಮಣ ದೊರೆಯ ಆಶ್ರಿತ ಕವಿಯಾಗಿದ್ದನೆಂದು ತಿಳಿದು ಬರುತ್ತದೆ. ಭಾಸ್ಕರ

ಕವಿಯು ‘ಯುದ್ಧಕಾಂಡ’ದವರೆಗೆ ತನ್ನ ‘ರಾಮಾಯಣ’ವನ್ನು ಬರೆದನು. ಮಿಕ್ಕ ಭಾಗವು ದೇವರಕೊಂಡದ ವೇಲಮ ವಂಶದ ಪೆದ್ದದೇವಗಿರಿ ರಾಜನ ಆಶ್ರಿತ ಕವಿಯಾಗಿದ್ದ ಅಯ್ಯಲಾರ್ಯ ಕವಿಯಿಂದ ಪೂರ್ಣಗೊಳಿಸಲ್ಪಟ್ಟಿತು. ನಾಚನಸೋಮ ಕವಿಯು ತನ್ನ ‘ಉತ್ತರ ಹರಿವಂಶಮು’ ಕಾವ್ಯವನ್ನು ಹರಿಹರೇಶ್ವರ ಸ್ವಾಮಿಗೆ ಅಂಕಿತ ಮಾಡಿರುತ್ತಾನೆ. ಅವನು ಯಾವ ರಾಜನ ಆಶ್ರಯವನ್ನು ಎಂದೂ ನಿರೀಕ್ಷಿಸಿದಂತೆ ತೋರುವುದಿಲ್ಲ. ‘ಉತ್ತರ ಹರಿವಂಶಮು’ ಕಾವ್ಯವು ನೇರವಾಗಿ ಕಥೆಯ ನಿರೂಪಣೆಗೆ ತೊಡಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ‘ಪ್ರಬಂಧ’ದಲ್ಲಿಯೂ ಪೀಠಿಕಾಪದ್ಯಗಳನ್ನು ಕಾಣುತ್ತೇವೆ. ಆದರೆ ಇಲ್ಲಿ ಅಂತಹ ಯಾವ ಪದ್ಯಗಳು ನಮಗೆ ಕಾಣಿಸಿಗುವುದಿಲ್ಲ. ಇದನ್ನು ಗಮನದಲ್ಲಿಟ್ಟುಕೊಂಡು ಕೆಲವು ತೆಲುಗು ವಿದ್ವಾಂಸರು ನಾಚನಕವಿಯು ‘ಪೂರ್ವಭಾಗ’ವನ್ನು ಬರೆದಿರಬಹುದೆಂದು ಭಾವಿಸುತ್ತಾರೆ. ಆದರೆ ಪಿ. ಲಕ್ಷ್ಮೀಕಾಂತಂ ಅವರು ‘ಉತ್ತರ ಹರಿವಂಶಮು’ ಕಾವ್ಯದಲ್ಲಿ ದೊರೆತಿರುವ ಸಂಗತಿಗಳ ಆಧಾರದ ಮೇಲೆ ನಾಚನನು ಮೊದಲ ಭಾಗಗಳನ್ನು ಬರೆಯಲೇ ಇಲ್ಲವೆಂದು, ಅವುಗಳು ‘ಮಹಾಭಾರತ’ ಕಾವ್ಯಕ್ಕೆ ಅನುಬಂಧವಾಗಿ ಬರೆಯಲ್ಪಟ್ಟಿವೆಯೆಂದೂ ಅಭಿಪ್ರಾಯಪಡುತ್ತಾರೆ[19].

ಕೋಲಾರ ಜಿಲ್ಲೆಯಲ್ಲಿ ದೊರಕಿರುವ ಎರಡು ತಾಮ್ರ ಶಾಸನಗಳು, ಮೊದಲನೆಯ ಬುಕ್ಕರಾಯನು ನಾಚನಕವಿಗೆ ಕೆಲವು ದತ್ತಿಗಳನ್ನು ಬಿಟ್ಟಿನೆಂದು ಅವನು ಅದನ್ನು ತನ್ನ ಗ್ರಾಮದ ಬ್ರಾಹ್ಮಣರಿಗೆ ಹಂಚಿಕೊಟ್ಟನೆಂದು ತಿಳಿಸುತ್ತವೆ. ಅವನು ವೇದಗಳು, ಆಗಮಗಳು ಹಾಗೂ ಅಷ್ಟಾದಶ ಪುರಾಣಗಳಲ್ಲಿ ಪಂಡಿತನಾಗಿದ್ದನೆಂಬ ಸಂಗತಿಯನ್ನು ಹಾಗೂ, ಅವನು ಎಂಟು ವಿವಿಧ ಭಾಷೆಗಳಲ್ಲಿ

ಕಾವ್ಯರಚನೆ ಮಾಡಲು ಸಮರ್ಥನಾಗಿರುವನೆಂಬ ವಿಷಯವನ್ನು ಕೇಳಿ ಬುಕ್ಕರಾಯನೇ ಸ್ವತಃ ನಾಚನಸೋಮನನ್ನು ಭೇಟಿಮಾಡಿದನೆಂಬುದು ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಸಂಗತಿಯಾಗಿದೆ. ಈ 'ಮಹಾಕವಿ'ಯು ಬುಕ್ಕರಾಯನನ್ನು ಆಶೀರ್ವದಿಸಿದನೆಂಬುದಾಗಿಯೂ ಈ ಶಾಸನವು ಹೇಳುತ್ತದೆ. ಆ ವೇಳೆಗೆ ನಾಚನಸೋಮನು ಒಬ್ಬ ಮಹಾಕವಿಯಾಗಿ ಪ್ರತಿಷ್ಠಿತನಾಗಿದ್ದನೆಂಬುದಾಗಿ ಇದರಿಂದ ನಾವು ಊಹಿಸಬಹುದಾಗಿದೆ.

ಈಗಾಗಲೇ ತಿಳಿದಿರುವಂತೆ ಇದೇ ಕಾಲದಲ್ಲಿ ನಾಚನಸೋಮ ಹಾಗೂ ಎರ್ರನ ಕವಿಗಳಿಬ್ಬರೂ 'ಹರಿವಂಶ'ವನ್ನು ತೆಲುಗಿಗೆ ಅನುವಾದ ಮಾಡಿದರು. ಇದಕ್ಕೆ ಕಾರಣವನ್ನು ಈ ರೀತಿಯಾಗಿ ವಿವರಿಸಬಹುದು: ಆ ವೇಳೆಗೆ ತೆಲುಗು ಭಾಷೆಯಲ್ಲಿ ಸಮಗ್ರ ಮಹಾಭಾರತ ಕಾವ್ಯವಿದ್ದಿತು. ಅನುವಾದಗಳ ಅಗತ್ಯವು ಇನ್ನು ಮುಂದೆ ಇರಲಿಲ್ಲ. ಆಗ ತೆಲಗು ಕವಿಗಳು 'ಹರಿವಂಶ'ವನ್ನು ತೆಲುಗಿಗೆ ತರಲು ಯೋಚಿಸಿದರು. ಈ ವೇಳೆಗಾಗಲೇ ಜೈನಕವಿಗಳು ಹರಿವಂಶದ ಜೈನಸಂಪ್ರದಾಯದ 'ಹರಿವಂಶಕಾವ್ಯ'ವನ್ನು ಕನ್ನಡಕ್ಕೆ ಭಾಷಾಂತರಿಸಿದ್ದರೆಂಬುದು ಇಲ್ಲಿ ನಾವು ಗಮನಿಸಬೇಕಾದ ಚಾರಿತ್ರಿಕ ಸಂಗತಿ. 'ವಿಷ್ಣುಪುರಾಣ'ವನ್ನು ಮತ್ತು ಬ್ರಾಹ್ಮಣ ಸಂಪ್ರದಾಯದ 'ಹರಿವಂಶ'ವನ್ನು ಹೊಂದಿಸಿಕೊಂಡು ಅನುವಾದ ಮಾಡುವುದರ ಮೂಲಕ ರುದ್ರಭಟ್ಟನು ಕನ್ನಡದಲ್ಲಿ 'ಜಗನ್ನಾಥ ವಿಜಯ'ವನ್ನು ಬರೆದಿದ್ದನು. ಈ ಪ್ರಯೋಗಗಳು ಬಹುಶಃ ತೆಲುಗು ಕವಿಗಳು 'ಹರಿವಂಶ'ವನ್ನು ತೆಲುಗಿನಲ್ಲಿ ತರುವಂತೆ ಪ್ರಚೋದನೆಯನ್ನು ಉಂಟುಮಾಡಿರಬಹುದು. ಇದು ಒಂದು ಊಹೆ ಮಾತ್ರ; ಆದರೂ ಈ ದಿಸೆಯಲ್ಲಿ ಹೆಚ್ಚಿನ ಸಂಶೋಧನೆಯು ನಡೆಯಬೇಕಾಗಿದೆ[20].

ಹದಿನಾಲ್ಕನೆಯ ಶತಮಾನದ ಕಡೆಯ ಭಾಗದಲ್ಲಿ ಗಮನರ್ಹರಾದ ಕೆಲವು ಕವಿಗಳು ಯಾರೆಂದರೆ ರವಿಪಾಟ ತ್ರಿಪುರಾಂತಕ (ತಿಪ್ಪಣ), ಮಡಿಕಿಸಿಂಗಣ, ದೋಣಯಾಮಾತ್ಯ ಮತ್ತು ಗಣಪಣಾರಾಧ್ಯ. ಮೊದಲ ಇಬ್ಬರೂ ಚೊಕ್ಕವಾದ ಸಾಹಿತ್ಯಗ್ರಂಥಗಳನ್ನು ಸೃಷ್ಟಿಸಿದರೆ, ಕಡೆಯ ಇಬ್ಬರು ಶಾಸ್ತ್ರಗ್ರಂಥಗಳನ್ನು ರಚಿಸಿದರು.

ರವಿಪಾಟ ತ್ರಿಪುರಾಂತಕನು ಶೃಂಗಾರರಸದಲ್ಲಿ ಒಲವನ್ನು ಹೊಂದಿದ್ದ ಮಹಾ 'ಶಿವಭಕ್ತ'ನಾಗಿದ್ದನು. ಅವನು ತೆಲುಗಿನಲ್ಲಿ 'ತ್ರಿಪುರಾಂತಕೋದಾಹರಣಮು', 'ಮದನ ವಿಜಯಮು', ಅಂಬಿಕಾ ಶತಕಮು' ಮತ್ತು 'ಚಂದ್ರ ತಾರಾವಳಿ' ಕಾವ್ಯಗಳನ್ನೂ ಸಂಸ್ಕೃತದಲ್ಲಿ 'ಪ್ರೇಮಾಭಿರಾಮಂ' ಎಂಬ ಕಾವ್ಯವನ್ನೂ ರಚಿಸಿದ್ದಾನೆ. ಶೈವಕವಿಗಳ ಸಂಪ್ರದಾಯವನ್ನು ಅನುಸರಿಸುತ್ತಿದ್ದ ವೀರಶೈವಕವಿ ಮಡಿಕೆ ಸಿಂಗಣನು ದ್ವಿಪದ ಛಂದಸ್ಸಿನಲ್ಲಿ 'ಭಾಗವತ ದಶಮಸ್ಕಂಧ'ವನ್ನು ಬರೆದನು. ದೋಣಯಾಮಾತ್ಯನು ರಚಿಸಿದ 'ಸಸ್ಯಾನಂದ'ವೆಂಬ ಗ್ರಂಥವು ಮಳೆಯು ಬೀಳುವ ಕಾಲದ ಮುನ್ಸೂಚನೆ, ಬೆಳೆಗಳು ಮತ್ತು ಇತರ ವ್ಯವಸಾಯಕ್ಕೆ ಸಂಬಂಧಿಸಿದ ಕ್ರಿಯೆಗಳನ್ನು ಕುರಿತು ವಿವರಣೆಗಳನ್ನು ನೀಡುತ್ತದೆ. ಅನೇಕ ಅಂಶಗಳಲ್ಲಿ ಈ ಗ್ರಂಥವು ಕನ್ನಡದಲ್ಲಿ ರಚಿತವಾಗಿರುವ 'ರಟ್ಟಮತ' ಗ್ರಂಥದಲ್ಲಿ ಕಂಡುಬರುವ ವಿಷಯಗಳನ್ನೇ ಒಳಗೊಂಡಿರುತ್ತದೆ. ದೋಣಯಾಮಾತ್ಯನು ಕನ್ನಡ 'ರಟ್ಟಮತ' ಗ್ರಂಥವನ್ನು ವ್ಯಾಸಂಗ ಮಾಡಿರಬೇಕು. ಈ ಗ್ರಂಥವು ಆಂಧ್ರ ಪ್ರದೇಶದಲ್ಲಿ ಕೂಡ ಜನಪ್ರಿಯವಾಗಿದ್ದಿತು. 'ರಟ್ಟಮತ'ವು 1769ರಲ್ಲಿ ಅಯ್ಯಲ ಭಾಸ್ಕರ ಕವಿಯಿಂದ ತೆಲುಗು ಭಾಷೆಗೆ ಅನುವಾದ ಮಾಡಲ್ಪಟ್ಟಿತು ಎಂಬ ಸಂಗತಿಯಿಂದ ಇದನ್ನು ಪುಷ್ಟೀಕರಿಸಬಹುದು. ದೋಣಯಾಮಾತ್ಯನು 'ಸರ್ವಲೋಕಾಶ್ರಯಮು' ಎಂಬ

ಮತ್ತೊಂದು ಕಾವ್ಯವನ್ನು ಬರೆದಿರುತ್ತಾನೆಂದು ತಿಳಿದುಬರುತ್ತದೆ. ದುರದೃಷ್ಟದಿಂದ ಅದು ಉಪಲಬ್ಧವಿರುವುದಿಲ್ಲ. ಬಹುಶಃ ಚಾವುಂಡರಾಯನ 'ಲೋಕೋಪಕಾರ'ದಿಂದ ಈ ಕಾವ್ಯವು ಪ್ರಭಾವಿತವಾಗಿರಬಹುದು. ಇಂತಹ ಊಹೆಗೆ ಕಾರಣವೆಂದರೆ ಕರ್ನಾಟಕ ಮತ್ತು ಆಂಧ್ರಗಳ ಮಧ್ಯ ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಬಹು ವ್ಯಾಪಕವಾದ ಸಂಪರ್ಕವಿದ್ದವು. ಕ್ರಿ.ಶ. 1100ರಲ್ಲಿ ಜೀವಿಸಿದ್ದ ಕೀರ್ತಿವರ್ಮನ 'ಗೋವೈದ್ಯ' ಗ್ರಂಥವು 'ಪಶುವೈದ್ಯಮು' ಎಂಬ ಹೆಸರಿನಿಂದ ಕ್ರಿ.ಶ. 1400ರಲ್ಲಿದ್ದ ನಾರಣಮಂತ್ರಿಯಿಂದ ತೆಲುಗಿಗೆ ಭಾಷಾಂತರಗೊಂಡಿದ್ದಿತು. ಗಣಪಣಾರಾಧ್ಯನು ಸಂಗೀತಶಾಸ್ತ್ರವನ್ನು ಕುರಿತು 'ಸ್ವರಶಾಸ್ತ್ರ'ವೆಂಬ ಗ್ರಂಥವನ್ನೂ, ಯೋಗವನ್ನು ಕುರಿತು 'ಯೋಗಶಾಸ್ತ್ರಮು' ಎಂಬ ಮತ್ತೊಂದು ಗ್ರಂಥವನ್ನೂ ದ್ವಿಪದ ಧಾಟಿಯಲ್ಲಿ ಬರೆದನು. ಜನಪ್ರಿಯ ಛಂದಸ್ಸಾದ ದ್ವಿಪದದಲ್ಲಿ ರಚಿತವಾದ ಶಾಸ್ತ್ರಗ್ರಂಥಗಳೆಂದರೆ ಇವೆರಡು ಮಾತ್ರ[21].

ಪ್ರಸ್ತುತ ಪರಿಶೀಲನೆಗೆ ತೆಗೆದುಕೊಂಡಿರುವ ಕಾಲದಲ್ಲಿ ಚಾರಿತ್ರಿಕ ಸ್ವಾರಸ್ಯವನ್ನು ಹೊಂದಿರುವ ಒಂದೇ ಒಂದು ಗ್ರಂಥವನ್ನು ಕಾಣುತ್ತೇವೆ. ಸುಮಾರು ಕ್ರಿ.ಶ. 1400ರಲ್ಲಿದ್ದ ಕಾಸೆ ಸರ್ವಪ್ಪನು 'ಸಿದ್ಧೇಶ್ವರ ಚರಿತ್ರ'ವನ್ನು ರಚಿಸಿದನು. ಆ ಕಾವ್ಯವು ಆಂಧ್ರ ಪ್ರದೇಶವನ್ನು ಆಳಿದ ರಾಜರುಗಳ ಕಥೆಯನ್ನು ಹೇಳುತ್ತದೆ. ಕಾಸೆ ಸರ್ವಪ್ಪನು ರಾಜರುಗಳ ಚರಿತ್ರೆಯನ್ನು ದ್ವಿಪದ ಛಂದಸ್ಸಿನಲ್ಲಿ ರಚಿಸುವ ಸಂಪ್ರದಾಯವನ್ನು ರೂಢಿಗೆ ತಂದವರಲ್ಲಿ ಮೊದಲಿಗನಾಗಿದ್ದಾನೆ.

ಶೈವಕವಿಯಾದ ಗೌರನನು ಇದೇ ಕಾಲಕ್ಕೆ ಸೇರಿದವನು. ವಿದ್ವಾಂಸರು ಅವನ ಕಾಲವನ್ನು 14ನೆಯ ಶತಮಾನದ ಉತ್ತರಾರ್ಧ ಮತ್ತು 15ನೆಯ ಶತಮಾನದ

ಪೂರ್ವಾರ್ಧ ಎಂಬುದಾಗಿ ನಿರ್ಣಯಿಸಿದ್ದಾರೆ. ಗೌರನನು ತೆಲುಗಿನಲ್ಲಿ 'ನವನಾಥ ಚರಿತ್ರೆ', 'ಹರಿಶ್ಚಂದ್ರೋಪಾಖ್ಯಾನಮು' ಮತ್ತು 'ಛಂದೋದೀಪಿಕ' ಕೃತಿಗಳನ್ನು ರಚಿಸಿದ್ದಾನೆ. ಗೌರನನು ತನ್ನನ್ನು ಶೈವನೆಂಬುದಾಗಿ ಭಾವಿಸಿಕೊಂಡಿದ್ದನು. 'ನವನಾಥ ಚರಿತ್ರೆ' ಮತ್ತು 'ಹರಿಶ್ಚಂದ್ರೋಪಾಖ್ಯಾನ' ಕಾವ್ಯಗಳಲ್ಲಿ ಕಂಡುಬರುವ ಅವನ ನಾಯಕರು ಶಿವಭಕ್ತರು. ಗೌರನನು ವೈದಿಕ ಹಾಗೂ ಶೈವ ಸಂಪ್ರದಾಯಗಳೆರಡನ್ನೂ ಅಂಗೀಕರಿಸಿದ್ದನು[22].

ನವನಾಥ ಚರಿತ್ರದ ಪ್ರಾರಂಭದಲ್ಲಿ ಅವನು ತನ್ನ ಈ ಕಾವ್ಯವನ್ನು ತನ್ನ ಗುರುಗಳಾದ ಪ್ರಸಿದ್ಧ ಶ್ರೀಶೈಲ ಸಿಂಹಾಸನಾಧಿಪತಿಗಳಾಗಿ ಪರಮಾಧಿಕಾರವನ್ನು ಹೊಂದಿದ್ದ ಶಾಂತ ಭಿಕ್ಷಾವೃತ್ತಿರಾಯರೆಂಬುವರ ಆಜ್ಞಾನುಸಾರವಾಗಿ ಬರೆದುದಾಗಿ ಹೇಳಿಕೊಂಡಿದ್ದಾನೆ. ಮುಂದೆ ನವನಾಥ ಕಾವ್ಯದ ಕಥೆಯು ಇದಕ್ಕೆ ಹಿಂದೆಯೇ ಶ್ರೀಗಿರಿ ಕವಿಯಿಂದ ಬರೆಯಲ್ಪಟ್ಟಿದ್ದುದಾಗಿಯೂ ಅದೇ ಕಥೆಯನ್ನು ತಾನು ಜನಪ್ರಿಯವಾದ ದ್ವಿಪದ ಧಾಟಿಯಲ್ಲಿ ಬರೆದುದಾಗಿಯೂ ತಿಳಿಸುತ್ತಾನೆ. ಕವಿಯೂ ಕೊಟ್ಟಿರುವ ವರ್ಣನೆಯ ಹಾಗೂ "ಭಿಕ್ಷಾವೃತ್ತಿ" ಎಂಬ ಹೆಸರಿನ ಆಧಾರದ ಮೇಲೆ ಶಾಂತ ಭಿಕ್ಷಾವೃತ್ತಿರಾಯನು ಲಾಕುಲ ಶೈವ ಪಂಥಕ್ಕೆ ಸೇರಿದವನಾಗಿದ್ದನೆಂದು ಊಹಿಸಬಹುದಾಗಿದೆ. ಕನ್ನಡ ಹಾಗೂ ತೆಲಗು ತೌಲನಿಕ ಸಾಹಿತ್ಯದ ವಿದ್ಯಾರ್ಥಿಗಳಿಗೆ ಗೌರನನು ಬಹು ಮುಖ್ಯ ಕವಿಯಾಗಿದ್ದಾನೆ. ನವನಾಥ ಚರಿತ್ರದಲ್ಲಿ ಅವನು ಚಾಮರಸನ 'ಪ್ರಭುಲಿಂಗಲೀಲೆ'ಯ ಕೆಲವು ಭಾಗಗಳನ್ನು ಅನುವಾದಿಸಿರುತ್ತಾನೆ. 'ಹರಿಶ್ಚಂದ್ರೋಪಾಖ್ಯಾನ' ದಲ್ಲಾದರೋ ಅವನು ಅನೇಕ ವಿಷಯಗಳಲ್ಲಿ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ವನ್ನು ಅನುಸರಿಸಿದ್ದಾನೆ. ಈ ಎಲ್ಲಾ

ಅಂಶಗಳು ಗೌರನನು ಕರ್ನಾಟಕದ ವೀರಶೈವ ಸಾಹಿತ್ಯದ ನಿಕಟ ಪರಿಚಯವನ್ನು ಹೊಂದಿದ್ದನೆಂಬುದನ್ನು ನಿದರ್ಶನ ಮಾಡಿ ಕೊಡುತ್ತವೆ. ಅವನು ಗೋರಕ್ಷನ ಕಥೆಯನ್ನು 'ಪ್ರಭುಲಿಂಗಲೀಲೆ'ಯಲ್ಲಿ ಹೇಳಿರುವಂತೆಯೇ ತೆಗೆದುಕೊಂಡಿದ್ದಾನೆ. ಗೌರನನು ಬಹುಶಃ 'ಪ್ರಭುಲಿಂಗಲೀಲೆ'ಯಲ್ಲಿ ಬರುವ ವಿವರಣೆಯೇ ಸರಿಯಾದುದೆಂದು ಭಾವಿಸಿದ್ದಿರಬೇಕು. ಹಾಗಾಗಿ ಆ ಭಾಗವನ್ನು ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಚಾಚೂ ತಪ್ಪದೆ ಭಾಷಾಂತರಿಸಿದ್ದಾನೆ.

ಕನ್ನಡ ವಿದ್ವಾಂಸರು ಚಾಮರಸನು ಕ್ರಿ.ಶ. 1440ಕ್ಕೆ ಮುನ್ನ ಜೀವಿಸಿದ್ದಿರಲಾರನೆಂದು ಅಭಿಪ್ರಾಯಪಡುತ್ತಾರೆ. ಗೌರನನ ಯಥಾವತ್ತಾದ ಭಾಷಾಂತರವು ಚಾಮರಸನ ಕಾಲವನ್ನು ಕ್ರಿ.ಶ. 1440ಕ್ಕಿಂತ ಹಿಂದೆಯೇ ಇರಬೇಕೆಂದು ಸೂಚಿಸುತ್ತದೆ. ತೆಲಗು ವಿದ್ವಾಂಸರು ಗೌರನನಿಗೆ ನಿಗದಿಪಡಿಸಿರುವ ಕಾಲ ಕ್ರಿ.ಶ. 1345 ರಿಂದ 1445ರ ಮಧ್ಯ ಭಾಗ. ಒಂದು ವೇಳೆ ಗೌರನನ ಕಾಲವನ್ನು ಕ್ರಿ.ಶ. 1440 ಎಂಬುದಾಗಿ ಇಟ್ಟುಕೊಂಡರೂ ಆವೇಳೆಗಾಗಲೇ ಚಾಮರಸನ ಕಾಲವನ್ನು 1400 ರಿಂದ 1410 ಎಂಬುದಾಗಿ ಪುನರ್ನಿರ್ಣಯಿಸುವುದು ಉತ್ತಮ[23].

ಗೌರನನ ಮತ್ತೊಂದು ಕೃತಿಯಾದ 'ಹರಿಶ್ಚಂದರೋಪಾಖ್ಯಾನ'ವನ್ನು ಪರೀಕ್ಷಿಸಿ ನೋಡಿದರೆ ಅವನು ಕನ್ನಡ ಭಾಷೆಯಲ್ಲಿ ಒಳ್ಳೆಯ ತಿಳವಳಿಕೆ ಪಡೆದಿದ್ದನೆಂಬ ಸಂಗತಿಯು ನಮಗೆ ಅರಿವಾಗುತ್ತದೆ. ಈ ಕೃತಿಯು ಅವನಿಗೆ ತೆಲಗು ಸಾಹಿತ್ಯದಲ್ಲಿ ಒಳ್ಳೆಯ ಹೆಸರನ್ನು ಸಂಪಾದಿಸಿಕೊಟ್ಟಿತು. ಹರಿಶ್ಚಂದ್ರನ ಕಥೆಯನ್ನು ನಿರೂಪಣೆ ಮಾಡುವುದರಲ್ಲಿ ಅವನು ಆ ಕಥೆಯನ್ನು 'ಮಾರ್ಕಂಡೇಯ

ಪುರಾಣ' ಮತ್ತು 'ಐತರೇಯ ಬ್ರಾಹ್ಮಣ'ಗಳಿಂದ ಆರಿಸಿಕೊಂಡಿದ್ದರೂ, ಆ ಪಾಠಗಳನ್ನೇ ಅವಲಂಬಿಸಿರುವುದಿಲ್ಲ. ಅದಕ್ಕೆ ಬದಲಾಗಿ ಅವನು ತನ್ನ ಕಥಾನಿರೂಪಣೆಯ ಪ್ರತಿಹಂತದಲ್ಲಿಯೂ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ವನ್ನೇ ಅನುಸರಿಸಿರುತ್ತಾನೆ. ಈ ಅಂಶವು ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ವು ಕನ್ನಡವನ್ನು ಮಾತನಾಡುವವರಲ್ಲಿ ಜನಪ್ರಿಯವಾಗಿದ್ದಿತಲ್ಲದೆ ಕನ್ನಡವನ್ನು ಮಾತನಾಡದ ಎಲ್ಲ ಶೈವರ ಅನುರಾಗ ಪಡೆದಿದ್ದಿತ್ತೆಂಬುದನ್ನೂ ಸೂಚಿಸುತ್ತದೆ.

ತೆಲಗು ಸಾಹಿತ್ಯಕ್ಕೆ ಸಂಬಂಧಿಸಿದ ವಿಷಯವನ್ನು, ಅದು ವಿಜಯನಗರದ ರಾಜವಂಶದವರ ಪ್ರೋತ್ಸಾಹವನ್ನು ಪಡೆಯದಿದ್ದರೂ, ಅವರ ಆಧೀನದಲ್ಲಿ ಬಾರದೇ ಇದ್ದರೂ ಇಲ್ಲಿ ಅದನ್ನು ತಿಳಿಸುವ ಮುಖ್ಯ ಉದ್ದೇಶವೇನೆಂದರೆ ಯಾವುದಾದರೂ ಒಂದು ಭಾಷೆಯ ಬಳಕೆಯಿರುವ ಪ್ರದೇಶವು ರಾಜಕೀಯವಾಗಿ ಅಸ್ತವ್ಯಸ್ತವಾದಾಗ ಸ್ವಾಭಾವಿಕವಾಗಿಯೇ ಆ ರಾಜರ ಪೋಷಣೆಯ ಅಗತ್ಯವನ್ನು ಹೊಂದಿರುವ ಇತರ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳ ಅಭಿವೃದ್ಧಿಯೂ ಅಸ್ತವ್ಯಸ್ತವಾಗಿ ಕುಂಠಿತವಾಗುತ್ತದೆ ಎಂಬುದನ್ನು ತೋರಿಸುವದೇ ಆಗಿದೆ. ಅದುದರಿಂದ ಭಾಷೆ ಮತ್ತು ಪ್ರಭುತ್ವಗಳು ಯಾವುದಾದರೊಂದು ಪ್ರದೇಶದಲ್ಲಿ ಪ್ರಭಾವಶಾಲಿಯಾಗಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದರಲ್ಲಿ ಆಸಕ್ತಿ ಹೊಂದಿದ ಪಕ್ಷದಲ್ಲಿ, ಆ ಪ್ರದೇಶದಲ್ಲಿ ಸಾಂಸ್ಕೃತಿಕ ಅಭಿವೃದ್ಧಿಯುಂಟಾಗಲು ಕಾರಣವಾಗುತ್ತದೆ. ಪದ್ಮನಾಯಕನ ಹಾಗೂ ರೆಡ್ಡಿಗಳ ಆಳ್ವಿಕೆಯ ಕಾಲದಲ್ಲಿ ತೆಲಗು ಸಾಹಿತ್ಯವು ಬೆಳದು ಅಭಿವೃದ್ಧಿ ಹೊಂದಿತು. ಆದರೆ ವಿಜಯನಗರ ಚಕ್ರಾಧಿಪತ್ಯದ ಕಾಲದಲ್ಲಿ ಹೀಗಾಗಲಿಲ್ಲ. ಅವರು ಇಂತಹ ಕಾರ್ಯಕ್ರಮಗಳ ವಿರೋಧಿಗಳಾಗಿದ್ದರೆಂದು

ಅರ್ಥವಲ್ಲ. ಆದರೆ ಆಗಿನ ಕಾಲದ ರಾಜಕೀಯ ಪರಿಸ್ಥಿತಿಗಳು ಅದಕ್ಕೆ ಪ್ರೋತ್ಸಾಹ ನೀಡುವ ಪರಿಸ್ಥಿತಿಯಲ್ಲಿರಲಿಲ್ಲ[24].

ಈ ಕಾಲದಲ್ಲಿ ರಚಿತವಾದ ಕನ್ನಡ ಸಾಹಿತ್ಯವನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು;

1. ಜೈನ
2. ವೀರಶೈವ
3. ಶಾಸ್ತ್ರ ಸಾಹಿತ್ಯ

ಆದರೆ ಈ ಕಾಲದಲ್ಲಿ ವೈದಿಕ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳಾವುವೂ ನಮಗೆ ಕಂಡು ಬರುವುದಿಲ್ಲ.

1. ಜೈನ ತೀರ್ಥಂಕರರ ಕಥೆಗಳು
2. ಆಧ್ಯಾತ್ಮಿಕ ಗ್ರಂಥಗಳು
3. ಧಾರ್ಮಿಕ ಮತ್ತು ನೈತಿಕ ಕೃತಿಗಳು ಮತ್ತು
4. ವರ್ಗೀಕರಣ ಮಾಡಲಾಗದ ಕೃತಿಗಳು ಎಂಬುದಾಗಿ ಜೈನಸಾಹಿತ್ಯವನ್ನು ಮತ್ತೆ ನಾಲ್ಕು ಗುಂಪುಗಳಾಗಿ ಪುನರ್ವರ್ಗೀಕರಿಸಬಹುದು.

ಬಾಹುಬಲಿ ಪಂಡಿತನ (ಕ್ರಿ.ಶ. 1350) 'ಧರ್ಮನಾಥಪುರಾಣ' ಮತ್ತು ಮಧುರ ಕವಿಯ 'ಧರ್ಮನಾಥಪುರಾಣ' ಇವೆರಡೂ 15ನೆಯ ತೀರ್ಥಂಕರನ ಕಥೆಯನ್ನು ನಿರೂಪಿಸುವ ಕಾವ್ಯಗಳು. ಆಯತವರ್ಮನ 'ರತ್ನಕರಂಡ'ವು ಒಂದು ತತ್ವಶಾಸ್ತ್ರ ಗ್ರಂಥ. ಧಾರ್ಮಿಕ, ನೈತಿಕ ಹಾಗೂ ಸಾಹಿತ್ಯಕ ಕೃತಿಗಳಲ್ಲಿ ನಾಗರಾಜನ 'ಪುಣ್ಯಾಶ್ರವ' ಮತ್ತು ವೃತ್ತವಿಲಾಸನ 'ಧರ್ಮಪರಿಕ್ಷೆ' ಹೆಸರಿಸಲು ಅರ್ಹವಾದುವು.

ಮಧುರನ 'ಗೊಮ್ಮಟಸುತ್ತಿ' ಮತ್ತು ಗೊಮ್ಮಟಸಾರ', 'ಅಮಿತಗತಿ ಶ್ರಾವಕಚಾರ'ಕ್ಕೆ ಕೇಶವವರ್ಣಿಯು ಕನ್ನಡದಲ್ಲಿ ಬರೆದಿರುವ ವ್ಯಾಖ್ಯಾನ ಇವು ವರ್ಗೀಕರಣ ಮಾಡಲಾಗದ ಸಾಹಿತ್ಯಕೃತಿಗಳ ಗುಂಪಿಗೆ ಸೇರುತ್ತವೆ[25].

ನಾಗರಾಜನ 'ಪುಣ್ಯಾಶ್ರವ'ವು ಐವತ್ತೆರಡು ಕಥೆಗಳ ಸಂಗ್ರಹ; ಚಂಪೂಶೈಲಿಯಲ್ಲಿದೆ. ಈ ಕೃತಿಯು ತಮ್ಮ ಜೀವನದಲ್ಲಿ ಜೈನ ಧರ್ಮವನ್ನು ಅನುಸರಿಸಿ ಮೋಕ್ಷವನ್ನು ಪಡೆದ ಜೈನಧರ್ಮಾನುಯಾಯಿಗಳ ಕಥೆಗಳನ್ನು ನಿರೂಪಿಸುತ್ತದೆ. ಡಾ. ಹಂ. ಪ. ನಾಗರಾಜಯ್ಯನವರು ನಾಗರಾಜಕವಿಗೆ ಕನ್ನಡ ಸಾಹಿತ್ಯದಲ್ಲಿ ಚಂಪುಶೈಲಿಯಲ್ಲಿ ಕಾವ್ಯರಚನೆ ಮಾಡಿದ ಕವಿಗಳಲ್ಲಿ ದೊರಕಬೇಕಾಗಿದ್ದ ಯೋಗ್ಯ ಸ್ಥಾನವು ಲಭಿಸಿಲ್ಲವೆಂಬುದಾಗಿ ಹೇಳುತ್ತಾರೆ. ಕಾವ್ಯಗುಣದಲ್ಲಿ ಅವನು ಪಂಪಕವಿಗೆ ಸರಿದೊರೆಯಲ್ಲದಿದ್ದರೂ, ಪೊನ್ನಕವಿಯ ಮಟ್ಟಕ್ಕೆ ಅವನು ಖಂಡಿತವಾಗಿ ಏರಬಲ್ಲನು; ಮತ್ತು ಪಂಪನಿಗೆ ದ್ವಿತೀಯ ಸ್ಥಾನದಲ್ಲಿರಲು ತಕ್ಕವನು. ಈ ಕವಿಗೆ ಕನ್ನಡ ಸಾಹಿತ್ಯದಲ್ಲಿ ಮಾನ್ಯತೆ ದೊರಕದಿರಲು ಅವನ ಕಾವ್ಯವಾದ 'ಪುಣ್ಯಾಶ್ರವ'ವು ಇದುವರೆಗೆ ಪ್ರಕಟನೆಯಾಗದಿರುವುದೇ ಕಾರಣವಾಗಿದೆ. ವೃತ್ತವಿಲಾಸನು ತನ್ನ ಕೃತಿಯಾದ 'ಧರ್ಮಪರಿಕ್ಷೆ'ಯ ಪ್ರಾರಂಭದಲ್ಲಿ ಅಮಿತಗತಿಯು ಇದಕ್ಕೆ ಹಿಂದೆಯೇ ಸಂಸ್ಕೃತದಲ್ಲಿ ರಚಿಸಿರುವುದನ್ನು ತಾನು ಸಾಮಾನ್ಯ ಜನರ ಒಳಿತಿಗಾಗಿ ಕನ್ನಡದಲ್ಲಿ ಬರೆದಿರುವುದಾಗಿ ಹೇಳುತ್ತಾನೆ. ಆ ರೀತಿ ಹೇಳುವಾಗ ವೃತ್ತವಿಲಾಸನು ಮೂಲಗ್ರಂಥವನ್ನು ವಿವೇಚನಾಶೂನ್ಯನಾಗಿ ಅನುಸರಿಸಿರುವುದಿಲ್ಲ. ಅದರಲ್ಲಿ ಅವನು ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾನೆ. ಬಾಹುಬಲಿ ಮತ್ತು ಮಧುರ ಈ

ಕವಿಗಳಿಬ್ಬರೂ ತಮ್ಮ ಕೃತಿರಚನೆಗೆ ಒಂದೇ ವಸ್ತುವನ್ನು ಆರಿಸಿಕೊಂಡರು. ಚಂಪೂಕಾವ್ಯ ಪರಂಪರೆಯಲ್ಲಿ ಜೈನಕವಿಗಳು ರಚಿಸಿದ ಕಾವ್ಯಗಳಲ್ಲಿ ಇವೇ ಕಡೆಯವು. ಮಧುರ ಕವಿಯು, ಹರಿಹರರಾಯನಲ್ಲಿ ಪ್ರಮುಖ ದಂಡನಾಯಕನಾಗಿದ್ದ ಮುದ್ದಣನ ಆಶ್ರಯದಲ್ಲಿದ್ದನು. ಈ ಮಧುರ ಕವಿಯು ಹಂಪೆಯಲ್ಲಿರುವ 'ಲಕ್ಷ್ಮೀಧರ ಶಾಸನ'ವನ್ನು ರಚಿಸಿರುತ್ತಾನೆ[26].

ಪ್ರಸ್ತುತ ಕಾಲದಲ್ಲಿ ವೀರಶೈವ ಸಾಹಿತ್ಯವು ಒಂದು ಹೊಸ ತಿರುವನ್ನು ಪಡೆಯಿತು. ವೀರಶೈವಪುರಾಣಗಳನ್ನು ರಚಿಸುವ ಪರಂಪರೆಯು ಈ ಕಾಲಕ್ಕೆ ಪ್ರಾರಂಭವಾಯಿತು. ಅಂತಹ ಕೃತಿಗಳಲ್ಲಿ ಭೀಮಕವಿಯ 'ಬಸವಪುರಾಣ' ಮತ್ತು ಪದ್ಮಣಾಂಕನ 'ಪದ್ಮರಾಜ ಪುರಾಣ' ಇವು ಮುಖ್ಯವಾದುವು. ಭೀಮಕವಿಯ 'ಬಸವ ಪುರಾಣ'ವು, ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ರಚಿಸಿದ 'ಬಸವ ಪುರಾಣಮು' ಎಂಬುದರ ಅನುವಾದ. ಪದ್ಮಣಾಂಕನ 'ಪದ್ಮರಾಜ ಪುರಾಣ'ವು ಒಂದು ಸ್ವತಂತ್ರ ಕೃತಿಯಾಗಿದೆ. ಈ ಕಾವ್ಯಗಳೆರಡೂ ಷಟ್ಪದಿ ಛಂದಸ್ಸಿನಲ್ಲಿವೆ. ಆದರೆ ಭೀಮಕವಿಯು ದೇಸಿ ಶೈಲಿಯಲ್ಲಿ ಬರೆದಿದ್ದರೆ ಪದ್ಮಣಾಂಕನ ಕಾವ್ಯವು ಪ್ರೌಢವೂ ಪ್ರಾಚೀನವೂ ಆದ ಮಾರ್ಗೀ ಶೈಲಿಯಲ್ಲಿದೆ. ಭೀಮಕವಿಯು ತೆಲುಗು 'ಬಸವ ಪುರಾಣಮು' ಕಾವ್ಯವನ್ನು ಅನುವಾದ ಮಾಡಿದ್ದರೂ ಕಥಾವಸ್ತುವಿನಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿರುತ್ತಾನೆ. ಕನ್ನಡ 'ಬಸವ ಪುರಾಣ'ವು ಗಳಿಸಿರುವ ಖ್ಯಾತಿಗೆ ಅದು ಅರ್ಹವಾಗಿರಲು ಕಾರಣವೇನೆಂದರೆ ಪಾಲ್ಕುರಿಕೆ ಸೋಮನಾಥನ ಕಥನಕೌಶಲ ಹಾಗೂ ನಿರೂಪಣಾ ತಂತ್ರವೇ ಎಂಬ ಅಂಶವನ್ನು ಅಲ್ಲಗಳೆಯಲಾಗದು. ಹಾಗಿದ್ದರೂ ಅದೇ ಸಂದರ್ಭದಲ್ಲಿ ಭಿಮಕವಿಯ

ಅನುವಾದಕಾರ್ಯದಲ್ಲಿ ಅವನ ಸಾಧನೆಗಳನ್ನು ನಾವು ಗುರುತಿಸಿ ಅಂಗೀಕರಿಸಲೇಬೇಕು. ಭಿಮಕವಿಯು ಅನುವಾದಕಾರ್ಯದಲ್ಲಿ ತನ್ನ ಸ್ವೋಪ್ರಜ್ಞತೆಯನ್ನು ಪ್ರದರ್ಶಿಸಲು ಶಕ್ತಿ ಮೀರಿ ಪ್ರಯತ್ನಿಸಿದ್ದಾನೆ. ನಿಜಾಂಶವನ್ನು ಹೇಳಬೇಕೆಂದರೆ, ಪೂರ್ಣಕೃತಿಯನ್ನು ಭಾಮಿನೀಷಟ್ಪದಿಯಲ್ಲಿ ಆ ಛಂದಸ್ಸಿನ ವಿಶಿಷ್ಟ ಸಾಧ್ಯತೆ, ವಿಸ್ತಾರಗಳನ್ನು ಉಪಯೋಗಿಸಿಕೊಂಡು ರಚಿಸಿದವರಲ್ಲಿ ಅವನೇ ಮೊದಲಿಗನು. ಇದರಿಂದಾಗಿ ಅವನು ಇತರ ಕನ್ನಡ ಕವಿಗಳಿಗೆ ಮಾರ್ಗದರ್ಶನ ಮಾಡಿರುತ್ತಾನೆ.

ಪದ್ಮಣಾಂಕನು ತನ್ನ ಪೂರ್ವಜ ಪದ್ಮರಸನನ್ನು ಕಾವ್ಯದ ನಾಯಕನನ್ನಾಗಿ ಮಾಡಿಕೊಂಡು 'ಪದ್ಮರಾಜ ಪುರಾಣ'ವನ್ನು ಬರೆದಿದ್ದಾನೆ. ಪದ್ಮರಸನ ಮಹತ್ವ, ಭಕ್ತಿ, ಧರ್ಮದಲ್ಲಿ ನಿರ್ವ್ಯಾಜ ವಿಶ್ವಾಸ, ಪ್ರಾಪಂಚಿಕ ಘಟನೆಗಳನ್ನು ಎದುರಿಸುತ್ತಿದ್ದ ದೃಷ್ಟಿ ಮತ್ತಿತರ ಗುಣಗಳನ್ನು ನಿರೂಪಿಸುವುದರ ಮೂಲಕ ಅವನು ವೀರಶೈವ ಧರ್ಮವನ್ನು ಬೆಂಬಲಿಸಿ ಎತ್ತಿ ಹಿಡಿಯುತ್ತಾನೆ; ಮತ್ತಿತರ ಎಲ್ಲ ಧರ್ಮಗಳನ್ನೂ ಖಂಡಿಸುತ್ತಾನೆ[27].

ಈ ಕಾಲಾವಧಿಯಲ್ಲಿ ಯಾವುದೇ ಧರ್ಮದ ಸಂಬಂಧವನ್ನೂ ಹೊಂದಿಲ್ಲದ ಒಂದೇ ಒಂದು ಚೊಕ್ಕ ಸಾಹಿತ್ಯ ಕೃತಿಯನ್ನು ತೆಲುಗಿನಲ್ಲಿಯೂ ಹಾಗೆಯೇ ಮತ್ತೊಂದನ್ನು ಕನ್ನಡದಲ್ಲಿಯೂ ರಚನೆಯಾದುದನ್ನು ಕಾಣುತ್ತೇವೆ. ಆ ಕೃತಿಗಳು ಯಾವುವೆಂದರೆ ಕನ್ನಡದಲ್ಲಿ ದೇವರಾಜನ 'ಸೊಬಗಿನ ಸೋನೆ' ಮತ್ತು ತೆಲುಗಿನಲ್ಲಿ ಜಕ್ಕನ ಕವಿಯ 'ವಿಕ್ರಮಾರ್ಕ ಚರಿತ್ರಮು'. ದೇವರಾಜನು ವಿಜಯನಗರ ಸಾಮ್ರಾಜ್ಯದ ಸಂಗಮ ವಂಶಕ್ಕೆ ಸೇರಿದ ರಾಜನಾಗಿದ್ದನು. ಈ ಕಾವ್ಯದಲ್ಲಿ ಒಂಬತ್ತು

ಅದ್ಭುತ ರಮ್ಯ ಕಥೆಗಳವೆ. ಈ ಎಲ್ಲ ಕಥೆಗಳಗೂ ನಾಯಕ ವಿಕ್ರಮ ಅಥವಾ ಜಸಂಗಪರಾಯ. ಇದೇ ದೇವರಾಜನು ಸಂಸ್ಕೃತದ 'ಅಮರು ಶತಕ'ವನ್ನು ಕನ್ನಡಕ್ಕೆ ಭಾಷಾಂತರಿಸಿರುತ್ತಾನೆ.

ಜಕ್ಕನನು ವಿಜಯನಗರದ ರಾಜನಾದ ಮೊದಲನೆಯ ದೇವರಾಜನ ಕೈಕೆಳಗೆ ಮಂತ್ರಿಯಾಗಿದ್ದ ವೆನ್ನಕಂತಿ ಸಿದ್ದನನ ಆಶ್ರಿತನಾಗಿದ್ದನು. 'ವಿಕ್ರಮಾರ್ಕ ಚರಿತ್ರಮು' ಕಾವ್ಯವು ಈ ಸಿದ್ದನ ಮಂತ್ರಿಗೆ ಅಂಕಿತವಾಗಿದೆ. ಈ ಕಾವ್ಯದ ನಾಯಕನು ವಿಕ್ರಮಾರ್ಕ. ಅವನ ಸಾಹಸಕಾರ್ಯಗಳು, ಧರ್ಮ ಹಾಗೂ ಉಪಕಾರ ಬುದ್ಧಿ, ನಿಸ್ವಾರ್ಥಗುಣ ಮತ್ತು ಬುದ್ಧಿ ಸೂಕ್ಷ್ಮತೆ ಇವುಗಳು ಉತ್ತಮವಾದ ರೀತಿಯಲ್ಲಿ ಚಿತ್ರಿತವಾಗಿವೆ[28].

ಶಾಸ್ತ್ರ ಸಾಹಿತ್ಯ ವಿಭಾಗದಲ್ಲಿ ಮಂಗರಾಜ, ಅಭಿನವ ಮಂಗರಾಜ ಮತ್ತು ಅಭಿನವ ಚಂದ್ರ ಇವರ ಕೃತಿಗಳು ಉಲ್ಲೇಖಾರ್ಹವಾಗಿವೆ. ಮಂಗರಾಜ 'ಖಗೇಂದ್ರ ಮಣಿದರ್ಪಣಂ' ಎಂಬ ಕೃತಿಯನ್ನು ರಚಿಸಿದ್ದಾನೆ. ಅದು ಹಾವಿನ ಕಡಿತಕ್ಕೆ ಉಪಯೋಗಿಸುವ ಔಷಧಗಳನ್ನು ಕುರಿತು ವಿವರಿಸುತ್ತದೆ. ಇಡೀ ಗ್ರಂಥವು ಹದಿನಾರು ಅಧ್ಯಾಯಗಳಾಗಿ ವಿಂಗಡಿಸಲ್ಪಟ್ಟು ಪದ್ಯರೂಪದಲ್ಲಿ ವಸ್ತುವನ್ನು ನಿರೂಪಿಸಲಾಗಿದೆ. ಅಭಿನವ ಮಂಗರಾಜ 'ಅಭಿನವ ನಿಘಂಟು'ವನ್ನು ಸಿದ್ಧಪಡಿಸಿದ್ದಾನೆ. ಅಭಿನವ ಚಂದ್ರ 'ಅಶ್ವ ಶಾಸ್ತ್ರ'ವನ್ನು ಬರೆದನು. ಈ ಗ್ರಂಥವು ಉತ್ತಮವಾದ ಕುದುರೆಗಳ ಆಯ್ಕೆ, ಜಾತ್ಯಶ್ವಗಳ ಲಕ್ಷಣ ಮತ್ತು ಅವುಗಳನ್ನು ಕಂಡು ಹಿಡಿಯುವ ಬಗೆ ಹಾಗೂ ಕುದುರೆಗಳನ್ನು ಸಾಕುವ ರೀತಿ ಇವುಗಳಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಮಾಹಿತಿ ಕೊಡುತ್ತದೆ. ಗ್ರಂಥಕಾರನು ಹಿಂದೆ ಇದ್ದ ಶಾಸ್ತ್ರಕಾರರಾದ

ಸಿಂಹದತ್ತ, ದಿನಕರತನಯ ಮತ್ತು ರೇವಂತ ಇವರಿಗೆ ತಾನು ಋಣಿಯಾಗಿರುವ ಅಂಶವನ್ನು ತಿಳಿಸಿ ಉಪಕಾರ ಸ್ಮರಣೆ ಮಾಡಿದ್ದಾನೆ.

ಈ ಕಾಲಕ್ಕೂ ಹಿಂದೆಯೇ ಕೆಲವು ಶತಕಗಳು ನಮ್ಮಲ್ಲಿದ್ದವು. ಈ ಕಾಲದಲ್ಲಿ ಶತಕ ಸಾಹಿತ್ಯವು ದೊಡ್ಡಪ್ರಮಾಣದಲ್ಲಿ ಬೆಳೆಯಿತು. ಸಂಸ್ಕೃತ ಗ್ರಂಥಗಳ ಮೇಲೆ ಕನ್ನಡ ವ್ಯಾಖ್ಯಾನ ಮತ್ತು ವಿಮರ್ಶಾಗ್ರಂಥಗಳು ಆಸ್ತಿತ್ವಕ್ಕೆ ಬಂದವು. ವೀರಶೈವ ವಿದ್ವಾಂಸರನೇಕರು ಸಾಹಿತ್ಯದ ಈ ಕ್ಷೇತ್ರ ಅಥವಾ ಪ್ರಕಾರಕ್ಕೆ ಅಪಾರ ಕಾಣಿಕೆಯನ್ನು ಸಲ್ಲಿಸಿರುತ್ತಾರೆ. ಕ್ರಿ.ಶ. 1350ರ ಸುಮಾರಿಗೆ ಜೀವಿಸಿದ್ದ ಗುರುದೇವನು ಹನ್ನೆರಡಕ್ಕೂ ಅಧಿಕ ಸಂಖ್ಯೆಯಲ್ಲಿ ಅಂತಹ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿದನು.

ಈ ಕಾಲದ ಕನ್ನಡ ಮತ್ತು ತೆಲುಗು ಸಾಹಿತ್ಯವನ್ನು ಕುರಿತ ಮೇಲಿನ ಸಮೀಕ್ಷೆಯಿಂದ ನಾವು ಮುಂದೆ ಕೊಟ್ಟಿರುವ ನಿರ್ಣಯಕ್ಕೆ ಬರಬಹುದು. ತೆಲುಗು ಮತ್ತು ಕನ್ನಡ ಸಾಹಿತ್ಯಗಳಲ್ಲಿರುವ ಸಾಮಾನ್ಯ ಲಕ್ಷಣಗಳು ಮತ್ತು ಸಾಹಿತ್ಯ ಕೃತಿಗಳ ಪರಸ್ಪರ ವಿನಿಮಯಗಳು ರಾಜಕೀಯ ಅಥವಾ ಭೌಗೋಳಿಕ ಕಾರಣಗಳಿಂದ ಮಾತ್ರವೇ ಆಗಿಲ್ಲ. ಮತ, ಧರ್ಮವೂ ಕೂಡ ಮುಖ್ಯವಾದ ಪಾತ್ರವನ್ನು ವಹಿಸಿದ್ದಿತು. ದಕ್ಷಿಣ ಭಾರತದ ಪ್ರಾಂತ್ಯಗಳನ್ನೆಲ್ಲಾ ಪರಸ್ಪರ ಸಂಬಂಧಿಸಿರುವ ಅಂತಹ ಒಂದು ಕ್ಷೇತ್ರವೆಂದರೆ ಶೈವ ಸಾಹಿತ್ಯ. ಕವಿಗಳ ಸ್ವತಂತ್ರ ಮನೋಭಾವದ ದೆಸೆಯಿಂದ ಅನೇಕ ಸಾಹಿತ್ಯ ಕೃತಿಗಳು ಯಾವ ಪ್ರೋತ್ಸಾಹ, ಆಶ್ರಯಗಳೂ ಇಲ್ಲದೆ ಸೃಷ್ಟಿಯಾದವು. ಒಟ್ಟಿನಲ್ಲಿ ಈ ಕಾಲವು ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಸಾಹಿತ್ಯದ ದೃಷ್ಟಿಯಿಂದ ಕೂಡ ಒಂದು ಸಂಧಿಕಾಲವಾಗಿದೆ[29].

**ಅಡಿಟಿಪ್ಪಣಿಗಳು:**

1. ಎ.ಎಸ್. ನಂಜುಂಡಸ್ವಾಮಿ, *ವಿಜಯನಗರದ ಇತಿಹಾಸ,* ಪು.17
2. *ಅದೇ,* ಪು.35
3. ಪಾಂಡುರಂಗರಾವ ದೇಸಾಯಿ, *ಹಂಪೆ,* ಪು.21
4. *ಅದೇ,* ಪು.23
5. ಎನ್. ವೆಂಕಟರಮಣಯ್ಯ, *ವಿಜಯನಗರ ಚರಿತ್ರೆ,* ಪು.113
6. *ಅದೇ,* ಪು.117
7. ಎಚ್.ಎಂ. ನಾಗರಾಜು, *ವಿಜಯನಗರದ ಇಮ್ಮಡಿದೇವರಾಯ,* ಪು.268
8. *ಅದೇ,* ಪು.298
9. ಎನ್. ಚಿನ್ನಸ್ವಾಮಿ ಸೋಸಲೆ, *ಸಾಮ್ರಾಜ್ಯ ಮತ್ತು ಸಂಸ್ಥಾನ,* ಪು.114
10. *ಅದೇ,* ಪು.157

11. *ಅದೇ,* ಪು.169

12. ಸದಾನಂದ ಕನವಳ್ಳಿ (ಅನು.), *ಮರೆತಹೋದ ಮಹಾಸಾಮ್ರಾಜ್ಯ ವಿಜಯನಗರ,* ಪು.114

13. *ಅದೇ,* ಪು.146

14. ಜಿ.ಎಸ್. ದೀಕ್ಷಿತ್, *ಸಂಗಮರ ಕಾಲದ ವಿಜಯನಗರ,* ಪು.13

15. *ಅದೇ,* ಪು.17

16. *ಅದೇ,* ಪು.21

17. ಸುಚೇತಾ ನವರತ್ನ (ಅನು.), *ಅಚ್ಯುತರಾಯಾಭ್ಯುದಯಂ*, ಪು.67

18. *ಅದೇ,* ಪು.71

19. ಎಂ. ಕೊಟ್ರೇಶ್, *ಬಳ್ಳಾರಿ ಜಿಲ್ಲೆಯ ಕೋಟೆಗಳು*, ಪು141

20. *ಅದೇ,* ಪು.151

21. ಬಿ.ಎ. ವಿವೇಕ ರೈ (ಸಂ), *ಪ್ರವಾಸಿ ಕಂಡ ವಿಜಯನಗರ,* ಪು.164

22. *ಅದೇ,* ಪು.171

23. ಗುರುಮೂರ್ತಿ ಪೆಂಡಕೂರು (ಅನು.), *ಭಗ್ನ ವಿಜಯನಗರ ಚರಿತ್ರೆ,* ಪು.166

24. *ಅದೇ,* ಪು.197

25. ಲಕ್ಷ್ಮಣ್ ತೆಲಗಾವಿ, *ರಾಮರಾಜನ ಬಖೈರು,* ಪು.46

26. *ಅದೇ,* ಪು.61

27. ಕುಶಾಲಪ್ಪ ಗೌಡ (ಅನು.), *ಮಧುರಾವಿಜಯಂ,* ಪು.142

28. *ಅದೇ,* ಪು.151

# ಅಧ್ಯಾಯ 5

## ವಿಜಯನಗರದ ಸಂಗಮರ ಕಾಲದ ಕಲೆ ಮತ್ತು ವಾಸ್ತುಶಿಲ್ಪ

---

❖ **ಕಲೆ:**

ದಕ್ಷಿಣ ಭಾರತದ ಕಲಾ ಇತಿಹಾಸದಲ್ಲಿ ವಿಜಯನಗರ ಕಾಲದ ಕಲೆಗೆ ಒಂದು ವಿಶಿಷ್ಟ ಸ್ಥಾನವಿದೆ. ಆ ಕಾಲದಲ್ಲಿನ ಅಗಾಧವಾದ ಕಲಾಚಟುವಟಿಕೆಗಳು ವಿಜಯನಗರ ಕಲೆಯ ವಿವಿಧ ಹಂತಗಳನ್ನು ಪ್ರಸ್ತುತಪಡಿಸುತ್ತವೆ. ಚಾಲುಕ್ಯ, ಹೊಯ್ಸಳ ಕಲಾಶೈಲಿಯ ಮತ್ತು ವಾಸ್ತುಶೈಲಿಯ ಹಿನ್ನೆಲೆಯಿಂದ ಪ್ರಾರಂಭವಾದ ಚಟುವಟಿಕೆಗಳು ಸಮಕಾಲೀನ ಇಸ್ಲಾಮಿಕ್ ಕಲಾಶೈಲಿಯನ್ನು ಅವಶ್ಯವಿದ್ದಲ್ಲಿ ಉಪಯೋಗಿಸಿಕೊಂಡು ವಿಜಯನಗರದ್ದೇ ಎನ್ನುವಂತಹ ಒಂದು ವಿಶಿಷ್ಟವಾದ ಶೈಲಿಯನ್ನು ಅಭಿವೃದ್ಧಿಪಡಿಸಿದವು[1].

ವಿಜಯನಗರ ಕಾಲದಲ್ಲಿ ರಾಜ್ಯವ್ಯಾಪ್ತಿಯಿರುವಷ್ಟು ಉದ್ದಗಲಕ್ಕೂ ಕಲಾಚಟುವಟಿಕೆಗಳು ನಡದೇ ಇದ್ದವು. ವಿಜಯನಗರವನ್ನು ಆಳಿದ ವಿಭಿನ್ನ ರಾಜಮನೆತನಗಳು ದೇವಾಲಯಗಳ, ಶಿಲ್ಪಗಳ, ಅರಮನೆಗಳ, ಕೋಟೆ ಕೊತ್ತಲಗಳ ಮತ್ತು ಕೆರೆ ಬಾವಿಗಳ ನಿರ್ಮಾಣಕ್ಕೆ ಪೋಷಕವಾಗಿದ್ದುದು ದಾಖಲೆಗಳಿಂದ ತಿಳಿದುಬರುತ್ತದೆ. ಆ ಕಾಲದ ಕಲಾವಿದ ಕಟ್ಟಡಗಳ ನಿರ್ಮಾಣದ ತೀವ್ರತೆ ಮತ್ತು ಇರುವ ಕಾಲಾವಕಾಶದಲ್ಲಿ ಅವುಗಳನ್ನು ಸಂಪೂರ್ಣಗೊಳಿಸುವುದಕ್ಕಾಗಿ ಹೊಸ ಹೊಸ

ಮಾಧ್ಯಮಗಳನ್ನು ರೂಢಿಸಿಕೊಳ್ಳಬೇಕಾಯಿತು. ಇದಕ್ಕಾಗಿ ಶಿಖರ–ಗೋಪುರಗಳ ನಿರ್ಮಾಣಗಳಲ್ಲಿ ಹೊಸ ಮಾಧ್ಯಮವನ್ನು ಪ್ರಯೋಗಿಸಲಾಯಿತು. ವಿಜಯನಗರದ ದೇವಾಲಯಗಳ ಮುಖ್ಯ ಆಕರ್ಷಣೆಗಳಾದ ಮಹಾದ್ವಾರದ ಮೇಲಿನ ಆಕಾಶದೆತ್ತರಕ್ಕೆ ಚಾಚಿಕೊಂಡಿರುವ ಗೋಪುರ, ದೇವಸ್ಥಾನದ ಕಲ್ಯಾಣಮಂಟಪಗಳು ಮತ್ತು ಮುಖಮಂಟಪಗಳು ಮೇಲಿನ ಪ್ರಸ್ತರಗಳ ಸಾಲು ಹೀಗೆ ದೇವಾಲಯದ ಅಲಂಕರಣಕ್ಕೆ ಕಲ್ಲಿನಲ್ಲಿ ಕೆತ್ತಲು ಬೇಕಾಗುವ ಕಾಲಾವಕಾಶವನ್ನು ಗಮನಿಸಿದರೆ ಪ್ರಾಯಶಃ ಯೋಚಿಸಲು ಸಾಧ್ಯವಾಗದಷ್ಟು ಸಮಯಬೇಕಾಗುತ್ತದೆ. ಅದಕ್ಕೆಂದೇ ವಿಜಯನಗರದ ಕಾಲದಲ್ಲಿ ಕಲಾವಿದ ಅಂದು ಪ್ರಚಲಿತದಲ್ಲಿದ್ದ ಹೊಸ ಮಾಧ್ಯಮವನ್ನು ತನ್ನದಾಗಿಸಿಕೊಂಡಿರಬೇಕು. ಶಿಲೆ, ಕಾಷ್ಠಗಳಗಿರುವಂತೆ ಇದಕ್ಕೂ ದೀರ್ಘವಾದ ಇತಿಹಾಸವಿದೆ ಅದೇನೇ ಇರಲಿ ವಿಜಯನಗರ ಕಾಲದಲ್ಲಿ ಗಾರೆ ಶಿಲೆಯಷ್ಟೇ ಪ್ರಮುಖವಾದ ಮಾಧ್ಯಮವಾಯಿತು. ಯಾವುದೇ ದೇವಾಲಯದ ನಿರ್ಮಾಣವಿರಲಿ, ಮಂಟಪ, ಪುಷ್ಕರಣಿಗಳಾಗಲೀ ಅಥವಾ ಇನ್ನಾವುದೋ ಖಾಸಗಿ ಕಟ್ಟಡದ ನಿರ್ಮಾಣವಿರಲಿ ಇಟ್ಟಿಗೆ ಮತ್ತು ಗಾರೆ ಅಲ್ಲಿ ಉಪಯೋಗವಾಗಿರಲೇ ಬೇಕು[2].

ಗಾರೆಯೊಂದಿಗೆ ಇಟ್ಟಿಗೆ ಕೂಡ ವಿಜಯನಗರ ಕಾಲದ ದೇವಾಲಯಗಳ ಅಲಂಕರಣಗಳಲ್ಲಿ ಅಷ್ಟೇ ಮುಖ್ಯವಾದ ವಸ್ತುವಾಗಿದೆ. ಗೋಪುರ, ಶಿಖರ ಮತ್ತು ಕಿರು ವಿಮಾನಗಳ ನಿರ್ಮಾಣದಲ್ಲಿ ಮತ್ತು ಅಕೃತಿಗಳ ವಿಭಿನ್ನ ವಿನ್ಯಾಸಗಳ ಹಾಗೂ

ಯಾವುದೇ ಸೂಕ್ಷ್ಮವಾದ ಅಲಂಕಾರಿಕ ವಸ್ತುಗಳ ರಚನೆಯಲ್ಲಿ ಗಾರೆ ಮತ್ತು ಇಟ್ಟಿಗೆ ಸಮನಾಗಿ ಉಪಯೋಗವಾಗಿದೆ.

**ಗಾರೆಯ ಕಲಾ ಹಿನ್ನಲೆ:**

ಗಾರೆಯ ಕಲಾ ಮಾಧ್ಯಮವಾಗಿ ಬೆಳೆದುದನ್ನು ಸ್ಥೂಲವಾಗಿ ಗಮನಿಸಿದರೆ ಅದರ ಕಲಾ ಇತಿಹಾಸ ನಮ್ಮನ್ನು ಪ್ರಾಚೀನ ಕಾಲದತ್ತ ಕೊಂಡೊಯ್ಯುತ್ತದೆ. ಗಾರೆಯನ್ನು ಪ್ರಾಚೀನ ನಾಗರೀಕತೆಗಳಲ್ಲಿ ಉಪಯೋಗಿಸಿರುವುದನ್ನು ಈಜಿಪ್ತ, ಸುಮೇರಿಯನ್ ಮತ್ತು ಸಿಂಧೂ ನದಿ ಕೊಳ್ಳದ ಹರಪ್ಪ, ಮಹೆಂಜೋದಾರೋಗಳ ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು. ಈಜಿಪ್ತಿನ ಪಿರಮಿಡ್ಡುಗಳಲ್ಲಿನ ಒಳ ಕೋಣೆಗಳಲ್ಲಿ ಕಂಡು ಬರುವ ಭಿತ್ತಿಚಿತ್ರಗಳ ಹಿನ್ನಲೆಯಾಗಿ ಗಾರೆ ಉಪಯೋಗವಾಗಿದೆ. ಸುಮೇರಿಯನ್ ಸಂಸ್ಕೃತಿಯಲ್ಲಿನ ಜಿಗ್ಗುರಾಟ್‌ಗಳ ನಿರ್ಮಾಣದಲ್ಲಿ ಮತ್ತು ಬಿಡಿ ಆಕೃತಿಗಳ ನಿರ್ಮಾಣದಲ್ಲಿ ಗಾರೆ ಉಪಯೋಗವಾಗಿದೆ. ಗ್ರೀಕೋ-ರೋಮನ್ ನಾಗರೀಕತೆಗಳಲ್ಲಿ ಕಟ್ಟಡಗಳ ನಿರ್ಮಾಣದಲ್ಲಿ ಮತ್ತು ಕಲಾತ್ಮಕವಾದ ಶಿಲ್ಪಾಕೃತಿಗಳ ರಚನೆಗಾಗಿ ಗಾರೆ ಮಾಧ್ಯಮವಾಗಿದೆ. ಗಾರೆಗೆ ಸ್ವತಂತ್ರವಾದ ಕಲಾಮಾಧ್ಯಮದ ಸ್ಥಾನ ದೊರೆತಿದ್ದು ಗ್ರೀಕೋ-ರೋಮನ್ ಕಾಲದಲ್ಲಿಯೇ ಅನ್ನಬಹುದು.

ಇತ್ತ ಭಾರತದಲ್ಲಿ ಕುಷಾಣರ ಕಾಲದಲ್ಲಿ ಗಾಂಧಾರ ಶೈಲಿಯಲ್ಲಿ ರಚಿಸಲ್ಪಟ್ಟಿ ಹಲವಾರು ಬಿಡಿ ಆಕೃತಿಗಳು ಮತ್ತು ಕಥಾನಕ ಆಕೃತಿಗಳು ಕಂಡು ಬರುತ್ತವೆ. ಇವು

ಮುಖ್ಯವಾಗಿ ಬೌದ್ಧ ಧರ್ಮಕ್ಕೆ ಸೇರಿವೆ. ಶಾತವಾಹನರ ಕಾಲದ ಲಯಣಗಳಲ್ಲಿ ಹಾಗೂ ಗುಪ್ತ, ವಾಕಾಟಕ ರಾಜ ಮನೆತನದವರು ನಿರ್ಮಿಸಿರುವ ಬೌದ್ಧ ಚೈತ್ಯ ವಿಹಾರಗಳಲ್ಲಿನ ಭಿತ್ತಿ ಚಿತ್ರಗಳ ಹಿನ್ನೆಲೆಯ ಲೇಪನವಾಗಿ ಗಾರೆಯನ್ನು ಉಪಯೋಗಿಸಿದೆ. ಅಲ್ಲದೆ ಐಹೊಳೆಯಲ್ಲಿನ ಚಾಲುಕ್ಯ ಪೂರ್ವ ಇಟ್ಟಿಗೆಯ ಕಟ್ಟಡವನ್ನು ಗಾರೆಯನ್ನು ಉಪಯೋಗಿಸಿಯೇ ಕಟ್ಟಿದೆ. ನಂತರದ ಕಾಲದಲ್ಲಿ ಗಾರೆಯ ಉಪಯೋಗವಾಗಿದ್ದರೂ ಅದು ಸ್ವಲ್ಪ ವಿರಳವೆಂದೇ ಹೇಳಬೇಕು. ಏಕೆಂದರೆ, ದೇಶದ ಉದ್ದಗಲಕ್ಕೂ ಅಂದು ಪ್ರಭಾವಕಾರಿಯಾಗಿ ಪ್ರಚಲಿತದಲ್ಲಿದ್ದ ಭವ್ಯವಾದ ಲಯಣಗಳ ಕೆತ್ತನೆ, ದೇಗುಲಗಳ ನಿರ್ಮಾಣ, ಶಿಲ್ಪಗಳ ಕೆತ್ತನೆ ಎಲ್ಲವೂ ಶಿಲೆಯನ್ನು ಆಧರಿಸಿದವುಗಳೇ. ಹೀಗಾಗಿ ಅಂದು ಶಿಲೆ ಪ್ರಮುಖ ಮಾಧ್ಯಮವಾಯಿತು. ಆದರೆ, ಗಾರೆಗೆ ವಿಶೇಷವಾದ ಸ್ಥಾನಮಾನ ಮತ್ತೊಮ್ಮೆ ದೊರೆತದ್ದು 13–14ನೇ ಶತಮಾನದಲ್ಲಿ ಅನ್ನಬಹುದು. ಗಾರೆಯ ಉಪಯೋಗ ಪ್ರಾಯಶಃ ಅದರ ತಾಂತ್ರಿಕ ಸರಳತೆಯನ್ನು ಅವಲಂಬಿಸಿದೆ. ಅದಕ್ಕಾಗಿಯೇ ಪರ್ಶಿಯಾದಲ್ಲಿ ಇಸ್ಲಾಮಿಕ್ ದೊರೆಗಳು ಭವ್ಯವಾದ ಮಸೀದಿಗಳನ್ನು ನಿರ್ಮಿಸಲು ಪ್ರಾರಂಭಿಸಿದ್ದು[3]. ಪ್ರಾಯಶಃ ಅದೇ ಪರಂಪರೆ ಭಾರತದಲ್ಲಿ ಇಸ್ಲಾಮಿಕ್ ಧರ್ಮದ ಅರಸರು ರಾಜ್ಯಭಾರ ಪ್ರಾರಂಭಿಸಿದ ಮೇಲೆ ಮುಂದುವರೆದುಕೊಂಡು ಬಂದಿತೆಂದು ಹೇಳಬಹುದು, ಮಹಾದ್ವಾರಗಳ ಅಲಂಕರಣ, ಮಸೀದಿಗಳ ಒಳಮಾಳಿಗೆಗಳ, ಗೋಡೆಗಳ ಅಲಂಕರಣ, ಹೀಗೆ ಪ್ರಾರಂಭವಾದ ಗಾರೆಯ

ಉಪಯೋಗ ಕಾಲ ಕ್ರಮೇಣ ವಿಜಯನಗರ ಕಾಲದಲ್ಲಿ 'ಶಿಲೆಗೆ' ಪರ್ಯಾಯವಾಗಿ ಇಟ್ಟಿಗೆಯೊಂದಿಗೆ ಪ್ರಮುಖ ಮಾಧ್ಯಮವಾಯಿತು.

**ನೃತ್ಯ:**

ವಿಜಯನಗರದ ಸಂಗಮರ ಕಾಲದಲ್ಲಿ ಸಂಗೀತ ಮತ್ತು ನೃತ್ಯಗಳು ರಾಜಾಶ್ರಯ ಪಡೆದುಕೊಂಡಿದ್ದವು. ಇತರರಿಂದಲೂ ಮನ್ನಣೆ ಪಡೆದುಕೊಂಡಿದ್ದವು. ಈ ನೃತ್ಯವನ್ನು ರಾಜಕುಮಾರಿ ಮತ್ತು ಜನಸಾಮಾನ್ಯರು ಸಹ ಅಭ್ಯಾಸ ಮಾಡುತ್ತಿದ್ದರು. ಇವುಗಳನ್ನು ವಿವಿಧ ಶಿಲ್ಪಗಳಲ್ಲಿ ಗುರ್ತಿಸಬಹುದಾಗಿದೆ.

ಹಂಪೆಯಲ್ಲಿ ಮಹಾನವಮಿ ದಿಬ್ಬ, ಹಜಾರರಾಮಸ್ವಾಮಿ ಮತ್ತು ಅಚ್ಯುತರಾಯ ದೇವಾಲಯಗಳ ಮೇಲೆ ಕಂಡುಬರುವ ಶಿಲ್ಪಗಳಲ್ಲಿನ ವಿವಿಧ ಭಂಗಿಗಳು, ಜನರು ಬಳಸುತ್ತಿದ್ದ ಕೋಲಾಟ ಮತ್ತು ಇತರ ಆಟಗಳ ಭಂಗಿಗಳು ಸಹ ನೃತ್ಯ ವೈಖರಿಯನ್ನು ಪ್ರತಿನಿಧಿಸುತ್ತವೆ. 'ಸ್ತ್ರೀ' ನರ್ತನದ ಸುತ್ತ ಕಂಡುಬರುವ ನುಡಿಸುತ್ತಿರುವ ಮೃದಂಗ, ತಬಲ, ಮದಗ, ಇತ್ಯಾದಿ ಸಂಗೀತ ವಾದ್ಯಗಳು ಸಹ ಶಿಲ್ಪಗಳಲ್ಲಿ ಕಂಡು ಬರುತ್ತವೆ[4].

ಹಜಾರರಾಮಸ್ವಾಮಿ ದೇವಸ್ಥಾನದ ಗೋಡೆಯ ಮೇಲೆ ವಿವಿಧ ಭಂಗಿಯ ನೃತ್ಯ ಶೈಲಿಗಳು, ಆ ನೃತ್ಯಗಾರರು ತಮ್ಮ ವಾದ್ಯಗಳ ಜೊತೆ ಹೆಜ್ಜೆ ಹಾಕುತ್ತಾ, ವಾದ್ಯಗಳನ್ನು ನುಡಿಸುತ್ತಾ ವಿವಿಧ ನೃತ್ಯ ಭಂಗಿಯಲ್ಲಿ ಮುಂದೆಸಾಗಿ ಹೋಗುವ ದೃಶ್ಯ ಕಂಡುಬರುತ್ತದೆ. ಈ ದೇವಸ್ಥಾನದ ಮೇಲಿನಭಾಗದಲ್ಲಿ ವಿವಿಧ ವಾದ್ಯಮೇಳದ ಮಧ್ಯೆ

ನೃತ್ಯಗಾರರ ವಿವಿಧ ಸಮೂಹ, ಭಂಗಿಗಳು, ಜೊತೆ ಜೊತೆಯಾಗಿ ಹಾಡಿ ಕುಣಿಯುತ್ತಾ ಸಾಗುವ ದೃಶ್ಯ ಸಹ ಕಂಡುಬರುತ್ತದೆ.

ಪ್ರಾಥಮಿಕ ಹಂತದ ನೃತ್ಯವನ್ನು ಎರಡು ಭಾಗವಾಗಿ ವಿಂಗಡನೆ ಮಾಡುತ್ತಿದ್ದರು. ಶಾಸ್ತ್ರೀಯ ನೃತ್ಯ ಶೈಲಿ, ಇದು ನಾಟ್ಯಶಾಸ್ತ್ರದ ಪರಂಪರೆಯನ್ನು ಉಳಿಸಿಕೊಂಡುಬಂದ ಒಂದು ನೃತ್ಯಭಾಗವಾಗಿತ್ತು. ಕೋಲಾಟ ಒಂದು ಜನಪದ ಶೈಲಿಯ ನೃತ್ಯವಾಗಿತ್ತು. ಅದು ವಿವಿಧ ಭಂಗಿಯಲ್ಲಿ ಮೆಚ್ಚುಗೆ ಗಳಿಸಿತ್ತು. ಕೆಲವೊಂದು ದೇವಸ್ಥಾನದ ಗೋಡೆಗಳ ಮೇಲೆ ಈ ಕೋಲಾಟದ ಭಂಗಿಯನ್ನು ಬಿಡಿಸಲಾಗಿದೆ. ಅಂದು ಸಾಮಾನ್ಯ 'ಸ್ತ್ರೀ' ಸಹ ಕೋಲಾಟ ಆಡಬಲ್ಲವಳಾಗಿದ್ದಳು. ಎರಡು ಕೋಲು ಬಳಸಿ ನಡೆಯುತ್ತಿದ್ದ ನೃತ್ಯಭಂಗಿಯ ಕೋಲಾಟ ಒಂದು ಆಕರ್ಷಣೆಯ ಸಾಂಸ್ಕೃತಿಕ ಚಟುವಟಿಕೆಯಾಗಿತ್ತು.

ಭರತನಾಟ್ಯ ಸಹ ಒಂದು ಖ್ಯಾತ ನೃತ್ಯ ಆಗಿತ್ತು. ಇಲ್ಲಿ ಶಾಸ್ತ್ರೀಯ ನೃತ್ಯಗಾತಿಯ ವರ್ಣನೆ ಇದೆ. ಆಕೆ 'ಅರ್ಧ ಭಂಗಿಗಳನ್ನು', ಸುಂದರ ಮೋಹಕ ಆಭರಣಗಳು. ಕತ್ತಿನ ಪದಕ, ತಲೆಯ ವಸ್ತ್ರ, ಮುಂತಾದ ಆಭರಣವನ್ನು ಧರಿಸುತ್ತಿದ್ದರು. ನೃತ್ಯ ಮಂದಿರಕ್ಕೆ ಆಕೆ ಬಂದಾಗ ದೇವಲೋಕದ ದೇವತೆಯಂತೆ ಕಂಗೊಳಿಸುವಂತೆ ಕಾಣುತ್ತಿದ್ದಳು[5].

ಹೋಳಿ ಹಬ್ಬದ ಕಾಲದಲ್ಲಿ ನೃತ್ಯ ವೈಖರಿಯ ಭಂಗಿಗಳು, ಅದರ ಆಚರಣೆ, ಮುಂತಾದವು ಸಹ ಇವೆ. ಹಬ್ಬದ ದಿನದಲ್ಲಿ ಇಬ್ಬರು ಸ್ತ್ರೀಯರು ಬಣ್ಣದ ನೀರಿನಿಂದ

ನೆನೆದು, ನೃತ್ಯ ಮಾಡುವ ದೃಶ್ಯ. ಒರಟಾದ ಕಲ್ಲಿನಿಂದ ಮೂಡಿ ಬಂದಿದೆ. ಇಂತಹ ನೃತ್ಯಗಳು ಹೋಳಿ, ಸಭೆ ಸಮಾರಂಭಗಳಲ್ಲಿ ನಡೆಯುತ್ತಿದ್ದವು ಎಂದು ತಿಳಿದುಬರುತ್ತದೆ.

ನೃತ್ಯ ಭಂಗಿಯ ಶಿಲಾ ವಿನ್ಯಾಸದಲ್ಲಿ ಕೊರವಂಜಿಯ ನೃತ್ಯ ಶೈಲಿಯನ್ನು ಸೆರೆ ಹಿಡಿಯಲಾಗಿದೆ. ಆಕೆಯು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆಯುತ್ತಾ ಹಾಡುತ್ತಾ ಹಾಗೂ ಹಣವನ್ನು ಬೇಡುತ್ತಾ, ಭವಿಷ್ಯ ಹೇಳಲು ಮುಂದೆ ಸಾಗುತ್ತಾಳೆ. ಒಂದು ಬುಟ್ಟಿಯನ್ನು ಹಿಡಿದು ವಿವಿಧ ಭಂಗಿಯಲ್ಲಿ ಆಕೆ ಶಾಸ್ತ್ರ ಹೇಳುವ ವಿನ್ಯಾಸ ಸಹ ಕಂಡುಬಂದಿದೆ.

**ವಿಜಯನಗರದ ಸಂಗಮರ ಕಾಲದ ಶಿಲ್ಪಿಗಳು ಮತ್ತು ಲಿಪಿಕಾರರು:**

ಪ್ರಾಚೀನ ಭಾರತದ ಕಲಾಕಾರರು ದೇವಾಲಯಗಳ ನಿರ್ಮಾಣ ಮತ್ತು ಶಿಲ್ಪಗಳನ್ನು ಕೆತ್ತುವುದು ಒಂದು ಪವಿತ್ರ ಕೆಲಸವೆಂದು ತಿಳಿದಿದ್ದರು. ತಾವು ನಿರ್ಮಾಣ ಮಾಡಿದ ದೇವಾಲಯಗಳ ಮೇಲಾಗಲಿ ಅಥವಾ ಶಿಲ್ಪಗಳ ಮೇಲಾಗಲಿ ತಮ್ಮ ಹೆಸರುಗಳನ್ನು ನಮೂದಿಸುವ ಆಸಕ್ತಿ ಅವರಿಗೆ ಇರಲಿಲ್ಲವೆಂದು ತೋರುತ್ತದೆ. ಆದರೂ ಕೂಡಾ ಕರ್ನಾಟಕದಲ್ಲಿ ಬಾದಾಮಿಯ ಚಾಲುಕ್ಯರ, ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಕಾಲಗಳಲ್ಲಿ ಕೆಲವರು ತಮ್ಮ ಹೆಸರುಗಳನ್ನು ಶಿಲ್ಪಗಳ ಮೇಲೆ ನಮೂದಿಸಿರುವುದು ಕಂಡು ಬರುತ್ತದೆ. ಈ ಮೇಲಿನ ರಾಜ ಮನೆತನಗಳ ಸ್ಥಪತಿಗಳು ಮತ್ತು ಶಿಲ್ಪಿಗಳ ಬಗ್ಗೆ ಸಾಕಷ್ಟು ಸಂಶೋಧನೆಗಳು ನಡೆದಿವೆ. ಆದರೆ ವಿಜಯನಗರ

ಕಾಲದಲ್ಲಿ ಶಿಲ್ಪಿಗಳ ಮತ್ತು ಸ್ಥಪತಿಗಳ ಹೆಸರುಗಳನ್ನು ನಮೂದಿಸುವ ಪದ್ಧತಿಯು ಸ್ಥಗಿತವಾಗಿರುವುದು ಕಂಡುಬರುತ್ತದೆ[6].

**ಶಿಲ್ಪಿಗಳು:**

ವಿಜಯನಗರ ಕಾಲದ ಅನೇಕ ಶಾಸನಗಳು ಶಿಲ್ಪಿಗಳು ವಿಗ್ರಹಗಳನ್ನು, ನಿಸಿದಿಗಲ್ಲುಳನ್ನು, ವೀರಗಲ್ಲುಗಳನ್ನು ಹಾಗೂ ಶಾಸನಗಳನ್ನು ಕೆತ್ತಿರುವುದನ್ನು ಉಲ್ಲೇಖಿಸುತ್ತವೆ. ಎರಡನೆಯ ದೇವರಾಯನ ಕಾಲದಲ್ಲಿ ಧಾರವಾಡ ಜಿಲ್ಲೆಯ ಕುಂದಗೋಳದಲ್ಲಿಯ ಹನುಮಂತ ದೇವರ ವಿಗ್ರಹವನ್ನು ಕಲ್ಲೋಜ ಕೆತ್ತಿದನು. ಅದೇ ರೀತಿಯಾಗಿ ಉತ್ತರ ಕನ್ನಡ ಜಿಲ್ಲೆಯ ಹಾಡವಳ್ಳಿಯಲ್ಲಿ ಈಸರಾಚಾರಿ ಎರಡು ವೀರಗಲ್ಲುಗಳನ್ನು ಹಾಗೂ ಒಂದು ನಿಸಿದಿಯನ್ನು ಕೆತ್ತಿದನು. ಮತ್ತು ಅದೇ ಜಿಲ್ಲೆಯ ಕೈಕಿಣಿ ಎಂಬಲ್ಲಿ ಕೋಟಿವೋಜನ ಮಗ ಬೈಚಾಚಾರಿ ವೀರಗಲ್ಲನ್ನು ಕೆತ್ತಿದನು. ಮಂಡ್ಯ ಜಿಲ್ಲೆಯ ಅರುವನಹಳ್ಳಿಯಲ್ಲಿ ಬೆಲತೂರಿನ ಮಲಿಯೋಜನು ವೀರಗಲ್ಲಿನ ಶಿಲ್ಪವನ್ನು ಮಾಡಿರುವುದು ಗೋಚರಿಸುತ್ತದೆ. ಶಿವಮೊಗ್ಗ ಜಿಲ್ಲೆಯ ಕೊಲವಳ್ಳಿಯಲ್ಲಿಯ ವೀರಗಲ್ಲನ್ನು ವೀರೋಜನು ಮತ್ತು ಸೌಳಂಗದಲ್ಲಿಯ ವೀರಗಲ್ಲನ್ನು ದೇವೋಜನು ಕೆತ್ತಿರುವುದು ತಿಳಿಯುತ್ತದೆ. ಮುಂದುವರಿಯುತ್ತ ಊರಪೂರ್ವಿಕನ ಮಗನಾದ ಬನದೋಜನು ಮತ್ತು ಮಾದೋಜ-ನಾಗೋಜ ಹಿರೇಅವಲಿಯಲ್ಲಿ ನಿಸಿದಿಗಳನ್ನು ಮಾಡಿರುವುದು ತಿಳಿಯುತ್ತದೆ. ಬಳ್ಳಾರಿ ಜಿಲ್ಲೆಯ ರಾಜಬಾವನಹಳ್ಳಿಯ ಶಾಸನವು

ರಾಯೋಜ ಎಂಬ ಶಿಲ್ಪಿಯ ಹೆಸರನ್ನು ಸೂಚಿಸುತ್ತದೆ. ಚಿಕ್ಕಮಗಳೂರು ಜಿಲ್ಲೆಯ ಕರುವಂಗಿ ಶಾಸನವು ಮಲೋಜನ ಹೆಸರನ್ನು ಪ್ರತಿಬಿಂಬಿಸುತ್ತದೆ. ಮುಂದುವರಿಯುತ್ತಾ ಬೆಂಗಳೂರು ಜಿಲ್ಲೆಯ ಚಿಕ್ಕಮಾರಲವಾಡಿಯ ಶಾಸನವು ಬಸವಯ್ಯ ಎಂಬ ಶಿಲ್ಪಿಯು ಶಾಸನವನ್ನು ಬರೆದ ಬಗ್ಗೆ ತಿಳಿಸುವುದು. ಲಕ್ಕಣಚಾರಿಯ ಮಗ ಆಚಾರ್ಯ ಕಲ್ಲಯ್ಯನು ಶಿಲ್ಪಿಯಾಗಿದ್ದು, ಹಾಸನದಲ್ಲಿಯ ಶಾಸನವನ್ನು ಬರೆದದ್ದು ತಿಳಿಯುವುದು ಹಾಗೂ ಶಿವಮೊಗ್ಗ ಜಿಲ್ಲೆಯ ಸಂಪಗೆಕೋಟೆ ಶಾಸನವನ್ನು ಚಿತ್ರಿಕ ಗೌರಯ್ಯ ಬರೆದದ್ದು ತಿಳಿಯುವುದು[7].

ಶಿಲ್ಪಿಗಳು ತಾಮ್ರ ಶಾಸನಗಳನ್ನು ಬರೆಯುವುದರಲ್ಲಿಯೂ ಪರಿಣತಿ ಹೊಂದಿದ್ದರು. ಕೋಲಾರ ಜಿಲ್ಲೆಯ ಬೆಸ್ತರಹಳ್ಳಿಯ ತಾಮ್ರ ಶಾಸನವನ್ನು ನಾಗಿದೇವನು ಕ್ರಿ.ಶ. 1336ದಲ್ಲಿ ಬರೆದನು. ಅದೇ ರೀತಿಯಾಗಿ ಅದೇ ಜಿಲ್ಲೆಯ ಬೊಮ್ಮಸಂದ್ರ ಮತ್ತು ಮುದಿಯನೂರುಗಳಲ್ಲಿ ಎರಡು ತಾಮ್ರ ಶಾಸನಗಳನ್ನು ಬರೆದನು. ಮುದಿಯನೂರು ಶಾಸನವು ಅವನನ್ನು ಶಿಲ್ಪಿ ಎಂದು ಸಂಬೋಧಿಸುವುದು. ಶಿವಮೊಗ್ಗ ಜಿಲ್ಲೆಯ ವಿರುಪಾಪುರ ಶಾಸನವನ್ನು ಶಾಸನಚಾರ್ಯ ನಾಗಿದೇವನು 1394ರಲ್ಲಿ ಬರೆದನು.

**ಲಿಪಿಕಾರರು:**

ವಿಜಯನಗರದ ಸಂಗಮರ ಕಾಲದ ಶಾಸನಗಳನ್ನು ಅಧ್ಯಯನ ಮುಂದುವರೆಸುತ್ತ ಹೋದಂತೆ ಶಾಸನಗಳಲ್ಲಿ ಲಿಪಿಕಾರರನ್ನು ಗಮನಿಸಬಹುದು. ಇಲ್ಲಿ

ಕೆಲವು ಶಿಲ್ಪಿಗಳು, ಅಕ್ಕಸಾಲಿಗರು, ಕಂಚಿಗಾರರು, ಕಮ್ಮಾರರು ಮತ್ತು ಬಡಿಗರು ಶಾಸನಗಳನ್ನು ಕೆತ್ತಿರುವುದು ತಿಳಿಯುತ್ತದೆ. ಬೆಂಗಳೂರು ಜಿಲ್ಲೆಯ ನಾಗಶೆಟ್ಟಿಹಳ್ಳಿಯ ಶಾಸನವನ್ನು ತಿಮ್ಮಯ್ಯನು ಕೆತ್ತಿದ್ದು ತಿಳಿಯುವುದು. ಅದೇ ರೀತಿಯಾಗಿ ಬಳ್ಳಾರಿ ಜಿಲ್ಲೆಯ ದೇವಲಾಪುರ ಶಾಸನವನ್ನು ಗಿರಿಯಣ್ಣನೆಂಬ ಅಕ್ಕಸಾಲಿಗ ಕೆತ್ತಿದನು. ಅದೇ ಜಿಲ್ಲೆಯ ಯಳಪಿಯ ಶಾಸನದ ಕೊನೆಯಲ್ಲಿ ಕಂಚುಗಾರ ಚಿನ್ನೋಜನ ಹೆಸರಿದೆ. ತುಮಕೂರು ಜಿಲ್ಲೆಯ ಗಾಣದಹುಣಸೆ ಶಾಸನವನ್ನು ಕಮ್ಮಾರ ಚಿಕ್ಕಯ್ಯನ ಮಗ ಸಿದ್ದಣ್ಣನು ಬರೆದನು. ಬಳ್ಳಾರಿ ಜಿಲ್ಲೆಯ ಮುತ್ತಿಗಿ ಶಾಸನವನ್ನು ಬಡಗಿ ಪೊಚೊಜನ ಮಗ ದೇವೊಜನು ಕೆತ್ತಿದನು. ಶಾಸನಗಳನ್ನು ಬರೆದ ನಾಗಿದೇವನನ್ನು ಶಾಸನಚಾರ್ಯ ಎಂದು ಕರೆದಿರುವುದನ್ನು ಮೇಲೆ ಗಮನಿಸಿದ್ದೇವೆ. ಹಾಸನ ಜಿಲ್ಲೆಯ ಗೊಲ್ಲರ ಹೊಸಳ್ಳಿಯ ಶಾಸನವನ್ನು ಬರೆದ ವೊಡೆಯಪ್ಪಯ್ಯನ ಮೊಮ್ಮಗನಾದ ಮತ್ತು ಬಸವಚಾರಿಯ ಮಗನಾದ ವಿಶ್ವನಾಥನು (ವಿಶ್ವಕರ್ಮರ) ಜಗದ್ಗುರು ಆಗಿದ್ದನು[8].

ಅನೇಕ ಶಾಸನಗಳು ಲಿಪಿಕಾರರ ಹೆಸರುಗಳನ್ನು ಉಲ್ಲೇಖಿಸುತ್ತವೆ. ಬೆಂಗಳೂರು ಜಿಲ್ಲೆಯ ಮಾಲೂರುಪಟ್ಟಣದ ಶಾಸನವು ಗುಲಿ ಅಲ್ಲಪ್ಪ ಎಂಬ ಲಿಪಿಕಾರನ ಹೆಸರನ್ನು ಸೂಚಿಸಿದರೆ ಅದೇ ಜಿಲ್ಲೆಯ ಹರಿಹರದ ಶಾಸನವು ಮಲ್ಲೈಯನ ಬಗ್ಗೆ ಹೇಳುವುದು. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಶಾಸನವು ಚಿನ್ನ ಮಲ್ಲೋಜನ ಮಗ ಲಿಂಗೋಜನು ಶಾಸನವನ್ನು ಕೆತ್ತಿರುವುದನ್ನು ತಿಳಿಸುವುದು. ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣದ ಶಾಸನವು ಚೌಡೋಜನ ಮಗ ಚೌಡೋಜನು ಶಾಸನವನ್ನು

ಕೆತ್ತಿದ್ದನು ತಿಳಿಸುವುದು. ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳಮೂಡ ಶಾಸನವು ವೆಮಕೋಜನು ಶಾಸನವನ್ನು ಬರೆದದ್ದನ್ನು ಉಲ್ಲೇಖಿಸುವುದು. ಕೋಲಾರ ಜಿಲ್ಲೆಯ ಕಾಮಸಮುದ್ರದ ಶಾಸನವು ಪಾಪೋಜನು ಶಾಸನವನ್ನು ಬರೆದನೆಂದು ಹೇಳುವುದು. ಮಂಡ್ಯ ಜಿಲ್ಲೆಯ ಅರುವನಹಳ್ಳಿಯ ಶಾಸನವು ಬಯಿರೋಜನ ಬಗ್ಗೆ ಹೇಳುವುದು. ಅದೇ ಜಿಲ್ಲೆಯ ನೆಲಮನೆಯ ಶಾಸನವು ವರದಾಪಾಚಾರ್ಯರ ಮಗ ಶ್ರೀಗಿರಿ ಶಾಸನವನ್ನು ಕೆತ್ತಿದ್ದನ್ನು ಹೇಳುವುದು. ತುಮಕೂರು ಜಿಲ್ಲೆಯ ಉಜನಿಯಲ್ಲಿ ಸೋಮನಾಥನ ಮಗ ಆಲೋಜನು ಶಾಸನವನ್ನು ಕೆತ್ತಿದನು. ಕೋಟಿಚಾರಿ ಮಗ ಈಸರಾಚಾರಿ ಉತ್ತರ ಕನ್ನಡ ಜಿಲ್ಲೆಯ ಬೈಲೂರಿನಲ್ಲಿ ಶಾಸನವನ್ನು ಮತ್ತು ಕೈಕಿಣಿಯಲ್ಲಿ ವೀರಗಲ್ಲನ್ನು ಕೆತ್ತಿದನು.

ವಿಜಯನಗರದ ಸಂಗಮರ ಕಾಲದಲ್ಲಿ ತಾಮ್ರಶಾಸನವನ್ನು ಬರೆದವರಲ್ಲಿ ನಾಲ್ಕು ಜನರು ಪ್ರಮುಖವಾಗಿ ಕಾಣುತ್ತಾರೆ, ಅವರಲ್ಲಿ ಶಿಲ್ಪಿ ನಾಗಿದೇವನು ನಾಲ್ಕು ತಾಮ್ರ ಶಾಸನಗಳನ್ನು ಕ್ರಿ.ಶ. 1336 ರಿಂದ ಕ್ರಿ.ಶ. 1394ರ ಅವಧಿಯಲ್ಲಿ ಬರೆದಿದ್ದು ಶೃಂಗೇರಿ ಶಾಸನಗಳಿಂದ ಕಂಡು ಬರುತ್ತದೆ.

❖ **ವಾಸ್ತುಶಿಲ್ಪ:**

ವಿಜಯನಗರ ಕಾಲದ ವಾಸ್ತು ಹಾಗೂ ಶಿಲ್ಪಗಳು ಅನನ್ಯವಾಗಿ ತಮ್ಮದೇ ರೀತಿಯಲ್ಲಿ ರಚಿತವಾಗಿವೆ. ದೇವಾಲಯಗಳ ಹೊರಗಿನ ಸಪಾಟಾದ ಭಿತ್ತಿ,

ಬೃಹದಾಕಾರದ ಕಂಬಗಳು ಹಾಗೂ ರಾಯಗೋಪುರಗಳು ಇಡೀ ವಾಸ್ತುವಿಗೆ ಒಂದು ಭವ್ಯತೆಯ ರೂಪವನ್ನು ನೀಡಿವೆ. ಈ ರಚನೆಯನ್ನು 'ಹೊಸಬಗೆಯ ವಾಸ್ತು' ಎಂದು ಕರೆದಿದೆ. ಡೆಬ್ರಿಯಲ್ ಎಂಬಾತ ಈ ಕಾಲದ ವಾಸ್ತು ಶಿಲ್ಪಗಳ ಮೇಲೆ ಯಾವುದೇ ಹೊರಗಿನ ಪ್ರಭಾವ ಬೀರದೆ, ದೇಶೀಯ ಪ್ರತಿಭೆಯಾಗಿಯೇ ಅರಳಿದೆ ಎಂಬಂತೆ ಅಭಿಪ್ರಾಯ ಪಡುತ್ತಾನೆ[೨].

ಆದರೂ ಅಲ್ಲಲ್ಲಿ ವಿಜಯನಗರ ಕಾಲದ ಹಿಂದಿನ ಎಂದರೆ ಸಂಗಮ ವಂಶದ ಆರಂಭ ಕಾಲದಿಂದ ಅಲ್ಲಿಯವರಗಿನ ಶಿಲ್ಪಗಳ ಪ್ರಭಾವ ಕಂಡುಬರುತ್ತದೆ. ದಕ್ಷಿಣ ಭಾರತದ ವಾಸ್ತು ಶಿಲ್ಪಗಳನ್ನೆಲ್ಲಾ ಒಟ್ಟಾರೆಯಾಗಿ 'ದಖ್ಖಣಿ ಶೈಲಿ' ಎಂದೇ ಕರೆದಿದೆ. ಇದು ಮುಖ್ಯವಾಗಿ ಗರ್ಭಗುಡಿಯ ಮೇಲಿನ ಗೋಪುರ ಹಾಗೂ ಮೇಲ್ತುದಿಯಲ್ಲಿರುವ ಅಮಲಕವನ್ನು ಅನುಸರಿಸಿ ವಿಭಾಗಿಸಿರುವಂತಹದು. ಮಹಾಬಲಿಪುರದ ದೇವಾಲಯಗಳಲ್ಲಿ ಈ ಬಗೆಯ ರಚನೆಗಳು ಅರಂಭಗೊಂಡಂತೆ ಕಂಡು ಬರುತ್ತದೆ. ಮುಂದೆ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರಲ್ಲಿಯೂ ಮುಂದುವರಿಯಿತು. ಹೊಯ್ಸಳರಲ್ಲಿ ಗರ್ಭಗುಡಿಯ ಮೇಲಿನ ಗೋಪುರಗಳು ಉಳಿದು ಬಂದಿರುವುದು ತೀರಾ ಕಡಿಮೆಯಾದರೂ. ಕಂಬದಹಳ್ಳಿ ಹಾಗೂ ತೊಣ್ಣೂರಿನ ದೇವಾಲಯಗಳಲ್ಲಿ ಕೆಲಮಟ್ಟಿಗೆ, ಸೋಮನಾಥಪುರ, ಹೊಸಹೊಳಲು ಇವೇ ಮುಂತಾದ ಸ್ಥಳಗಳ ದೇವಾಲಯಗಳಲ್ಲಿ ಗಾತ್ರದಲ್ಲಿ ಹಿಂದಿನವಕ್ಕಿಂತ ಕಿರಿದಾದ, ಆದರೆ ಕೆಲಮಟ್ಟಿಗೆ ದಖ್ಖಣ್ ಶೈಲಿಯನ್ನು ಹೋಲುವಂತಹ ಗೋಪುರ ಹಾಗೂ

ಅಮಲಕಗಳನ್ನು ಕಾಣಬಹುದು. ಇದೇ ಬಗೆಯ ವಿನ್ಯಾಸ ವಿಜಯನಗರದಲ್ಲಿ ಹಜಾರ ರಾಮ, ವಿಠ್ಠಲ ಇತ್ಯಾದಿ ದೇವಾಲಯಗಳಲ್ಲಿ ಕಂಡು ಬರುತ್ತವೆ.

ಆರ್.ಎನ್. ಸಾಲತೊರೆಯವರು ತಮ್ಮ ವಿಜಯನಗರ ಕಲೆ ಕುರಿತ ಗ್ರಂಥದಲ್ಲಿ ಇತಿಹಾಸ ಆರಂಭಕಾಲದ ಬೌದ್ಧರ ಗುಹಾ ದೇವಾಲಯಗಳಿಂದ ಹಿಡಿದು ಪಲ್ಲವ-ಚೋಳರ ಕಾಲದವರೆಗಿನ ಹಲವಾರು ಬಗೆಯ ಕಂಬಗಳ ಅನುಕರಣೆ ವಿಜಯನಗರದ ವಿವಿಧ ದೇವಾಲಯಗಳಲ್ಲಿ ಕಂಡು ಬರುತ್ತದೆ ಎಂದು ಸೋದಾಹರಣವಾಗಿ ವಿವರಿಸಿದ್ದಾರೆ. ಅಂತೆಯೇ ಪಲ್ಲವರ ರಥವನ್ನು ಹೋಲುವಂತ ಮಹಾಬಲಿಪುರದ ದೇವಾಲಯಗಳ ಮಾದರಿಯ ರಚನೆಗಳನ್ನು ಇಲ್ಲಿಯ ವಿಜಯನಗರದ ದೇವಾಲಯಗಳಲ್ಲೂ ಗುರುತಿಸಿದ್ದಾರೆ. ಇವುಗಳೊಂದಿಗೆ ಇನ್ನಷ್ಟು ವಿಜಯನಗರ ಪೂರ್ವ ಶಿಲ್ಪಗಳ ಪ್ರಭಾವ ನೋಡಬಹುದು[10]. ಚಾಲುಕ್ಯ, ಹೊಯ್ಸಳರ ಕೆಲ ದೇವಾಲಯಗಳಲ್ಲೂ ಆಧಿಷ್ಠಾನ ರಹಿತವಾಗಿ ಹೊರಬಿತ್ತಿ ಸಪಾಟಾಗಿರುವುದುಂಟು. ವಿಶೇಷವಾಗಿ ಜೈನ ದೇವಾಲಯಗಳಲ್ಲಿ ಜಿನನಾಥಪುರ ಇತ್ಯಾದಿ ಕೆಲವೇ ಅಪವಾದಗಳ ವಿನಾ ಭಿತ್ತಿ ಶಿಲ್ಪಗಳು ರಚಿತವಾಗಿರುವುದಿಲ್ಲ.

ಗಂಗ ಪಲ್ಲವರ ಕಾಲದಲ್ಲಿಯೇ ಕುಳಿತ ಸಿಂಹದ ಶಿರೋಭಾಗದಲ್ಲಿ ಕಂಬಗಳ ರಚನೆಯನ್ನು ಕಂಚಿಯ ವೈಕುಂಠ ಪೆರುಮಾಳ್ ಹಾಗೂ ಗಂಗರ ಗಂಗವಾರ ದೇವನಹಳ್ಳಿ ತಾಲ್ಲೂಕುಗಳಲ್ಲಿ ಕಾಣಬಹುದು. ಇವು ಆಕಾರದಲ್ಲಿ ದೊಡ್ಡದಾದವು. ಆದರೆ ಕಿರು ಆಕಾರದ ಮುದ್ದಾದ ಸಿಂಹಶೀರ್ಷದ ಮೇಲಿನ ಪಟ್ಟಿಕೆಗಳಿಂದ ಕೂಡಿದ ತೆಳುವಾದ

ಕಂಬಗಳ ಸಾಲನ್ನು ಹಂಪೆಯ ವಿರೂಪಾಕ್ಷ ದೇವಾಲಯದ ಅಮ್ಮನವರ ಸನ್ನಿಧಿಯ ಮುಂಭಾಗದಲ್ಲಿ ನೋಡಬಹುದು. ಗರುಡಗಂಬ, ಧ್ವಜಸ್ಥಂಭ, ಮಾನಸ್ಥಂಭಗಳು ಹೊಯ್ಸಳರ ಮುಂದುವರಿದ ರೂಪಗಳೇ ಆಗಿವೆ. ವೀರಗಲ್ಲು, ಮಾಸ್ತಿಕಲ್ಲು, ನಿಸಿಧಿ ಕಲ್ಲುಗಳೂ ಮುಂದುವರಿದು ಬಂದಿವೆ. ನವರಂಗದಲ್ಲಿ ನೃತ್ಯಕ್ಕಾಗಿ 'ಚಂದ್ರಶಿಲೆ' ಕ್ವಚಿತ್ತಾಗಿ ಇದೆಯಾದರೂ ಹೊಯ್ಸಳರಂತೆ ಬಿಡಿ ಮದನಿಕಾ ವಿಗ್ರಹಗಳು ಮುಂದೆ ರಚನೆಯಾಗಲಿಲ್ಲ. ಆದರೆ ವಿಜಯನಗರದ ಇತರ ದೇವಾಲಯಗಳಗಿಂತ ಭಿನ್ನವಾಗಿ ಶೃಂಗೇರಿಯ ವಿದ್ಯಾಶಂಕರ ದೇವಾಲಯ ರಚಿತವಾಗಿದ್ದು, ಹೊರ ಭಿತ್ತಿಯಲ್ಲಿ ಹಲವಾರು ಶಿಲ್ಪಗಳಲ್ಲದೆ ಏಕೈಕ ಉದಾಹರಣೆಯೆಂಬಂತೆ ಶಂಖುವಿನಾಕಾರದ ಗೋಪುರ ಇದೆ[11].

ಒಂದೇ ಅವಧಿಯಲ್ಲಿ ಇಡೀ ದಕ್ಷಿಣಾಪಥ ವಿಜಯನಗರದ ಆಧೀನದಲ್ಲಿ ಇರಲಿಲ್ಲ. ಹಾಗೇನಾದರೂ ಇದ್ದರೆ ಅದು ಕೃಷ್ಣದೇವರಾಯನ ಕಾಲದಲ್ಲಿ ಕೆಲವು ವರ್ಷಗಳ ಮಟ್ಟಿಗೆ ಮಾತ್ರ. ಈತನೂ ಸೇರಿದಂತೆ ವಿಜಯನಗರವನ್ನು ಆಳಿದ ಅರಸರೆಲ್ಲಾ ಒಂದು ಪ್ರದೇಶ ಗೆದ್ದರೆ ಮತ್ತೊಂದು ಕೈತಪ್ಪುತ್ತಿತ್ತು. ಇಲ್ಲವೆ ಕಪ್ಪಕಾಣಿಕೆ ಪಡೆದು ದ್ರವ್ಯವನ್ನು ದೋಚಿ ಹಿಂದೆ ಇದ್ದ ಆ ಪ್ರದೇಶದಲ್ಲಿ ಅರಸರಿಗೆ ಅಥವಾ ಅವರ ವಂಶಸ್ಥರಿಗೆ ರಾಜ್ಯ ನೀಡಲಾಗುತ್ತಿತ್ತು. ತನಗೆ ದಕ್ಕಿದ ಇಡೀ ಪ್ರದೇಶವನ್ನು ಒಬ್ಬನೇ ವಿಜಯನಗರದ ಅರಸ ಆಳಿದಂತಿಲ್ಲ. ವಿಭಾಗ ಅಥವ ಮಂಡಲಗಳನ್ನಾಗಿ ರೂಪಿಸಿ ಅಧಿಕಾರಿಗಳಾಗಿ ಸಹೋದರರನ್ನೋ, ಮಕ್ಕಳನ್ನೋ ಅಥವ ದಂಡನಾಯಕರನ್ನೋ

ಇರಿಸಲಾಗುತ್ತಿತ್ತು. ವಿಜಯನಗರದವರು ಆಳಿದ ಇನ್ನೂರು ವರ್ಷಗಳಲ್ಲಿ ಸುಮಾರಾಗಿ ಹೆಸರಿಸಬಹುದಾದ ಕನಿಷ್ಠ ನೂರಾದರೂ ಯುದಗಳಾಗಿರಬಹುದು. ಶಿಲ್ಪ ಹಾಗೂ ವಾಸ್ತುಗಳು ಭವ್ಯವಾಗಿ ರೂಪಿತವಾದರೂ ಕಲಾತ್ಮಕತೆಯ ಕೊರತೆ ಕಂಡುಬರುತ್ತದೆ. ಹಿಂದೆ ಹೇಳಿದಂತೆ ಸಾಮ್ರಾಜ್ಯ ಹರಿದು ಹಂಚಿ ಹೋಗಿದ್ದ ಕಾರಣ ಈ ಅವಧಿಯ ಒಟ್ಟಾರೆ ಶಿಲ್ಪಗಳಲ್ಲಿ ಏಕರೂಪತೆ ಕಡಿಮೆ.

ಹೊಯ್ಸಳರ ಕಾಲದಲ್ಲಿ ಅದಂತೆ ಹೊರಗಿನಿಂದ ಪ್ರಸಿದ್ಧ ಶಿಲ್ಪಗಳನ್ನು ಕರೆಸಿ ರಚಿಸುವ ಬದಲಿಗೆ ಸ್ಥಳೀಯ ಕೆಲಸಗಾರರನ್ನು ಬಳಸಿಕೊಂಡಿರುವುದರಿಂದ ಶಿಷ್ಟ ಶೈಲಿಗಿಂತ ಜನಪದ ಶೈಲಿಯತ್ತ ಹೆಚ್ಚು ಹೋಲುತ್ತದೆಯೆನ್ನಬಹುದು.

ವಿಜಯನಗರದ ಸಂಗಮರಸರು ಶೈವ, ವೈಷ್ಣವ ದೇವಾಲಯಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡಿರುವರಾದರೂ ಜೈನ ಸೇರಿದಂತೆ ಮುಸ್ಲಿಂ ವಾಸ್ತುಗಳಿಗೂ ಪ್ರೋತ್ಸಾಹ ನೀಡಿದ್ದಾರೆ. ಹಂಪೆಯಲ್ಲಿ ಅಧಿಕವಾಗಿ ಕಂಡು ಬರುವುದು ಗ್ರಾಮೀಣ ದೇವತೆಗಳು, ಶೈವ ದೇವಾಲಯಗಳು ಮಾತ್ರ. ಆದರೂ ಸಾಕಷ್ಟು ಸಂಖ್ಯೆಯಲ್ಲಿ ವೈಷ್ಣವ ದೇವಾಲಯಗಳಿವೆ. ಒಂದೆರಡು ಜೈನ ದೇವಾಲಯಗಳೂ ಉಳಿದು ಬಂದಿವೆ. ಶಾಸನೋಕ್ತವಾದ ಕೆಲವು ದೇವಾಲಯಗಳು ನಾಶವಾಗಿದ್ದು ಅನೇಕವಕ್ಕೆ ರಚನೆಯ ತೇದಿ ಹಾಗೂ ಅರಸರ ವಿವರಗಳಿಲ್ಲ[12].

❖ **ದೇವಾಲಯ ಹಾಗೂ ಜೈನ ಬಸದಿಗಳು:**

ಹಂಪಿಯ ದೇವಾಲಯಗಳಲ್ಲೇ ವಿಠ್ಠಲದೇವಾಲಯವು ಭವ್ಯವಾಗಿದೆ. ಅರಸರಿಂದ ಪ್ರಜೆಗಳವರೆಗೆ ಸರ್ವಮಾನ್ಯ ಹೊಂದಿದ ಈ ದೇವಾಲಯವು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಒಂದು ಪ್ರಧಾನ ಧರ್ಮ ಕ್ಷೇತ್ರವೆನಿಸಿದ್ದಿತು. ಅಲ್ಲಿ ವಿಧಿಬದ್ಧವಾದ ಪೂಜೆ–ಪುರಸ್ಕಾರಗಳು, ಉತ್ಸವ ಆಚರಣೆಗಳು ವೈವಿಧ್ಯವಾಗಿ, ವೈಭವದಿಂದ ನೆರವೇರುತ್ತಿದ್ದವು. ಹೀಗೆ ವಿಠ್ಠಲ ದೇವಾಲಯವು ಪ್ರಭಾವಿ ಧರ್ಮ ಕ್ಷೇತ್ರವಾಗಿ ಬೆಳೆಯುತ್ತಿದ್ದ ಸಂದರ್ಭಗಳು ಸಮಕಾಲೀನ ಶಿಲಾಶಾಸನಗಳಲ್ಲಿ ದಾಖಲೆಗೊಂಡಿವೆ. ಇಂಥ ಶಿಲಾಶಾಸನಗಳ ಅವಲೋಕನವು ಒಂದು 'ದೈವದ ಪ್ರಭಾವ' ಮತ್ತು 'ಭಕ್ತರ ನಡೆದುಕೊಳ್ಳುವಿಕೆ'ಯನ್ನು ಪರಿಚಯಿಸುತ್ತಾ ಆ ಕಾಲದ ಆಚರಣೆ, ಪರಂಪರೆಗಳ ಧಾರ್ಮಿಕ ಲೋಕವನ್ನು ತೆರೆದಿಡುತ್ತದೆ.

ವೈಷ್ಣವರಲ್ಲಿಯ ಕೃಷ್ಣನ ಆರಾಧನೆಯ ಪಂಥವೊಂದು ಮಹಾರಾಷ್ಟ್ರದ ಪಂಢರಾಪುರದಿಂದ ವಿಜಯನಗರಕ್ಕೆ ಧಾವಿಸಿತು. ಅಲ್ಲಿನ ವಿಠೊಬನನ್ನು ಪೂಜಿಸುವ ಪರಂಪರೆಯು ಇಲ್ಲಿನ ಅರಸರನ್ನು ಪ್ರಚೋದಿಸಿ ವಿಠ್ಠಲ ದೇವಾಲಯದ ನಿರ್ಮಾಣಕ್ಕೆ ಕಾರಣವಾಯಿತೆನ್ನುವ ಒಂದು ನಂಬಿಕೆ ಇದೆ. ಅಲ್ಲದೆ ಸ್ವತಃ ಕೃಷ್ಣದೇವರಾಯನೆ ಪಂಢರಾಪುರದಿಂದ ವಿಠ್ಠಲನ ಮೂರ್ತಿಯನ್ನು ತಂದು ವಿಜಯನಗರದಲ್ಲಿ ಪ್ರತಿಷ್ಠೆ ಮಾಡಿದನೆಂಬ ಪ್ರತೀತಿಯೂ ಇದೆ. ಆದರೆ, ವಾಸ್ತವಿಕವಾಗಿ ಮೂಲಭಾಗಗಳನ್ನೊಳಗೊಂಡ ವಿಠ್ಠಲ ದೇವಾಲಯವು ಸಂಗಮರ ಕಾಲದಲ್ಲೇ ನಿರ್ಮಾಣಗೊಂಡಿತೆಂದು ವಸುಂಧರಾ ಫಿಲಿಯೋಜಾ ಮತ್ತು ಎಸ್. ರಾಜಶೇಖರ

ಅಭಿಪ್ರಾಯ ಪಟ್ಟಿದ್ದಾರೆ. ಕೃಷ್ಣದೇವರಾಯ ಕೇವಲ ನೂರು ಕಂಬಗಳ ಮಂಟಪವನ್ನು ಮತ್ತು ಅವನ ರಾಣಿಯರು ಗೋಪುರಗಳನ್ನು ನಿರ್ಮಿಸಿರುವ ಸಂಗತಿ ಶಾಸನಗಳಿಂದ ತಿಳಿದುಬರುತ್ತದೆ. ಸಂಗಮರ ಕಾಲದಲ್ಲೇ ಈ ದೇವಾಲಯ ಆಸ್ತಿತ್ವದಲ್ಲಿದ ಬಗ್ಗೆ ಕೆಲವು ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಸ್ಪಷ್ಟ ಮಾಹಿತಿಗಳನ್ನು ನೀಡುತ್ತವೆ[13].

ಕ್ರಿ.ಶ. 1408 ರಿಂದ 1503ರ ಅವಧಿಯಲ್ಲಿ ಬದುಕಿದ್ದ ತಾಳಪಾಕ್ಕಂ ಅಣ್ಣಮಾಚಾರ್ಯರು ತಮ್ಮ ಸಂಕೀರ್ತನೆಯೊಂದರಲ್ಲಿ ವಿಠ್ಠಲ ಮತ್ತು ರುಕ್ಮಣಿಯರು ವೆಂಕಟಾದ್ರಿಯಿಂದ ಬಂದು ವಿಜಯನಗರದ ತುಂಗಭದ್ರಾ ನದಿ ತೀರದಲ್ಲಿ ನೆಲೆನಿಂತರೆಂದು ವರ್ಣಿಸುತ್ತಾರೆ. ಅಂದರೆ ವಿಠ್ಠಲ ರುಕ್ಮಣಿಯ ವಿಗ್ರಹಗಳನ್ನು ತಿರುಪತಿಯಿಂದ ವಿಜಯನಗರಕ್ಕೆ ತಂದು ಪ್ರತಿಷ್ಠಾಪಿಸಿದ ಸಂಗತಿ ಇಲ್ಲಿ ವ್ಯಕ್ತವಾಗಿದೆ. ಇದಕ್ಕೆ ಪೂರಕವಾಗಿ ಹದಿನಾಲ್ಕನೆಯ ಶತಮಾನದಲ್ಲೇ ವಿಠ್ಠಲ ದೇವಾಲಯ ಆಸ್ತಿತ್ವದಲ್ಲಿತ್ತೆನ್ನುವುದು ಹರಿಭಟ್ಟನ 'ಉತ್ತರ ನರಸಿಂಹ ಪುರಾಣಂ' ದಿಂದ ತಿಳಿಯುತ್ತದೆ. ಇದರಲ್ಲಿ ಪ್ರೌಢದೇವರಾಯನ ಅಧಿಕಾರಿಯಾದ ಪ್ರೋಳುಗಂಟಿ ತಿಪ್ಪಣ್ಣ ಎನ್ನುವವನು ವಿಠ್ಠಲ ದೇವಾಲಯದ ಭೋಗಮಂಟಪವನ್ನು ನಿರ್ಮಿಸಿದನೆಂದು ವರ್ಣಿತವಾಗಿದೆ.

ಕ್ರಿ.ಶ. 1408ರ ಕಾಲದ ಶಿರಾಳಿಯ ಶಾಸನವೊಂದರಲ್ಲಿ ತುಂಗಭದ್ರಾ ನದಿ ತೀರದ ವಿಠ್ಠಲನ ಸನ್ನಿಧಿಯಲ್ಲಿ ಮಾಡಿದ ದಾನದ ಬಗ್ಗೆ ವಿವರವಿದೆ. ತುಂಗಭದ್ರಾ ನದಿ ತೀರದಲ್ಲಿ ಹಂಪಿಯ ವಿಠ್ಠಲ ದೇವಾಲಯವಲ್ಲದೆ ಬೇರೆ ವಿಠ್ಠಲ ದೇವಾಲಯಗಳಲ್ಲ. ಹಾಗಾಗಿ ಶಾಸನೋಕ್ತ ವಿಠ್ಠಲ ಹಂಪಿಯ ವಿಠ್ಠಲನೇ ಸರಿ.

ಹೀಗೆ ಈ ಎಲ್ಲಾ ದಾಖಲೆಗಳು ವಿಠ್ಠಲ ದೇವಾಲಯವು ಸಂಗಮರ ಕಾಲದಲ್ಲೇ ಆಸ್ತಿತ್ವದಲ್ಲಿತ್ತೆನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಆದಾಗ್ಯೂ ಇದು ಕೃಷ್ಣದೇವರಾಯನ ನಿರ್ಮಾಣವೆನ್ನುವ ಪ್ರತೀತಿ ಬೆಳೆಯುವುದಕ್ಕೆ ಆತನ ಕಾಲದಲ್ಲಾದ ವೈಷ್ಣವ ಧರ್ಮದ ಬೆಳವಣಿಗೆಯೇ ಕಾರಣವಾಗಿದೆ. ದೇವಾಲಯ, ಶಿಲ್ಪಗಳ ನಿರ್ಮಾಣಗಳಿಂದ ಕೂಡಿದ ಈ ವೈಷ್ಣವ ಉತ್ಕರ್ಷದ ಅಬ್ಬರವು ವಿಠ್ಠಲ ದೇವಾಲಯದ ನಿರ್ಮಾಣತ್ವವನ್ನು ತನ್ನದಾಗಿಸಿಕೊಂಡಿದೆ. ಜೊತೆಗೆ ಸಂಗಮ ಅರಸರು ಶೈವರೆನ್ನುವ ಸಂಗತಿಯು ಇದಕ್ಕೆ ಪೂರಕವಾದ ನಂಬಿಕೆಯನ್ನು ಬೆಳೆಸಿದೆ. ಆದರೆ ಸಂಗಮ ದೊರೆಗಳು ಕೃಷ್ಣದೇವರಾಯನಂತೆ ಪರಮತ ಸಹಿಷ್ಣುಗಳಾಗಿದ್ದರೆನ್ನುವುದನ್ನು ಗಮನಿಸಬೇಕು[14]. ಬುಕ್ಕರಾಯನ ಶ್ರವಣಬೆಳಗೊಳ ಶಾಸನವು ಆ ಕಾಲದಲ್ಲಿ ವೈಷ್ಣವರ ಪ್ರಾಬಲ್ಯವನ್ನು ತಿಳಿಸಿದರೆ, ಅವನ ಸೊಸೆ ಕಂಪಣನ ರಾಣಿ ಗಂಗಾದೇವಿಯ ತನ್ನ ಮಧುರಾವಿಜಯಂ ಎಂಬ ಕೃತಿಯಲ್ಲಿ ವೈಷ್ಣವ ದೇವರು ಶ್ರೀ ರಾಮನನ್ನು ಸ್ತುತಿಸಿರುವುದು, ಪ್ರೌಢದೇವರಾಯನು ಕನಕಗಿರಿಯ ಕನಕಾಚಲ ಲಕ್ಷ್ಮೀನರಸಿಂಹ ದೇವರಿಗೆ ದಾನ ನೀಡಿರುವುದು ಅವರು ವೈಷ್ಣವ ಮತವನ್ನು ಗೌರವಿಸುತ್ತಿದ್ದ ಬಗ್ಗೆ ದಾಖಲೆಗಳು. ಹೀಗೆ ಈ ಎಲ್ಲಾ ದಾಖಲೆಗಳ ಮಾಹಿತಿಗಳನ್ವಯ ವಿಠ್ಠಲ ದೇವಾಲಯವು ಮೂಲತಃ ಸಂಗಮರ ಕಾಲದ್ದು ಎನ್ನುವುದು ಸ್ಪಷ್ಟ.

ವಿಠ್ಠಲ ದೇವಾಲಯವು ವಾಸ್ತುಶೈಲಿ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾಗಿದೆ. ಅದು 15.20 ಮೀಟರ್ ಫಿ- 94.5 ಮೀಟರ್ ವಿಶಾಲವಾದ ಸಂಕೀರ್ಣದ ಮಧ್ಯದಲ್ಲಿ

ರಚಿತವಾಗಿದೆ. ದೇವಾಲಯ ಒಟ್ಟು ಸಂಕೀರ್ಣವು ಮುಖ್ಯ ದೇವಾಲಯ, ದೇವಿಯ ದೇವಾಲಯ, ಕಲ್ಯಾಣ ಮಂಟಪ, ಉತ್ಸವ ಮಂಟಪ, ನೂರು ಕಂಬದ ಹಜಾರ ಮತ್ತು ರಥದ ಮಾದರಿಯ ಗರುಡನ ಗುಡಿ ಕಲ್ಲಿನ ರಥಗಳನ್ನು ಒಳಗೊಂಡಿದೆ. ಇವೆಲ್ಲವನ್ನು ಸುತ್ತುವರೆದ ಪ್ರಾಕಾರವಿದೆ. ಈ ಒಟ್ಟು ಸಂಕೀರ್ಣವು ಕ್ರಮವಾಗಿ ಸಂಗಮರ ಮತ್ತು ತುಳುವರ ಕಾಲದಲ್ಲಿ ನಿರ್ಮಾಣಗೊಂಡಿದೆ.

ಸಂಗಮರ ಕಾಲದಲ್ಲಿ ನಿರ್ಮಾಣಗೊಂಡ ಮುಖ್ಯ ದೇವಾಲಯವು ಗರ್ಭಗೃಹ, ಸುಖನಾಸಿ, ಪ್ರದಕ್ಷಿಣಾಪಥ, ಹದಿನಾರು ಕಂಭಗಳಿರುವ ಒಂದು ರಂಗಮಂಟಪ, ಪಾರ್ಶ್ವಗಳಲ್ಲಿ ಎರಡು ಮುಖಮಂಟಪಗಳು ಮತ್ತು ಒಂದು ವಿಶಾಲವಾದ ಮಹಾರಂಗಮಂಟಪಗಳನ್ನು ಹೊಂದಿದೆ. ಗರ್ಭಗೃಹದ ಸುತ್ತಲ ಪ್ರದಕ್ಷಿಣಾಪಥವು ವಿಶಾಲವಾಗಿದ್ದು, ನೆಲಹಂತದಲ್ಲಿದೆ. ಮಹಾರಂಗಮಂಟಪವು ಒಂದು ಆಶ್ಚರ್ಯಕರವಾದ ರಚನೆ. ಇಲ್ಲಿ ಸುಂದರವಾದ 56 ಕಂಬಗಳಿವೆ. ಇವು ಪ್ರತಿಯೊಂದು 3.6 ಮೀಟರ್ ಎತ್ತರವಾಗಿಯೂ, 1.5 ಮೀಟರ್ ಅಗಲವಾಗಿಯೂ ಇವೆ. ಇವುಗಳು ವಿನ್ಯಾಸ ಮತ್ತು ಕೆತ್ತನೆಯಿಂದ ನೈಪುಣ್ಯ ರಚನೆಗಳಾಗಿವೆ[15]. ಈ ಕಂಬಗಳಲ್ಲಿ ಎರಡು ಭಾಗಗಳಿವೆ. ಮಧ್ಯದಲ್ಲಿ ಚಚ್ಚೌಕ ಪ್ರಧಾನವಾದ ಕಂಬ, ಅದರ ಸುತ್ತಲೂ ಚಿಕ್ಕ ಚಿಕ್ಕ ಅಳತೆಯ ಉಪಕಂಬಗಳಿವೆ. ಕಂಬಗಳನ್ನು ಕುಳಿತ ಸಿಂಹಗಳು ಹೊತ್ತಿವೆ. ಉಪಕಂಬಗಳನ್ನು ಸಂಗೀತ ಕಂಬಗಳೆಂದು ಕರೆಯುಲಾಗುತ್ತಿದೆ. ಕಂಬಗಳ ಮೇಲೆ ನರಸಿಂಹ, ಕಾಳಿಂಗಮರ್ದನ ಕೃಷ್ಣ, ಗೊಲ್ಲತಿ, ಮಂಡಲ, ನಾಗಬಂಧ ಇತ್ಯಾದಿ ಅನೇಕ

ಉಬ್ಬು ಶಿಲ್ಪಗಳಿವೆ. ಕಂಬಗಳ ಮೇಲ್ಭಾಗದಲ್ಲಿ ಸುಂದರವಾದ ದೊಡ್ಡ ಪುಷ್ಪ ಬೋದುಗೆಗಳಿವೆ.

ಮಹಾರಂಗಮಂಟಪಕ್ಕೆ ಮಧ್ಯದಲ್ಲಿ ಅಗಲವಾದ ಅಂಕಣವಿದೆ. ಇದಕ್ಕೆ ಕಲ್ಲು ಚಪ್ಪಡಿಗಳನ್ನು ಹಾಸಿ ಛಾವಣಿಯನ್ನು ನಿರ್ಮಿಸಲಾಗಿತ್ತು. ಇದರ ಆಧಿಷ್ಠಾನವು ಸಾಕಷ್ಟು ಎತ್ತರವಾಗಿದೆ. ಅದರ ಪಟ್ಟಿಕೆಗಳಲ್ಲಿ ಕುದುರೆಗಳ, ಯೋಧರ, ಹಂಸಗಳ, ವಿಷ್ಣುವಿನ ದಶಾವತಾರ ಶಿಲ್ಪಗಳ, ಬಳೆ ರೀತಿಯ ಮಡಿಕೆಗಳ ಹಾಗೂ ಪೋರ್ಚಗೀಸ್ ಕುದುರೆ ವರ್ತಕರ ಶಿಲ್ಪಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಈ ಮಂಟಪ ಮತ್ತು ಇತರ ಮಂಟಪಗಳ ಕಪೋತಗಳು ಅಗಲವಾಗಿದ್ದು, ಆಳವಾಗಿಯೂ ಇವೆ. ಮೂಲೆಗಳಲ್ಲಿ ದಪ್ಪವಾದ ಕಲ್ಲಿನ ಬಳೆಗಳಿವೆ. ಹೀಗೆ ಈ ಎಲ್ಲಾ ಭಾಗಗಳು ಸಂಗಮರ ಕಾಲದವು.

ಹಜಾರ ರಾಮ ದೇವಾಲಯವು ಬಹುಮಟ್ಟಿಗೆ ಇಮ್ಮಡಿ ವಿರೂಪಾಕ್ಷನ ನಿರ್ಮಾಣವೆಂದು ಕೆ.ಎ. ನೀಲಕಂಠಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ. ಅದೊಂದು ವಿಜಯನಗರ ವಾಸ್ತು ಶೈಲಿಯ, ಸಮಗ್ರವಾಗಿ ಪೂರ್ಣಗೊಂಡ ಉದಾಹರಣೆ. ಪ್ರಧಾನ ದೇವಾಲಯವಲ್ಲದೆ, ದೇವತೆಗೊಂದು ಗುಡಿ, ಒಂದು ಕಲ್ಯಾಣಮಂಟಪ ಮತ್ತು ಇತರ ಆಧೀನ ದೇಗುಲಗಳಿದ್ದು ಎಲ್ಲವೂ 24 ಅಡಿ ಎತ್ತರದ ಗೋಡೆಯೊಂದು ಸುತ್ತುವರಿದ ಪ್ರಾಂಗಣದಲ್ಲಿವೆ[16]. ಪೂರ್ವದಲ್ಲಿರುವ ಸಮಪ್ರಮಾಣದ ಮತ್ತು ಚಪ್ಪಟೆ ಛಾವಣಿಯ ದ್ವಾರಮಂಟಪದ ಮೂಲಕ ಈ ಅವರಣ ಪ್ರವೇಶಿಸಿದಲ್ಲಿ ಅದು ನಡುವಣ ಚೌಕದ ಪ್ರತಿ ಮೂಲೆಯಲ್ಲೂ ಇರುವ, ಕಪ್ಪುಶಿಲೆಯ ನಾಲ್ಕು ಬೃಹತ್ ಕಂಬಗಳ ಸಮೂಹದಿಂದ

ಕೂಡಿದ ಸಭಾಂಗಣಕ್ಕೆ ಒಯ್ಯುತ್ತದೆ. ಈ ಕಂಬಗಳು ಅಪರೂಪದ ವಿನ್ಯಾಸದವು ಅವುಗಳ ದಿಂಡುಗಳಲ್ಲಿ ಅರೆಗೋಳವಿಮಾಡಿದ ವರ್ತುಲಸ್ತಂಭಾಕೃತಿಯಿಂದ ಕೂಡಿದ ಒಂದರ ಮೇಲೊಂದರಂತೆ ವರಸೆಯಾಗಿ ಬರುವ ಘನವಸ್ತುಗಳಾಗಿದ್ದು, ಎಲ್ಲವನ್ನು ಚೆನ್ನಾಗಿ ಕೆತ್ತಲಾಗಿದೆ. ದೇವಾಲಯದ ಒಳಗೋಡೆಗಳು ಉಬ್ಬುಗೆತ್ತನೆಯಲ್ಲಿ ರಾಮಾಯಣದ ದೃಶ್ಯಗಳಿಂದ ಅಲಂಕೃತವಾಗಿವೆ. ವಿಜಯನಗರದ ದೇವಾಲಯದ ವಾಸ್ತುಕಲೆಯ ಬಗ್ಗೆ ತಿಳಿಸುತ್ತ ಎಂ.ಎಚ್. ಕೃಷ್ಣ ಹೀಗೆ ಹೇಳುತ್ತಾರೆ: "ಹೊಯ್ಸಳರ ಕಲೆಯನ್ನು ವಿಜಯನಗರ ಸಾಮ್ರಾಜ್ಯವು ಉತ್ತರಾಧಿಕಾರದಿಂದ ಪಡೆಯಿತು ಮತ್ತು ಕಗ್ಗಲ್ಲನ್ನು ಉಪಯೋಗಿಸಿ ಹೆಚ್ಚು ಶಕ್ತಿಶಾಲಿಯಾದ, ಹೆಚ್ಚು ವಿಶಾಲವಾದ ಮತ್ತು ಹೆಚ್ಚು ಶಾಶ್ವತವಾದ ಕಟ್ಟಡಗಳನ್ನು ಕಟ್ಟಲು ಪ್ರಯತ್ನಿಸಿತು ಹಾಗೂ ಅದರ ಕೆಲವು ವೈಲಕ್ಷಣ್ಯಗಳು ದ್ರಾವಿಡ ಶೈಲಿಯವು ಎನ್ನುವ ಬಗ್ಗೆ ಹೆಚ್ಚು ಸಂದೇಹವಿರಲಾರದು. ಹೊಯ್ಸಳ ಲಕ್ಷಣಗಳಲ್ಲಿ ಕೆಲವನ್ನು ಉಳಿಸಿಕೊಳ್ಳುವ ಮತ್ತು ದ್ರಾವಿಡ ರೂಪಗಳ ಜೊತೆ ಅವನ್ನು ಸೇರಿಸುವ ಈ ಪ್ರವೃತ್ತಿಯು ಹಂಪಿಯ ವಿಠ್ಠಲಸ್ವಾಮಿ ದೇವಾಲಯ ಮತ್ತಿತರ ಕಡೆಗಳಲ್ಲಿಯೂ ಕಂಡುಬರುತ್ತದೆ"[17].

ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ವಾಸ್ತುಶಿಲ್ಪಕ್ಕೆ ಬಹುವಾಗಿ ಉತ್ತೇಜನ ನೀಡಲಾಯಿತು; ಶಿಲ್ಪಿಗಳಿಗೆ ತಾವು ಕಟ್ಟಿದ ದೇವಾಲಯಗಳಲ್ಲಿ ಮತ್ತು ಕೆತ್ತಿದ ಕಲ್ಲುಗಳಲ್ಲಿ ತಮ್ಮ ಪ್ರತಿಭೆ ಕೌಶಲಗಳನ್ನು ತೋರಲು ಧಾರಾಳ ಅವಕಾಶವಿತ್ತು. ವಿಜಯನಗರ ವಾಸ್ತುಶೈಲಿಯು ತತ್ಪೂರ್ವದ ಹೊಯ್ಸಳ ಮತ್ತು ಚೋಳ ಶೈಲಿಗಳೊಡನೆ

ಸಂಮಿಳಿತವಾಗಿ ತನ್ನ ಅನುಪಮ ಸೌಂದರ್ಯವನ್ನು ಹೊಂದಿತು. ಪ್ರಾಯಶಃ ಇಡೀ ದಕ್ಷಿಣ ಭಾರತೀಯ ಶಿಲ್ಪಕ್ಷೇತ್ರದಲ್ಲಿ ವಿಜಯನಗರ ಶಿಲ್ಪವೈವಿಧ್ಯದೊಡನೆ ಸ್ಪರ್ಧಿಸಿ ಸರಿಸಾಟಿಯಾಗಬಲ್ಲ ಶಿಲ್ಪವನ್ನು ಕಾಣುವುದು ಕಷ್ಟವಾಗುತ್ತದೆ. ವಿಜಯನಗರ ಕಾಲದ ಸಾಮಾಜಿಕ ಇತಿಹಾಸವನ್ನು ಕಲ್ಲಿನಲ್ಲಿ ಬಿಡಿಸಿರುವುದನ್ನು ನಾವು ನೋಡುತ್ತೇವೆ. ಉದಾಹರಣೆಗೆ, ಹಂಪಿಯ ಅವಶೇಷಗಳ ಮಧ್ಯದಲ್ಲಿ ನಿಂತಿರುವ ವಿಜಯಗೃಹದಲ್ಲಿ "ಊಹಿಸಲಸಾಧ್ಯವಾದ ಆಕಾರಗಳ ಕುಪ್ಪಳಿಸುವ ಕೋತಿಗಳು, ರಾಯಭಾರಿಗಳನ್ನು ಸ್ವಾಗತಿಸುವ ಅರಸರು, ನಾಟ್ಯಸ್ಪರ್ಧೆಯೊಂದನ್ನು ನೋಡುತ್ತಿರುವ ಅರಸಿಯರು ಮತ್ತು ಅವರ ಗಂಡಂದಿರು ಆಗಾಗ ಕುದುರೆಯ ಮೇಲಿರುವ ಅಥವಾ ಚಲನೆಯಲ್ಲಿರುವ ಮತ್ತು ಕೆಲವು ಸಲ ಬಿಲ್ಲು ಬಾಣ ಹಾಗೂ ಭರ್ಜಿಗಳಿಂದ ಕೂಡಿದ ಸ್ತ್ರೀಯರ ಸಹಿತವಾಗಿ ಕಾಡಿನಲ್ಲಿ ಕಾಡುಜಿಂಕ ಅಥವಾ ಹಂದಿ ಅಥವಾ ಕಾಡುಹಂದಿಗಳನ್ನು ಬೇಟೆಯಾಡುತ್ತಿರುವ ಗಣ್ಯರು, ಕನ್ನಡಿಯನ್ನು ನೋಡುತ್ತಿರುವ ಕಾಮಿನಿಯರು ಅಥವಾ ಚಲನೆಯಲ್ಲಿರುವ ನೃತ್ಯಾಂಗನೆಯರು, ಅರಸನ ಮುಂದೆ ಕರೆದುಕೊಂಡು ಬಂದ ಸೆರೆಯಾಳುಗಳು ಅಥವಾ ಇತರ ವೈವಿಧ್ಯಮಯ ವಿಷಯಗಳನ್ನು ನೋಡಬಹುದು. ಜೈನ ಧರ್ಮವೂ ಒಂದು ಪ್ರಧಾನ ಧರ್ಮವಾಗಿದ್ದುದರಿಂದ ಬಸದಿ ಅಥವಾ ಜಿನಾಲಯಗಳ ನಿರ್ಮಾಣಕ್ಕೆ ಮತ್ತು ಜಿನಮೂರ್ತಿಗಳ ಸ್ಥಾಪನೆಗೆ ಸಂಬಂಧಿಸಿದಂತೆ ರಾಜಾಶ್ರಯದ ಅಭಾವವೇನೂ ಇರಲಿಲ್ಲ. ಶಾಸನಗಳಿಂದ ಸ್ಪಷ್ಟಪಡುವಂತೆ ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ಅನೇಕ ಜೈನ ಬಸದಿಗಳು ನಿರ್ಮಿತವಾದವು.

ಆತನ ಆಳ್ವಿಕೆಯ ಕಾಲದ ಕಾರ್ಕಳದ ಗೊಮ್ಮಟನ 40 ಅಡಿ ಎತ್ತರದ ಏಕಶಿಲಾಮೂರ್ತಿಯು ನಿರ್ಮಿತವಾಯಿತು[18].

ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಮತ್ತು ಹಳೆಯ ದೇವಾಲಯಗಳ ಜೀರ್ಣೋದ್ಧಾರಕಾರ್ಯಗಳು ಚುರುಕಾಗಿ ನಡೆದವೆಂಬುದನ್ನು ಶಾಸನಗಳು ಪ್ರಕಟಪಡಿಸುತ್ತವೆ; ಕ್ರಿ.ಶ. 1426ರಲ್ಲಿ ಇಮ್ಮಡಿ ದೇವರಾಯನು ವಿಜಯನಗರದ ತನ್ನ ನಿವಾಸದಲ್ಲಿನ "*ಪಾನ-ಸುಪಾರಿ-ಬಜಾರಿ*"ನಲ್ಲಿ ಪಾರ್ಶ್ವನಾಥ ಆರ್ಹಂತನ ಶಿಲಾ ಚೈತ್ಯಾಲಯವೊಂದನ್ನು ಕಟ್ಟಿಸಿದನು. ಕ್ರಿ.ಶ. 1422ರಲ್ಲಿ ಇರುಗಪ್ಪದಣ್ಣಾಯಕನು ಶ್ರವಣಬೆಳಗೊಳದಲ್ಲಿ ಕೆರೆಯೊಂದನ್ನು ಹಾಗೂ ವಿಜಯನಗರದಲ್ಲಿ ಗಾಣಗಿತ್ತಿ ಜಿನಾಲಯವೊಂದನ್ನು ಕಟ್ಟಿಸಿದನು. ತಿರುವಾಯೂರಿನ ತ್ಯಾಗರಾಜಸ್ವಾಮಿ ದೇವಾಲಯದಲ್ಲಿ ಎರಡನೆಯ ಪ್ರಾಕಾರದ ಪಶ್ಚಿಮ ಗೋಪುರಕ್ಕಿರುವ ಪ್ರವೇಶದ್ವಾರದಲ್ಲಿ ಎರಡು ಶಾಸನಗಳಿವೆ; ಒಂದು ತಮಿಳನಲ್ಲಿ ಮತ್ತೊಂದು ಕನ್ನಡದಲ್ಲಿ; ಎರಡು ಶಾಸನಗಳ ಕಾಲ ಹಾಗೂ ಅವು ಪ್ರಧಾನ ಲಕ್ಕಣ್ಣ ದಣ್ಣಾಯಕನಿಗೆ ಪುಣ್ಯವಾಗಬೇಕೆಂದು ಸಿದ್ಧರಸನ ಮಗನಾದ ನಾಗರಸನು ದೇವಾಲಯಕ್ಕೆ ಗೋಪುರವೊಂದನ್ನು ಕಟ್ಟಿಸಿಕೊಟ್ಟ ವಿಷಯವನ್ನು ದಾಖಲಿಸುತ್ತದೆ. ತಿರುಚಿನಾಪಳ್ಳಿ ಜಿಲ್ಲೆಯ ಜಂಬುಕೇಶ್ವರ ದೇವಾಲಯಕ್ಕೆ ಕೆಲವು ಕಟ್ಟಡಗಳ ಸೇರ್ಪಡೆಗಾಗಿ ಅದಿತ್ಯದೇವನ ಮಗನಾದ ಅಣ್ಣಚೌಡಪ್ಪನು ಕ್ರಿ.ಶ. 1433ರಲ್ಲಿ ದಾನವಿತ್ತನು. ಕ್ರಿ.ಶ. 1431ರಲ್ಲಿ ಬಾದಾಮಿ ಸೀಮೆಯ ಸೈವಿಡಿಯಲ್ಲಿನ ತ್ರಿಮೂರ್ತಿ ದೇವಾಲಯದ

ಜೀರ್ಣೋದ್ಧಾರಕಾರ್ಯವನ್ನು ತಿಪಣನಾಯಕನ ಮಗನಾದ ಚೌಡಯ್ಯನಾಯಕನು ಮಾಡಿದನು. ಕ್ರಿ.ಶ. 1428ರಲ್ಲಿ ರಾಜಗಂಭೀರವಳನಾಡಿನ ರಾಜೇಂದ್ರಚೋಳಪೇಟೆಯ ಅವನೀಶ್ವರ ಮತ್ತು ತಿರುವಾಕ್ಕೀಶ್ವರ ದೇವಾಲಯಗಳನ್ನು ಪುನರ್ ನಿರ್ಮಿಸಲಾರದೆ, ಅದೇ ಸ್ಥಳದ ಮದುರಾಂತೀಶ್ವರ ದೇವಾಲಯವು ಸ್ಥಳದ ನಗರತ್ತಾರದಿಂದ ಜೀರ್ಣೋದ್ಧಾರಗೊಂಡಿತು. ಚಕ್ರರಾಯನು ಉತ್ತಮನಂಬಿಯ ಸೋದರ ಆತ ಶ್ರೀರಂಗದ ದೇವಾಲಯದಲ್ಲಿ ಒಂಬತ್ತು ಕಂಬಗಳಿಂದ ಕೂಡಿದ ಮಂಟಪದ ಭಾಗವನ್ನು ಕಟ್ಟಿಸಿದ. ಆತ ಅನ್ನಾದಿ ಎಂಬ ರುಮಾನ್ ಹಾಗೂ ಮಾರುತಿ ಗುಡಿಗಳಿಗೆ ಮತ್ತು ಶ್ರೀರಂಗದ ರಂಗನಾಥ ದೇವಾಲಯದ ಅಡುಗೆಮನೆಗೆ ಕೆಲವು ಸುಧಾರಣೆ ಅಭಿವೃದ್ಧಿ ಕೆಲಸವನ್ನು ಮಾಡಿದ. ಶ್ರೀರಂಗದಲ್ಲಿ ಕಾವೇರಿಯ ದಕ್ಷಿಣ ತೀರದಲ್ಲಿರುವ ದೇವಾಲಯದ ದಶಾವತಾರ ಮೂರ್ತಿಗಳು ಕ್ರಿ.ಶ. 1438ರಲ್ಲಿ ಚಕ್ರಾಯುಧನಿಂದ ಪ್ರತಿಷ್ಠಾಪಿತವಾದವು[19].

ಜಂಬುನಾಥ ದೇವಾಲಯದ ಗೋಪುರವು ಕ್ರಿ.ಶ. 1435ರಲ್ಲಿ ಆದಿತ್ಯದೇವನ ಮಗನಾದ ಚೌಡಪೇಂದ್ರನಿಂದ ನಿರ್ಮಿತವಾಯಿತು. ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರಪ್ರತಾಪ ದೇವರಾಯಮಹಾರಾಯನ ಅಭ್ಯುದಯದ ಆಳ್ವಿಕೆಯ ಕಾಲದಲ್ಲಿ ವರದರಾಜಪುರದ ಭಟ್ಟಾರಕದೇವನ ಕೆಲ್ಲಂಗೆರೆಯ ಹಿರಿಯ ಹೊನ್ನೆಯ ನಾಯಕನ ಮಗನಾದ ವರದೆಯ ನಾಯಕನು ಗರ್ಭಗೃಹ, ಸುಖನಾಸಿ ಮತ್ತು ರಂಗಮಂಟಪಗಳಿಂದ ಕೂಡಿದ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದ,

ಪೂರ್ವದಲ್ಲಿ ಶೂದ್ರರು ನೆಲೆಸಿದ್ದ ಗ್ರಾಮವನ್ನು ಅಗ್ರಹಾರವನ್ನಾಗಿ ಪರಿವರ್ತಿಸಿದ ಹಾಗೂ ಗ್ರಾಮದ ಕೆರೆಯನ್ನು ದುರಸ್ತಿಮಾಡಿಸಿದ. ಕ್ರಿ.ಶ. 1431ರಲ್ಲಿ ವಿಜಯರಾಯ ಮಹಾರಾಯನ ಮಗನಾದ ಇಮ್ಮಡಿ ದೇವರಾಯನ ಧರ್ಮದಿಂದಾಗಿ ಮುಳಬಾಗಿಲು ತಾಲ್ಲೂಕಿನ ಆವನಿ ಹೋಬಳಿಯ ವಿರೂಪಾಕ್ಷಪುರದ ಪ್ರಸನ್ನವಿರೂಪಾಕ್ಷ ದೇವಾಲಯವನ್ನು ಅದರ ಪ್ರಕಾರ, ಗೋಪುರ, ಮನ್ಮಥಕೊಳ, ಮಂಟಪಗಳು ಹಾಗೂ ಭಿಕ್ಷುಗಳಿಗಾಗಿ ಮಠ ಸಹಿತವಾಗಿ ಕಟ್ಟಲಾಯಿತು. ಕ್ರಿ.ಶ. 1432ರಲ್ಲಿ ಹರಿಯಪ್ಪ ಒಡೆಯರಿಗೆ ಪುಣ್ಯ ಪ್ರಾಪ್ತಿಯಾಗಬೇಕೆಂದು ಗಣಾಚಾರಿ ಹರಿಯಣ್ಣನು ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದಲ್ಲಿ ಬಲಿಪೀಠವೊಂದನ್ನು ಮಾಡಿಸಿದನು. ಅರಸನ ಸೇವಕನಾದ ತಿರುಮಲರಾಯನಿಂದ ಕ್ರಿ.ಶ. 1425ರಲ್ಲಿ ಮ್ರೋಪುಂ ಗ್ರಾಮದ ಭೈರವದೇವ ಆಲಯಕ್ಕೆ ಗೋಪುರವೊಂದು ನಿರ್ಮಿತವಾಯಿತು. ತಿರುತ್ತಣಿಯ ಪಿಡಾರಿ ದೇವಸ್ಥಾನದಲ್ಲಿನ ಸೋಪಾನ ಮಂಟಪ, ದಕ್ಷಿಣದ ಸುತ್ತುಗೋಡೆ ಹಾಗೂ ಗುಡಿಗಳನ್ನು ಕ್ರಿ.ಶ. 1437ರಲ್ಲಿ ತಿರುಕ್ಕರಪ್ಪಿಳ್ಳೈ ಮಲಯಣ ಉಡೈಯನ್ ವೇಲನ್ ಎಂಬಾತ ಕಟ್ಟಿಸಿದನು.

ವಿಜಯನಗರದ ಕೋಟೆಗೆ ಸಂಬಂಧಿಸಿದ ವಾಸ್ತುಶಿಲ್ಪದ ಬಗ್ಗೆ ಅಬ್ದುಲ್ ರಜಾಕನು ಈ ಕೆಳಗಿನ ಹೇಳಿಕೆಯನ್ನು ನೀಡುತ್ತಾನೆ; "ಏಳು ದುರ್ಗಗಳು ಮತ್ತು ಅಷ್ಟೇ ಸಂಖ್ಯೆಯ ಗೋಡೆಗಳು ಒಂದನ್ನೊಂದು ಸುತ್ತುವರಿಯುವಂತೆ ಅದನ್ನು ಕಟ್ಟಲಾಗಿದೆ. ಹೊರ ದುರ್ಗವು ದುಂಡಗಿನ ಆಕಾರದ ಕೋಟೆಯಾಗಿದ್ದು ಅದನ್ನು ಪರ್ವತವೊಂದರ

ತುದಿಯ ಮೇಲೆ ಕಟ್ಟಲಾಗಿದೆ ಹಾಗೂ ಕಲ್ಲು ಮತ್ತು ಸುಣ್ಣದಿಂದ ನಿರ್ಮಿಸಲಾಗಿದೆ. ಅದಕ್ಕೆ ತುಂಬ ಭದ್ರವಾದ ಬಾಗಿಲುಗಳಿವೆ. ಅವುಗಳ ಕಾವಲುಗಾರರು ಯಾವಾಗಲೂ ತಮ್ಮ ಸ್ಥಾನದಲ್ಲಿರುತ್ತಾರೆ ಹಾಗೂ ಎಲ್ಲವನ್ನೂ ಅತ್ಯಂತ ಕೂಲಂಕಷವಾಗಿ ಪರೀಕ್ಷಿಸುತ್ತಾರೆ" ಎಂದು ಆತ ವಿವರಿಸುತ್ತಾನೆ[20]. ಅರಮನೆಯನ್ನು ಎಷ್ಟು ದೃಢವಾಗಿ ಮತ್ತು ಸುರಕ್ಷಿತವಾಗಿ ಕಟ್ಟಲಾಗಿತ್ತೆಂದರೆ ದಣಾಯಕನು "ಏಳು ಬಾಗಿಲುಗಳ ಮೂಲಕ ಸಾಗಿ ಅರಮನೆ ಪ್ರವೇಶಿಸುತ್ತಾನೆ ಹಾಗೂ ಕೊನೆಯದನ್ನು ತಾನೊಬ್ಬನೆ ಪ್ರವೇಶಿಸಿ ರಾಜನಿಗೆ ವರದಿ ನೀಡುತ್ತಾನೆ.

**ಅರಮನೆ ಸಂಕೀರ್ಣ:**

ರಾಜಾಂಗಣದ ವಾಯವ್ಯ ಭಾಗದಲ್ಲಿ ರಾಜಸಭಾಂಗಣದ ಬಳಿ ಇರುವ ಇನ್ನೊಂದು ದ್ವಾರ ಇಲ್ಲಿನ ಮುಖ್ಯ ಪ್ರವೇಶದ್ವಾರವಾಗಿದೆ. ಹಜಾರ ರಾಮ ದೇವಾಲಯದ ಕಡೆಯಿಂದ ಬರುವಾಗಿನ ಇತರ ದ್ವಾರಗಳ ಸಾಲು ಹಾಗೂ ಅಕ್ಷದಲ್ಲಿಯೇ ನಿರ್ಮಿತವಾಗಿರುವ ಈ ಪ್ರವೇಶದ್ವಾರವು ಅಂಕುಡೊಂಕಾಗಿ ರಚಿತವಾಗಿದ್ದು, ಕಾವಲು ಪಡೆಯವರಿಗಾಗಿ ಚೌಕಿ ಮತ್ತು ಸುರಕ್ಷಿತ ಬಾಗಿಲುಗಳನ್ನು ಹೊಂದಿತ್ತು. ಈ ದ್ವಾರದಿಂದ ರಾಜಾಂಗಣವನ್ನು ಪ್ರವೇಶಿಸಿದರೆ ನಯಗೊಳಿಸಿದ ಗಾರೆಯ ನೆಲವುಳ್ಳ ವಿಶಾಲ ಅಂಗಳವಿದೆ. ಇದರಾಚೆಗಿರುವ ಕಿರುಮಾರ್ಗ ಒಂದರ ಪೂರ್ವಕ್ಕೆ, ಬಹುಶಃ ರಾಜನನ್ನು ಸಂದರ್ಶಿಸಲು ಬಂದವರು, ಅತಿಥಿಗಳು

ಮುಂತಾದವರು ಕುಳಿತು ಕೆಲಕಾಲ ವಿಶ್ರಮಿಸಲು 'ವೀಕ್ಷಕರ ಕೊಠಡಿ"ಯಂತೆ ಉಪಯೋಗವಾಗುತ್ತಿದ್ದ 'ಕಂಬಸಾಲಿನ ಹಜಾರವಿದೆ' ಈ ಹಜಾರದ ಪಶ್ಚಿಮಕ್ಕೆ ಇರುವ ಕಟ್ಟಡ ಸಮೂಹವನ್ನು 'ಅರಮನೆ ಸಂಕೀರ್ಣ'ವೆಂದು ಗುರುತಿಸಲಾಗಿದೆ ಮೇಲೆ ಹೇಳಿದ ಕಿರುಮಾರ್ಗದಿಂದಲೇ ಈ ಕಟ್ಟಡ ಸಮೂಹವನ್ನು ಪ್ರವೇಶಿಸಬಹುದಾಗಿದ್ದು, ಆ ಮಾರ್ಗದ ದಕ್ಷಿಣ ತುದಿಯಲ್ಲಿ ಇನ್ನೊಂದು ಅಲಂಕೃತ ಹಜಾರವಿದೆ. ಈ ಹಜಾರದ ಒಳಗೋಡೆಗಳಿಗೆ ನಯಗೊಳಿಸಿದ ಅಮೃತಶಿಲೆ ಹಾಗೂ ಹಸಿರು ಮಿಶ್ರಿತ ಬಿಳಿ ಶಿಲೆಗಳ ಹೊದಿಕೆಯಿದ್ದು, ನೆಲಕ್ಕೂ ನುಣುಪಾದ ಒಳಪದ ಕಲ್ಲಿನ ಫಲಕಗಳನ್ನು ಹಾಸಲಾಗಿದೆ[21]. ಇದರ ನೈಋತ್ಯ ಭಾಗದಲ್ಲಿ ಆಯತಾಕಾರದ ಪೀಠವಿದ್ದು, ದಕ್ಷಿಣದಲ್ಲಿ ಭೂಮ್ಯಂತರ್ಗತ ಕೊಠಡಿಯನ್ನು ಪ್ರವೇಶಿಸಲು ಬಾಗಿಲಿದೆ. ಅರಮನೆ ಸಂಕೀರ್ಣದಲ್ಲಿ ಈ ಹಜಾರವಿರುವ ಸ್ಥಳ ಮತ್ತು ಇದರ ಅಲಂಕಾರವಿಶೇಷಗಳಿಂದಾಗಿ ಬಹುಶಃ ಅರಸರು ಈ ಹಜಾರವನ್ನು ವಿಶಿಷ್ಟಗಣ್ಯವ್ಯಕ್ತಿಗಳಿಗೆ ಸಂದರ್ಶನ ನೀಡಲು ಬಳಸುತ್ತಿದ್ದರೆಂದು ಊಹಿಸಬಹುದು.

ಈ ಹಜಾರದಿಂದಾಚೆಗೆ ಭೂಮ್ಯಂತರ್ಗತ ಕೊಠಡಿಯ ದಕ್ಷಿಣಕ್ಕೆ ಸಣ್ಣ ಅಂಗಳವಿದ್ದು ಅದರ ಮೂಲಕ ವಿವಿಧ ಗಾತ್ರದ ಒಂಭತ್ತಕ್ಕೂ ಹೆಚ್ಚಿನ ಕೊಠಡಿಗಳಿರುವ ಆಯತಾಕಾರದ ದೊಡ್ಡ ಕಟ್ಟಡದೊಳಕ್ಕೆ ಹೋಗಬಹುದು. ಈ ಕಟ್ಟಡದ ಪೂರ್ವಭಾಗದಲ್ಲಿರುವ ಆಯತಾಕಾರದ ಕೊಠಡಿಗೆ ಹೊರಗಿನಿಂದ ಇನ್ನೊಂದು ಬಾಗಿಲಿದ್ದು, ಬಹುಶಃ ಇದೊಂದು ಸಣ್ಣ ಪೂಜಾಗೃಹವಾಗಿದ್ದು, ಉಳಿದ ಕೊಠಡಿಗಳು

ವಾಸಕ್ಕಾಗಿ ಉಪಯೋಗಿಸಲ್ಪಡುತ್ತಿದ್ದವು. ಮೇಲೆ ಹೇಳಿದ ಕಟ್ಟಡಗಳಲ್ಲದೆ ಕೆಲವು ನಿರ್ದಿಷ್ಟ ವ್ಯವಹಾರಗಳಿಗೆ ಬಳಸಲಾಗುತ್ತಿದ್ದ ವಿವಿಧಗಾತ್ರದ ಇತರ ಆರು ಕಟ್ಟಡಗಳೂ ಅರಮನೆ ಸಂಕೀರ್ಣದಲ್ಲಿವೆ. ಇವುಗಳಲ್ಲಿ ಉತ್ತರದ ತುದಿಯಲ್ಲಿರುವ 'ವೀಕ್ಷಕರ ಕೊಠಡಿ'ಯ ಎದುರಿನ ಕಟ್ಟಡ ಗಮನಾರ್ಹವಾದದ್ದು. ಈ ಕಟ್ಟಡದ ವಾಯುವ್ಯ ಮೂಲೆಗೆ ರಾಜಸಭಾಂಗಣದ ಮೇಲುಪ್ಪರಿಗೆಗೆ ಹೋಗಲು ಮೆಟ್ಟಿಲುಗಳಿವೆ. ಮೊದಲ ಮೆಟ್ಟಿಲಿನಲ್ಲಿ ಕಡಿಮೆ ಆಳದ ತೊಟ್ಟಿಯಾಕಾರದ ಹಳ್ಳವಿದ್ದು, ಜಲವಾಹಕ ವ್ಯವಸ್ಥೆಯ ಮೂಲಕ ನೀರು ಹರಿಯುವಂತೆ ಏರ್ಪಡಿದಿರುವುದೊಂದು ವೈಶಿಷ್ಟ್ಯ. ಇದರಿಂದ ರಾಜನು ಸಭಾಸದರಿಗೆ ಸಂದರ್ಶನ ನೀಡುವುದಕ್ಕಾಗಿ ಸಭಾಂಗಣವನ್ನು ಪ್ರವೇಶಿಸುವ ಮುನ್ನ ಮತ್ತು ಅನಂತರ ಕಾಲುತೊಳೆಯಲು ಅನುಕೂಲವಾಗುವಂತೆ ಸ್ವಯಂಚಾಲಿತ ನೀರು ಪೂರೈಕೆ ವ್ಯವಸ್ಥೆ ಇದ್ದುದು ತಿಳಿಯುತ್ತದೆ. ಜೊತೆಗೆ ಈ ಕಟ್ಟಡದ ಒಳಭಾಗದಲ್ಲಿ ಸಣ್ಣ ಶೌಚಾಲಯವಿದ್ದ ಕುರುಹುಗಳೂ ದೊರೆತಿವೆ[22].

ಅರಮನೆ ಸಂಕೀರ್ಣದಲ್ಲಿನ ಇತರ ಕಟ್ಟಡಗಳಲ್ಲಿ ಆಯತಾಕಾರದ ಕಂಬಸಾಲಿನ ಎರಡು ಹಜಾರಗಳು ಹಾಗೂ ಎತ್ತರವಾದ ಆಧಿಷ್ಠಾನದ ಮೇಲೆ ಕಟ್ಟಲಾಗಿರುವ ಚೌಕಾಕಾರದ ಒಂದು ಕಟ್ಟಡ ಮುಖ್ಯವಾದವು. ಚೌಕಾಕಾರದ ಕಟ್ಟಡದ ಮುಂಭಾಗದಲ್ಲಿ ಆನೆಯ ಉಬ್ಬುಚಿತ್ರವಿರುವ ಕಟಾಂಜನ ಸಹಿತ ಸೋಪಾನವೂ ಹಿಂಭಾಗದಲ್ಲಿ ಸಾಮಾನ್ಯರೀತಿಯ ಮೆಟ್ಟಿಲುಗಳೂ ಇದ್ದು ಈ ಕಟ್ಟಡವನ್ನು ಬಹುಶಃ ವಾಸಕ್ಕಾಗಿ ಅಲ್ಲದೆ ಬೇರಾವುದೊ ವಿಶಿಷ್ಟಕಾರ್ಯಕ್ಕಾಗಿ ಕಟ್ಟಿದಂತೆ ಕಾಣುತ್ತದೆ. ಈ ಮೂರೂ ಕಟ್ಟಡಗಳನ್ನು

ಇಂತಹುದೇ ಉಪಯೋಗಕ್ಕಾಗಿ ನಿರ್ಮಿತವಾದುದೆಂದು ನಿರ್ದಿಷ್ಟವಾಗಿ ಹೇಳಲು ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲ.

ರಾಜಾಂಗಣದ ಕೇಂದ್ರಭಾಗವಾದ ಈ ಪ್ರದೇಶದಲ್ಲಿ ಚೀನಾದೇಶದಿಂದ ಆಮದಾದ ಪಿಂಗಾಣಿ ಪಾತ್ರೆ, ಮನೆಯಲ್ಲಿ ಪೂಜಿಸುವುದಕ್ಕಾಗಿ ಇದ್ದಿರಬಹುದಾದ ಸಣ್ಣಗಾತ್ರದ ಶಿಲ್ಪ, ದೇವತಾ ಮೂರ್ತಿಗಳಿರುವ ಶಿಲಾಫಲಕ ಹಾಗೂ ಸ್ಫಟಿಕದ ಅನೇಕ ಶಿವಲಿಂಗಗಳು ದೊರಕಿರುವುದು ಔಚಿತ್ಯಪೂರ್ಣವಾಗಿದೆ. ಅದರಲ್ಲಿಯೂ ಮಾನವ, ಪಶು, ಪಕ್ಷಿ, ಲತೆಗಳಿಂದ ಅಲಂಕೃತವಾದ; ಕೆಲವೊಮ್ಮೆ, ಚೀನೀ ಲಿಪಿಯಿಂದ ಕೂಡಿದ ಪಿಂಗಾಣಿ ಪಾತ್ರೆಗಳ ಭಾಗಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಮತ್ತಷ್ಟು ಗಮನಾರ್ಹವಾದ ಅಂಶ[23].

**ಧಾರ್ಮಿಕ ಚಟುವಟಿಕೆಗಳು ನಡೆಯುತ್ತಿದ್ದ ಪ್ರದೇಶ:**

ಅರಮನೆ ಸಂಕೀರ್ಣದ ಪೂರ್ವಕ್ಕಿರುವ ಈ ಪ್ರದೇಶವು ಇಡೀ ರಾಜಾಂಗಣ ಹೃದಯಸ್ಥಾನದಲ್ಲಿದೆ ಎನ್ನಬಹುದು. ವಿಶಾಲವಾದ, ಛಾವಣಿರಹಿತ ಚತುಶ್ಶಾಲೆ ಅಥವಾ ಅಂಗಳದಂತಿರುವ ಈ ಪ್ರದೇಶದ ಮಧ್ಯದಲ್ಲಿ ಆಯತಾಕಾರದ ಹೋಮಕುಂಡವಿದ್ದು ಅದಕ್ಕೆ ಹೊಂದಿಕೊಂಡಂತೆ ಉತ್ತರದಲ್ಲಿ ಒಂದು ಏಕಶಿಲಾನಿರ್ಮಿತ ತೊಟ್ಟಿಯಿದೆ – ಬಹುಶಃ ಅವಭೃತಸ್ನಾನಾರ್ಥವಾಗಿ ಅಂಗಳದ ಒಳಭಾಗಕ್ಕೆ ಹೊಂದಿಕೊಂಡಂತೆ ಉತ್ತರ ಹಾಗೂ ಈಶಾನ್ಯ ದಿಸೆಗಳಲ್ಲಿ ಪ್ರತಿಷ್ಠಿತ ಅಮಂತ್ರಿತರು ಕುಳಿತು ಧಾರ್ಮಿಕ

ಕ್ರಿಯಗಳನ್ನು ವೀಕ್ಷಿಸಲು ಅನುವಾಗುವಂತೆ ಸ್ವಲ್ಪ ಎತ್ತರದ ರಕ್ಷಾಸನದಂತಹ ವೇದಿಕೆ ಇದೆ. ಈ ವೇದಿಕೆಯ ಆಚೆಗೆ ಒಂದೊಂದು ಸಣ್ಣ ಪೂಜಾಮಂದಿರಗಳಿದ್ದು, ದಕ್ಷಿಣದಲ್ಲಿ ಎತ್ತರವಾದ ಆಧಿಷ್ಠಾನದ ಮೇಲೆ ಕಟ್ಟಲಾಗಿರುವ ಬಹುಶಃ ಅರಮನೆ ಸಂಕೀರ್ಣದ ವಿಸ್ತೃತ ಭಾಗವಾಗಿರಬಹುದಾದ ಎರಡು ಕಟ್ಟಡಗಳಿವೆ. ಪೂರ್ವದಿಕ್ಕಿನಲ್ಲಿರುವ ಪರದೆಯಂತಹ ಕಿರುಗೋಡೆಯೊಂದು ಈ ಪ್ರದೇಶವನ್ನು ಮಹಾನವಮಿದಿಬ್ಬದಿಂದ ಪ್ರತ್ಯೇಕಿಸುತ್ತಿದ್ದು, ವಿಶೇಷ ಸಂದರ್ಭಗಳಲ್ಲಿ ಅರಮನೆ ಸಂಕೀರ್ಣದಿಂದ ಧಾರ್ಮಿಕ ಚಟುವಟಿಕೆಗಳನ್ನು ಮುಗಿಸಿಕೊಂಡು ಮಹಾನವಮಿದಿಬ್ಬಕ್ಕೆ ನೇರವಾಗಿ ಹೋಗಿಬರಲು ಒಂದು ಸಣ್ಣ ಪ್ರವೇಶದ್ವಾರವೂ ಇದೆ.

ಧಾರ್ಮಿಕ ಚಟುವಟಿಕೆಗಳು ನಡೆಯುತ್ತಿದ್ದ ಈ ಪ್ರದೇಶ ಮತ್ತು ಮಹಾನವಮಿದಿಬ್ಬ ಇವೆರಡರ ನಡುವಣ ಸ್ಥಳದಲ್ಲಿ ವಿವಿಧಗಾತ್ರದ ನಾಲ್ಕು ಕೊಳಗಳಿವೆ. ಮಹಾನವಮಿದಿಬ್ಬದ ಮುಂಭಾಗದಲ್ಲಿ ಪಶ್ಚಿಮಕ್ಕಿರುವ ಎರಡು ದೊಡ್ಡ ಕೊಳಗಳಿವೆ. ಇವು ರಾಜಾಂಗಣದಲ್ಲಿ ಕಟ್ಟಡ ನಿರ್ಮಾಣದ ಮೊದಲ ಹಂತದಲ್ಲಿಯೇ ನಿರ್ಮಿತವಾಗಿದ್ದು, ಅನತಿಕಾಲದಲ್ಲಿಯೇ ಅನುಪಯೋಗಿಯೆಂದು ಭಾವಿಸಲ್ಪಟ್ಟು, ಉದ್ದೇಶಪೂರ್ವಕವಾಗಿ ಮುಚ್ಚಿರುವಂತೆ ಕಂಡುಬರುತ್ತವೆ. ಆದರೆ ಬಹುಶಃ ಅದೇ ಕಾಲದಲ್ಲಿ ಕಟ್ಟಲಾದ ಖ–ಆಕಾರದ ಕೊಳ ಹಾಗೂ ಅದಕ್ಕೆ ಹೊಂದಿಕೊಂಡಂತೆ ಇರುವ ಒಂದೇ ಕಲ್ಲಿನಲ್ಲಿ ಕೊರೆದಿರುವ ತೊಟ್ಟಿ ಇವು ದೀರ್ಘಕಾಲ ಬಳಕೆಯಲ್ಲಿದ್ದಂತೆ ಕಾಣುತ್ತವೆ. ಹೆಚ್ಚು ಆಳವಿಲ್ಲದ, ಪಶ್ಚಿಮದಲ್ಲಿ ಮಾತ್ರ ಸೋಪಾನವಿರುವ ಈ ಖ– ಆಕಾರದ ಕೊಳವನ್ನು

ಸುಂದರವಾಗಿ ಕಟ್ಟಲಾಗಿದೆ. ಇಕ್ಕೆಲಗಳಲ್ಲಿ ಪ್ರಸಾಧನಗೃಹಗಳಂತಹ ಕೊಠಡಿಗಳನ್ನು ಜೊಡಿಸಿರುವುದರಿಂದ ಇದೊಂದು ಈಜು ಕೊಳವಾಗಿದ್ದಿರಬಹುದೆಂದು ಉಹಿಸಬಹುದು[24].

**ಅಂಗರಕ್ಷಕರ ಹಾಗೂ ಪರಿಚಾರಕರ ವಾಸಗೃಹಗಳು:**

ಅರಮನೆ ಸಂಕೀರ್ಣದ ದಕ್ಷಿಣಭಾಗದಲ್ಲಿರುವ ಕಟ್ಟಡಗಳಲ್ಲಿ ಪ್ರಾಯಶಃ ರಾಜಪರಿವಾರದ ಅಂಗರಕ್ಷಕ, ಅರಮನೆಯ ಪರಿಚಾರಕರ ವಾಸಗೃಹಗಳೂ ಅರಮನೆಗೆ ಸಂಬಂಧಿಸಿದ ಉಗ್ರಾಣಗಳೂ ಇದ್ದುವು. ದಕ್ಷಿಣೋತ್ತರವಾಗಿ ನಿರ್ಮಿತವಾಗಿರುವ ಮೊದಲ ಹತ್ತು ಆಯತಕಾರದ ಕಂಬಸಾಲಿನ ಹಜಾರಗಳಲ್ಲಿ ಬಹುಶಃ ಅಂಗರಕ್ಷಕರು ಮತ್ತು ಪರಿಚಾರಕರು ವಾಸಿಸುತ್ತಿದ್ದರು. ಅದರ ಹಿಂದಿರುವ ಕಡೆಯ ಎರಡು ಅಂತಹವೇ ಕಂಬಸಾಲಿನ ಹಜಾರಗಳಲ್ಲಿ ಉಗ್ರಾಣವನ್ನು ನೆಲೆಗಳಸಲಾಗಿತ್ತು. ಈ ಹಜಾರಗಳ ದಕ್ಷಿಣಕ್ಕಿರುವ ಮುಕ್ತಪ್ರದೇಶದಲ್ಲಿ ಸಮಾನಾಂತರಗಳಲ್ಲಿ ಸಣ್ಣದೊಡ್ಡ ಕುಳಿಗಳಿದ್ದವು. ಈ ಸ್ಥಳದಲ್ಲಿ ಪುಷ್ಪಲತೆಗಳು ಫಲಭರಿತ ವೃಕ್ಷಗಳು ಇದ್ದುವೆಂದು ಉತ್ಖನನದ ನಿರ್ದೇಶಕರು ಊಹಿಸಿದ್ದಾರೆ. ವಿಜಯನಗರದ ಅರಸರು ಪುಷ್ಪಪ್ರಿಯರು ವಿಶೇಷವಾಗಿ ಬಣ್ಣ ಬಣ್ಣ ಗುಲಾಬಿ ಮತ್ತು ವಿವಿಧ ರೀತಿಯ ಮಲ್ಲಿಗೆ ಹೂ ಅವರಿಗೆ ಅತ್ಯಂತ ಪ್ರಿಯವೆಂಬುದು ಶಾಸನ ಹಾಗೂ ಸಾಹಿತ್ಯಕೃತಿಗಳಿಂದ ತಿಳಿದುಬರುವ ವಾಸ್ತವಾಂಶವಾಗಿದೆ. ಈ ಅಂಶಗಳನ್ನು ಆಧರಿಸಿ, ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಿತವಾಗಿರುವ

ತರುಲತೆಗಳನ್ನೊಳಗೊಂಡ ಸಾಂಪ್ರದಾಯಿಕ ಉದ್ಯಾನವನ್ನು ರಾಜಾಂಗಣದ ಈ ಭಾಗದಲ್ಲಿ ಈಗ ಬೆಳಸಲಾಗಿದೆ[25].

ಈ ಉದ್ಯಾನದ ಪೂರ್ವಕ್ಕೆ ದೊಡ್ಡ ಆಯತಾಕಾರದ ಕೊಳವಿದ್ದು, ಇದನ್ನು 'ಸಾರ್ವಜನಿಕರ ಸ್ನಾನದ ಕೊಳ' ಎಂದು ಗುರುತಿಸಲಾಗಿತ್ತು. ಆದರೆ ಇದನ್ನು ಈಗ ರಾಜಾಂಗಣದೊಳಗೆ ವಾಸಿಸುತ್ತಿದ್ದ ಅಂಗರಕ್ಷಕರು, ಪರಿಚಾರಕರು ಮೊದಲಾದವರ ದೈನಂದಿನ ಅವಶ್ಯಕತೆಗಳ ಜಲ ಪೂರೈಕೆಗಾಗಿ ನಿರ್ಮಿಸಲಾಗಿತ್ತೆಂದು ವಿಶ್ವಾಸಪೂರ್ವಕವಾಗಿ ಹೇಳಬಹುದು. ಈ ಕೊಳಕ್ಕೆ ಹೊಂದಿಕೊಂಡಂತೆ ಪಶ್ಚಿಮದಲ್ಲಿ ಒಂದು ಸಣ್ಣ ಮಂದಿರವಿದೆ.

**ಅಲಂಕೃತ ಕಲ್ಯಾಣಿ:**

ಮಹಾನವಮಿದಿಬ್ಬದ ನೈಋತ್ಯಭಾಗದಲ್ಲಿ ಬೆಳಕಿಗೆ ಬಂದಿರುವ ಅಲಂಕೃತ ಕಲ್ಯಾಣಿ ಹಂಪಿಯಲ್ಲಿನ ಇದುವರೆಗಿನ ಉತ್ಖನನದಲ್ಲಿ ಸಂಶೋಧಿಸಲಾಗಿರುವ ಕಟ್ಟಡಗಳಲ್ಲೆಲ್ಲಾ ಅತ್ಯುತ್ಕೃಷ್ಟವೂ, ಈ ಶೈಲಿಯ ಏಕೈಕ ಉದಾಹರಣೆಯೂ ಆಗಿದೆ. 22 ಥ 22 ಮೀ. ಚಚ್ಚೌಕಾಕಾರದ ಈ ಕಲ್ಯಾಣಿಯು ಏಳು ಮೀಟರ್ ಅಳವಾಗಿದ್ದು, ಸಮಾನಾಕಾರದ ಪದರಗಲ್ಲಿನ ಫಲಕಗಳಿಂದ ಕಟ್ಟಲ್ಪಟ್ಟಿದೆ. ತಲವಿನ್ಯಾಸದಲ್ಲಿ ಸ್ವಲ್ಪ ನೈಋತ್ಯ – ಈಶಾನ್ಯ ದಿಕ್ಕಿಗೆ ವಾಲಿಯರುವಂತೆ ಇದೆ. ಕ್ರಮೇಣ ಕಿರಿದಾಗುತ್ತಾ ಹೋಗುವ, ಮೆಟ್ಟಿಲು ರಚನೆಯಿಂದ ಕೂಡಿರುವ ಕಲ್ಯಾಣಿಯು ಐದು ಹಂತಗಳಲ್ಲಿ

ವಿನ್ಯಾಸಗೊಂಡಿದ್ದು ಪ್ರತಿಹಂತದ ಮೇಲ್ಭಾಗವೂ 1.05 ಮೀ. ನಷ್ಟು ಅಗಲವಾಗಿದೆ. ಉಪಯೋಗಿಸಿರುವ ಫಲಕಗಳ ಕೆಳಭಾಗವು ಸ್ವಲ್ಪ ಹಂತಗಳು ತಲವಿನ್ಯಾಸದಲ್ಲಿ ನಾಲ್ಕು ವಿವಿಧ ಪ್ರಮಾಣದ ಚಚ್ಚೌಕಗಳನ್ನಾಗಿ ವಿಭಜಿಸುತ್ತವೆ. ಒಂದೊಂದೂ ಚೌಕಭಾಗದಲ್ಲಿಯೂ ಅಲಂಕೃತ ಸೋಪಾನಗಳವೆ. ಮೊದಲನೆರಡು ಹಂತಗಳ ನಡುವೆ ನಾಲ್ಕು ಕಡೆ ಪಿರಮಿಡಾಕಾರದ ಒಂಭತ್ತು ಮೆಟ್ಟಿಲುಗಳ ಸೋಪಾನವಿದೆ. ಚೌಕಗಳ ಬಾಹುಗಳ ಮಧ್ಯದಲ್ಲಿ ಇರುವ ಸೋಪಾನವನ್ನು ಮುಂಚಾಚಿಸಿ, ಅದರ ಹೊರ ಮೇಲ್ಕೈಯನ್ನು ಹೆಚ್ಚು ಹೆಚ್ಚು ಭಾಗಗಳಾಗಿ ಜೋಡಿಸಿರುವುದರಿಂದ ಇಡೀ ಕಲ್ಯಾಣಿ ಒಂದು ಅಸಾದೃಶವಾದ ಅಲಂಕಾರಿಕ ವಿನ್ಯಾಸದಿಂದ ಕಂಗೊಳಸುತ್ತದೆ. ಹೀಗೆ ಮುಂಚಾಚಿದ ಮೆಟ್ಟಿಲುಗಳು ಸುಮಾರು 35 ಸೆಂ.ಮೀ. ಅಗಲವಾಗಿದ್ದು, ನಿರಂತರ ಉಪಯೋಗದಲ್ಲಿದ್ದು ಸವೆದಿರುವಂತೆ ಕಂಡುಬರುತ್ತವೆ. ಕಲ್ಯಾಣಿಯ ಮಧ್ಯದ ಕುಳಿಯು 2.45 ಮೀ. ಆಳವಿದ್ದು, ಗೋಡೆಗಳ ಮಧ್ಯದಲ್ಲಿ ಪಿರಮಿಡ್ ಆಕಾರದಲ್ಲಿ, ಒಂದರ ಕೆಳಗ ಒಂದು ಕ್ರಮೇಣ ಅಗಲವಾಗುತ್ತಾ ಹೋಗಿ, ತಳದಲ್ಲಿ ಇಡೀ ಬಾಹುವನ್ನು ಅವರಿಸುವ ಹನ್ನೊಂದು ಮೆಟ್ಟಿಲುಗಳ ಸೋಪಾನಗಳವೆ. ನೀರಿನ ಮಟ್ಟ ಕಡಿಮೆಯಾಗಿದ್ದಾಗ ಹತ್ತಿ ಇಳಿಯಲು ಅನುಕೂಲವಾಗುವಂತಿರುವ ಈ ಮೆಟ್ಟಿಲುಗಳು 25 ಸೆಂ.ಮೀ. ಅಗಲವಾಗಿದ್ದು 45 ಸೆಂ.ಮೀ. ಉದ್ದವಾಗಿದೆ. ಚೌಕಾಕಾರದ ಈ ಕುಳಿಯ ತಲದಲ್ಲಿ ಗ್ರಾನೈಟ್ ಶಿಲೆಯ ಆಯತಾಕಾರದ ಫಲಕಗಳ ನೆಲಗಟ್ಟನ್ನು ಒದಗಿಸಲಾಗಿದ್ದು ಅದರ ಕೆಳಗೆ ಮರಳಿನ ಒಂದು ಪದರವನ್ನು ಬಹುಶಃ

ನೆಲದೊಳಗಿಂದ ಸದಾಕಾಲವೂ ಚಿಮ್ಮುವ ಒರತೆಯನ್ನು ಶೋಧಿಸಿ ಕಲ್ಯಾಣಿಯಲ್ಲಿ ನೀರು ಸಂಗ್ರಹವಾಗುವಂತೆ ಮಾಡಲು ನೀಡಲಾಗಿದೆ[26].

ಈ ಕಲ್ಯಾಣಿಯ ವಿನ್ಯಾಸ ಹಾಗೂ ನಿರ್ಮಾಣ ಕಾರ್ಯವೂ ಪೂರ್ಣವಾಗಿ ಪೂರ್ವನಿಯೋಜಿತವಾಗಿರುವುದು ಅತ್ಯಂತ ಕುತೂಹಲಕಾರಿ ಸಂಗತಿ. ಯೋಜಿತ ತಲವಿನ್ಯಾಸದಲ್ಲಿ ನೆಲದೊಳಗೆ ಹಂತಹಂತವಾಗಿ ಕಿರಿದಾಗುತ್ತಾ ಹೋಗುವ ದೊಡ್ಡ ಹಳ್ಳದಂತಹ ಕೊಳವನ್ನು ಅಗೆದು, ಅನಂತರ ಉತ್ಪಾದನಾ ಸ್ಥಳದಲ್ಲಿ ಮೊದಲೇ ಸಿದ್ಧಪಡಿಸಿಕೊಂಡಿರುವ ಪದರಗಳಲ್ಲಿನ ಅಲಂಕೃತ ವಾಸ್ತುಭಾಗಗಳನ್ನು ಹಾಗೂ ಸಮಾನಗಾತ್ರದ ಫಲಕಗಳನ್ನು ಇಲ್ಲಿಗೆ ತಂದು ಕೊಳದ ಒಳಭಾಗಕ್ಕೆ ಸರಿಹೊಂದುವಂತೆ ಜೋಡಿಸಲಾಗಿದೆ. ಪ್ರತಿವಾಸ್ತುಭಾಗದ ಮೇಲೆ ವಾಸ್ತುಶಿಲ್ಪಿಯ ಚಿನ್ಹ ಅಥವಾ ಸ್ಥಳ ನಿರ್ದೇಶನದ ಗುರುತುಗಳಿದ್ದು ಇದರಿಂದ ಆ ವಾಸ್ತುಭಾಗವು ಕಲ್ಯಾಣಿಯ ಇಂತಹುದೇ ದಿಕ್ಕಿನ, ಇಂತಹುದೇ ಸಾಲಿನ, ಇಂತಹ ಸಂಖ್ಯೆಯ ಫಲಕದ ನಂತರ ಜೋಡಿಸಬೇಕಾದುದು ಎಂದು ಅತ್ಯಂತ ನಿರ್ದಿಷ್ಟವಾಗಿ ಸೂಚಿತವಾಗಿದೆ. ಈ ಸ್ಥಳ ನಿರ್ದೇಶನ ಚಿನ್ಹೆಗಳು 14–15ನೆಯ ಶತಮಾನದ ತೆಲುಗು – ಕನ್ನಡ ಲಿಪಿಯಲ್ಲಿರುವುದು ಗಮನರ್ಹಾವಾದ ಅಂಶ. ಈ ಕಲ್ಯಾಣಿಗೆ ಹೊಂದಿಕೊಂಡಂತೆ ದಕ್ಷಿಣಭಾಗದಲ್ಲಿ ಒಂದು ವೇದಿಕೆಯಿದ್ದು, ಅದರ ಮೇಲೆ ಸಣ್ಣ ದೇವಾಲಯದಂತಹ ಕಟ್ಟಡ ವಿರುವುದು ಇನ್ನೊಂದು ವಿಶೇಷ. ಇದರ ವಿಶಿಷ್ಟ ವಿನ್ಯಾಸ, ಅನುಪಮ ಅಲಂಕಾರ ಹಾಗೂ ಪಾರ್ಶ್ವಾದಲ್ಲಿರುವ ಮಂದಿರ ಇವುಗಳಿಂದ ಬಹುಶಃ ಈ

ಕಲ್ಯಾಣಿಯು ರಾಜಾಂಗಣದಲ್ಲಿ ವಾಸಿಸುತ್ತಿದ್ದವರ ಮುಖ್ಯವಾಗಿ ರಾಜಮನೆತನದವರ ಸ್ವಂತ ಉಪಯೋಗಕ್ಕಾಗಿ ನಿರ್ಮಾಣಗೊಂಡಿದ್ದಿರ ಬಹುದೆಂದು ಭಾವಿಸಬಹುದು[27].

**ಜಲಪೂರೈಕೆ ಮತ್ತು ಒಳಚರಂಡಿ ವ್ಯವಸ್ಥೆ:**

ವಿಜಯನಗರ ಕಾಲದ ಜನರ ವಾಸ್ತು ನೈಪುಣ್ಯ ಹಾಗೂ ಸಾಧನೆಗಳು ಅವರು ಸಮರ್ಥವಾಗಿ ಯೋಜಿಸಿ ಒಳಸುತ್ತಿದ್ದ ಜಲಪೂರೈಕೆಯ ವಿಧಾನ ಮತ್ತು ಒಳಚರಂಡಿ ವ್ಯವಸ್ಥೆಗಳಲ್ಲಿ ಎದ್ದು ಕಾಣುತ್ತವೆ. ಹಂಪಿಯಲ್ಲಿ ನಡೆದಿರುವ ಉತ್ಖನನಗಳಲ್ಲಿ ರಾಜಾಂಗಣ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಅವಶೇಷಗಳು ಈ ಪೌರ ಸೌಲಭ್ಯ ವ್ಯವಸ್ಥೆಗಳನ್ನು ಹೆಚ್ಚು ಸ್ಪಷ್ಟವಾಗಿ ನಿರೂಪಿಸುತ್ತವೆ.

ಬಹುಶಃ ಕಮಲಾಪುರದ ಬಳಿರುವ ದೊಡ್ಡಕೆರೆಯಿಂದ ಕಿರುಗಾಲುವೆಯ ಮೂಲಕ ತರಲಾಗುತ್ತಿದ್ದ ನೀರನ್ನು ರಾಜಾಂಗಣದ ಪೂರ್ವ ಪ್ರಾಕಾರದ ಬಳಿಯಿಂದ ಅರಂಭವಾಗುವ ಮುಖ್ಯ ಶಿಲಾಜಲವಾಹಕಕ್ಕೆ ಬಿಡಲಾಗುತ್ತಿತ್ತು. ಈ ಮುಖ್ಯ ಜಲವಾಹಕವು ಇತರ ಜಲವಾಹಕಗಳ ಜಾಲಬಂಧ ಮೂಲಕ ಇಡೀ ರಾಜಾಂಗಣದೊಳಗೆಲ್ಲಾ ನೀರು ಸರಬರಾಜು ಮಾಡುತ್ತಿತ್ತು. ಮುಖ್ಯ ಜಲವಾಹಕಕ್ಕೆ ದಕ್ಷಿಣದಿಂದ ಸೇರಿಸಲಾದ ಕಲ್ಲು ಹಾಗೂ ಸುಣ್ಣಕಲ್ಲಿನ ಜಲ್ಲಿಗಾರೆಯಿಂದ ನಿರ್ಮಿಸಲಾದ ಜಲವಾಹಕದ ಮೂಲಕ ಸಾರ್ವಜನಿಕ ಸ್ನಾನದ ಕೊಳವೂ ಅನಂತರ ಇನ್ನೊಂದು ಶಿಲಾ ಜಲವಾಹಕದ ಮೂಲಕ ಅಲಂಕೃತ ಕಲ್ಯಾಣಿಯೂ ತುಂಬುತ್ತಿದ್ದವು.

ಕಲ್ಯಾಣಿಯಿಂದ ಮುಂದೆ ಕವಲೊಡೆಯುವ ಈ ಮುಖ್ಯ ಜಲವಾಹಕದ ಒಂದು ಶಾಖೆ ಉತ್ತರಕ್ಕೂ ಇನ್ನೊಂದು ಶಾಖೆ ಪಶ್ಚಿಮಕ್ಕೂ ಮುಂದುವರೆಯುತ್ತವೆ. ಈ ಎರಡು ಶಾಖೆಗಳು ರಾಜಾಂಗಣದಲ್ಲಿರುವ ವಿವಿಧ ಗಾತ್ರದ ಸುಮಾರು ಹೊತ್ತೊಂಭತ್ತು ಕೊಳಗಳನ್ನು ತುಂಬಿಸುತ್ತವೆ. ಇಲ್ಲಿನ ಎಲ್ಲ ಕೊಳಗಳು ತುಂಬಿದನಂತರ ನೀರು ಪೋಲಾಗದೆ ನೆಲದೊಳಗಣ ಜಲವಾಹಕಗಳ ಮೂಲಕ ಇತರ ಅವರಣಗಳಗೆ ಹೋಗುತ್ತದೆ. ಸಾಮಾನ್ಯವಾಗಿ ಈ ಜಲವಾಹಕ ಕಾಲುವೆಗಳಲ್ಲ ಪ್ರಾಕಾರದ ಒಳಬದಿಯ ಮಗ್ಗುಲಲ್ಲಿ, ಇಲ್ಲವೆ ನೆಲದೊಳಗೆ ಹಾದು ಹೋಗುವುವಲ್ಲದೆ ಶಿಲಾಫಲಕಗಳಂದ ಮುಚ್ಚಲ್ಪಟ್ಟು ಸುಣ್ಣದಕಲ್ಲಿನ ಜಲ್ಲಿಗಾರೆ ಹಾಕಿ ನೀರು ಸೋರದಂತೆ ಭದ್ರಪಡಿಸಲಾಗಿರುತ್ತವೆ. ಮುಖ್ಯ ಜಲವಾಹಕವು ಕವಲೊಡೆಯುವ ಜಾಗದಲ್ಲಿ, ತುರ್ತು ಸಂದರ್ಭಗಳಲ್ಲಿ ಉಪಯೋಗಕ್ಕೆ ಬರುವಂತೆ ಆಳವಾದ ಬಾವಿಯೊಂದನ್ನೂ ತೋಡಲಾಗಿದೆ. ಮನುಷವಾಗಿ ಈ ಭಾವಿಯಿಂದ ನೀರು ಸೇದಿ ಜಲವಾಹಕಗಳು ಸಂಧಿಸುವಲ್ಲಿ ಸುರಿದರೆ ಎಲ್ಲಕಡೆಗೂ ನೀರು ಸಹಜವಾಗಿ ಸರಬರಾಜಾಗುತ್ತಿತ್ತು. ಹೀಗೆ ಹೊರಗಿನಿಂದ ಬರುವ ನೀರು ಯಾವುದೇ ಅಡಚಣೆಯಿಂದ ನಿಂತುಹೋದರೆ ತಾತ್ಕಾಲಿಕವಾಗಿ ಆಂತರಿಕವಾಗಿಯೇ ಜಲಪೂರೈಕೆಯಾಗುವ ವ್ಯವಸ್ಥೆಯನ್ನೂ ಮಾಡಲಾಗಿತ್ತು[28]. ಈ ವ್ಯವಸ್ಥೆಯ ಇನ್ನೊಂದು ವೈಶಿಷ್ಟವೆಂದರೆ ರಾಜಾಂಗಣದೊಳಗಣ ಜಲಾಶಯಗಳೆಲ್ಲ ಒಂದರನಂತರ ಒಂದು ತುಂಬುವುದಲ್ಲದೆ ಯಾವುದಾದರೊಂದು ಕೊಳದಲ್ಲಿ ನೀರಿನ ಮಟ್ಟ ಕಡಿಮೆಯಾದರೆ ಸ್ವಂಯಂಚಾಲಿತ ವ್ಯವಸ್ಥೆಯಿಂದ ನೀರು

ಹರಿದು ಬಂದು ಮೊದಲಿನ ಮಟ್ಟವನ್ನು ಮುಟ್ಟುತ್ತಿತ್ತು. ಏರಿಳಿತಗಳ ಆಧಾರದ ಮೇಲೆ ಭೂಮಿಯ ವರ್ಗೀಕರಣ ಮಾಡಿ ಇಳಿಜಾರು ಮತ್ತು ಗುರುತ್ವಾಕರ್ಷಣ ಶಕ್ತಿಗಳ ವಿಶಿಷ್ಟ ರೀತಿಯ ಸಮತೋಲನಸಾಧಿಸಿ ಈ ಸ್ವಯಂಚಾಲನ ವ್ಯವಸ್ಥೆಯನ್ನು ಯೋಜಿಸಲಾಗಿತ್ತು.

ಇಂತಹ ಅಪೂರ್ವ ಜಲಪೂರೈಕೆಯ ವ್ಯವಸ್ಥೆಗೆ ತಕ್ಕಂತೆ ರಾಜಾಂಗಣದಲ್ಲಿ ಸಂಗ್ರಹವಾಗುವ ಮಳೆ ಹಾಗೂ ಕೊಳಚೆಯ ನೀರನ್ನು ಈ ಪ್ರದೇಶದಿಂದ ಆಚೆಗೆ ಸಾಗಿಸಲು ನೆಲದೊಳಗೆ ಅಸಂಖ್ಯಾತ ಕಿರುಗಾಲುವೆ, ಕೊಳವೆಗಳ ವ್ಯವಸ್ಥಿತ ಜಾಲಬಂಧವನ್ನೂ ರಚಿಸಲಾಗಿದೆ. ಕಿರುಗಾಲವೆಗಳಿಂದ ಸಂಗ್ರಹಿಸಿದ ಕೊಳಚೆ ನೀರು ದೊಡ್ಡ ಕಾಲುವೆಯ ಮೂಲಕ ಹೊರಹೋಗುತ್ತಿದ್ದು ಇಂತಹ ದೊಡ್ಡ ಚರಂಡಿಯೊಂದು ರಾಜಾಂಗಣದ ದಕ್ಷಿಣ ಪ್ರಾಕಾರ ಮತ್ತು ಉದ್ಯಾನವನ್ನು ಸುತ್ತುವರೆದಿರುವ ಗೋಡೆಯ ನಡುವೆ ಪೂರ್ವಪಶ್ಚಿಮವಾಗಿ ಹರಿಯುತ್ತದೆ[29]. ಇಂತಹುದೇ ಸಣ್ಣ ಕಾಲುವೆಗಳ ಮೂಲಕ ಉತ್ತರಭಾಗದ ಕೊಳಚೆ ನೀರು ರಾಜಾಂಗಣದಾಚೆಗೆ ಸಾಗಿಸಲ್ಪಡುತ್ತದೆ. ಭೂಮಿಯೊಳಗೆ ವಿವಿಧ ಮಟ್ಟ ಹರಿಯುವ ಈ ಕಾಲುವೆಗಳನ್ನು ಮಣ್ಣಿನ ಕೊಳವೆ, ಕಲ್ಲಿನ ಫಲಕಗಳನ್ನುಪಯೋಗಿಸಿ ಅಥವಾ ಕೇವಲ ಸುಣ್ಣದಕಲ್ಲಿನ ಜಲ್ಲಿಗಾರೆಯಿಂದಲೇ ನಿರ್ಮಿಸಲಾಗಿದ್ದು ಅಲ್ಲಲ್ಲಿ ಪರೀಕ್ಷಣಾ ಕೊಠಡಿಗಳನ್ನು ಸಹ ಒದಗಿಸಲಾಗಿದೆ.

**ರಾಜಪ್ರಮುಖರ ಭವನಗಳು:**

ದಂಡನಾಯಕನ ಅವರಣದ ಉತ್ತರಕ್ಕೆ ಹಾಗೂ ಪ್ರಸನ್ನ ವಿರೂಪಾಕ್ಷ ದೇವಾಲಯದ ಈಶಾನ್ಯಕ್ಕೆ ಬೃಹದಾಕಾರದ ಗ್ರಾನೈಟ್ ಬಂಡೆಗಳಿಂದ ಸುತ್ತುವರೆಯಲ್ಪಟ್ಟ, ಸಮತಟ್ಟಾದ ಪ್ರದೇಶವೊಂದರಲ್ಲಿ ಕಟ್ಟಡಗಳ ಅವಶೇಷಗಳನ್ನು ಒಳಗೊಂಡ ಅನೇಕ ದಿಬ್ಬಗಳಿದ್ದುವು. ಈ ಪ್ರದೇಶದ ಉತ್ತರಕ್ಕಿರುವ ಮಹಾದ್ವಾರದ ಮೂಲಕ ದಂಡನಾಯಕನ ಅವರಣವನ್ನೂ ಪ್ರವೇಶಿಸಬಹುದು. ರಾಜ್ಯ ಪುರಾತತ್ತ್ವ ಇಲಾಖೆಯು ಈ ಪ್ರದೇಶದಲ್ಲಿ ಉತ್ಖನನ ಕೈಗೊಂಡು ವಿವಿಧಗಾತ್ರ ಹಾಗೂ ವಿಸ್ತಾರದ ಹನ್ನೆರಡಕ್ಕೂ ಹೆಚ್ಚಿನ ಕಟ್ಟಡಗಳ ಅವಶೇಷವನ್ನು ಬೆಳಕಿಗೆ ತಂದಿದ್ದಾರೆ. ಪರಸ್ಪರ ಸಾಮ್ಯವಿರುವ ಕಟ್ಟಡಗಳ ಈ ಸಮೂಹವು ಇರುವ ನೆಲೆ, ಇತರ ಅವರಣಗೊಳಡನೆ ಇದರ ಸಂಬಂಧ ಹಾಗೂ ಈ ಸಮೂಹದ್ದೇ ಆದ ಕೆಲವು ವೈಶಿಷ್ಟ್ಯಗಳ ಆಧಾರದ ಮೇಲೆ ಈ ಭವನದಲ್ಲಿ ರಾಜವಂಶೀಯರು ಅಥವಾ ಅಧಿಕಾರದಲ್ಲಿದ್ದ ರಾಜಸಂಬಂಧಿ ಶ್ರೀಮಂತ ಮನೆತನದವರು ವಾಸಿಸುತ್ತಿದ್ದರೆಂದು ಊಹಿಸಿ ಇವುಗಳನ್ನು 'ರಾಜಪ್ರಮುಖರ ಭವನ'ಗಳೆಂದು ಗುರುತಿಸಲಾಗಿದೆ[30].

- ಭವನ–1:

ಎರಡು ಉನ್ನತ ಪ್ರಕಾರಗಳಿಂದ ಅವೃತವಾಗಿದ್ದು, ಉತ್ತರಾಭಿಮುಖವಾದ ಈ ಭವನ ಸಂಕೀರ್ಣದ ಮಧ್ಯಭಾಗದಲ್ಲಿ ಒಂದು ಮುಖ್ಯಭವನ; ಅದಕ್ಕೆ ಹೊಂದಿಕೊಂಡಂತೆ ಪೂರ್ವಪಶ್ಚಿಮಗಳಲ್ಲಿ ಒಂದೊಂದು ಕಂಬಸಾಲಿನ ಹಜಾರಗಳು;

ಕಲ್ಲು ಕಟ್ಟಡ ಒಂದು ಬಾವಿ ಮತ್ತು ಒಂದು ಏಕಶಿಲಾನಿರ್ಮಿತ ತೊಟ್ಟಿಗಳಿವೆ. ಮಧ್ಯದ ಮುಖ್ಯ ಭವನವು ನಯಗೊಳಿಸಿದ ಗ್ರಾನೈಟ್ ಶಿಲಾಬಂಡೆಗಳನ್ನು ಉಪಯೋಗಿಸಿ ಕಟ್ಟಲಾದ ಎರಡು ಅಲಂಕೃತ ಆಧಿಷ್ಠಾನಗಳ ಮೇಲೆ ನಿರ್ಮಿತವಾಗಿದೆ. ಇದರ ಒಳಭಾಗವು ಕ್ರಮೇಣ ಕಿರಿದಾಗುವ ಮೂರು ಹಂತಗಳಾಗಿ ವಿಭಜಿಸಲ್ಪಟ್ಟಿದ್ದು ಪ್ರತಿ ಹಂತವೂ ಅಲಂಕೃತ ಆಧಿಷ್ಠಾನವನ್ನು ಹೊಂದಿದೆ. ಅತ್ಯಂತ ಕಿರಿದಾದ ಮೇಲಿನ ಹಂತವು ಭವನದ ದಕ್ಷಿಣಭಾಗದಲ್ಲಿದೆ. ಪ್ರತಿಹಂತವನ್ನು ತಲುಪಲೂ ಮಧ್ಯದಲ್ಲಿ ಅಲಂಕೃತ ವ್ಯಾಲಕಟಾಂಜನವುಳ್ಳ ಸೋಪಾನಗಳಿವೆ. ಕೆಳಗಿನೆರಡು ಹಂತಗಳು ಕ್ರಮವಾಗಿ ಕಂಬಸಾಲಿನ ಹಜಾರ ಮತ್ತು ವರಾಂಡದ ರೂಪದಲ್ಲಿದ್ದು, ಮೇಲಿನ ತಲದಲ್ಲಿ ಮಧ್ಯದಲ್ಲಿ ಒಂದು ಕೊಠಡಿ, ಅದರ ಸುತ್ತಲೂ ಪ್ರದಕ್ಷಿಣಾಪಥದಂತಹ ದಾರಿ, ಆ ದಾರಿಗೆ ತೆರೆದುಕೊಳ್ಳುವಂತೆ ಪೂರ್ವ, ಪಶ್ಚಿಮ ಹಾಗೂ ದಕ್ಷಿಣದಲ್ಲಿ ಒಂದೊಂದು ಕೊಠಡಿ ಹೀಗೆ ನಾಲ್ಕು ಕೊಠಡಿಗಳಿವೆ. ಸುತ್ತಣ ದಾರಿಯಿಂದಲೇ ಉಳಿದ ಕೊಠಡಿಗಳಿಗೆ ಹೋಗಲು ಬಾಗಿಲುಗಳಿವೆ. ಈ ಭವನದ ಆಗ್ನೇಯ ಭಾಗದಲ್ಲಿ ಶೌಚಾಲಯವೊಂದನ್ನೂ ಜೋಡಿಸಲಾಗಿದೆ.

ಈ ಸಮುಚ್ಚಯದ ಕಟ್ಟಡಗಳು ವ್ಯಾಪಕ ಅಗ್ನಿ ಅನಾಹುತಕ್ಕೀಡಾಗಿ ವಾಸ್ತುಭಾಗಗಳು ಚೆದುರಿ ಬಿದ್ದಿದ್ದವು. ಮೂಲ ವಾಸ್ತುಭಾಗಗಳನ್ನು ಹುಡುಕಿ, ಸಾಧ್ಯವಾದ ಮಟ್ಟಿಗೆ ಅವುಗಳನ್ನು ಉಪಯೋಗಿಸಿ ಪುನರ್ಜೋಡಣೆ ಮಾಡಿ ಸಂರಕ್ಷಿಸಲಾಗಿದೆ[31].

- **ಭವನ–2:**

ಪ್ರಸನ್ನ ವಿರೂಪಾಕ್ಷ ದೇವಾಲಯದ ಈಶಾನ್ಯದಲ್ಲಿ ಅಷ್ಟೇನು ಎತ್ತರವಿಲ್ಲದ ಪ್ರಾಕಾರದೊಳಗೆ ನಿರ್ಮಿತವಾದ ಈ ಭವನವು ಪೂರ್ವಾಭಿಮುಖವಾಗಿದೆ. ಪ್ರಾಕಾರದ ಮಧ್ಯ ಭಾಗದಲ್ಲೊಂದು ಮುಖ್ಯ ಕಟ್ಟಡ, ಅದರ ಸುತ್ತಲೂ ಗಾರೆಯ ನಯಗೊಳಿಸಿದ ದಾರಿ ಹಾಗೂ ಕೆಳಮಟ್ಟದ ಒಂದು ಮೊಗಸಾಲೆಯಿದ್ದು; ಉತ್ತರ, ದಕ್ಷಿಣ ಮತ್ತು ಪಶ್ಚಿಮಗಳಲ್ಲಿ ಕಾವಲುಗಾರರ ಕೊಠಡಿಯ ಸಾಲುಗಳಿವೆ. ಮುಖ್ಯಕಟ್ಟಡವನ್ನು ಎರಡು ಅಲಂಕೃತ ಆಧಿಷ್ಠಾನಗಳ ಮೇಲೆ ಕಟ್ಟಲಾಗಿದ್ದು, ಒಳಭಾಗವು ಕಿರು ಆಧಿಷ್ಠಾನ ಹೊಂದಿರುವ ನಾಲ್ಕು ಹಂತಗಳಾಗಿ ವಿಭಜಿತವಾಗಿದೆ. ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಹೋಗಲು ಪಾರ್ಶ್ವಗಳಲ್ಲಿ ವಾಲಕಟಾಂಜನವಿರುವ ಸೋಪಾನಗಳಿವೆ. ಮೊದಲನೆಯ ಹಂತದಿಂದ ಎರಡನೆಯ ಹಂತಕ್ಕೆ ಹೋಗಲು ಸೋಪಾನವು ಮಧ್ಯದಲ್ಲಿದ್ದರೆ ಉಳಿದೆಡೆ ಪಾರ್ಶ್ವಗಳಲ್ಲಿವೆ. ಮೊದಲ ಮೂರು ಹಂತಗಳು ವಿಶಿಷ್ಟ ರೀತಿಯ ೧ – ಆಕಾರದ ಹಜಾರವನ್ನು ಹೊಂದಿದ್ದರೆ ನಾಲ್ಕನೆಯ ಹಂತದ ಮಧ್ಯದಲ್ಲಿ ಪ್ರದಕ್ಷಿಣಾಪಥದಂತಹ ಮಾರ್ಗದಿಂದಾವೃತವಾದ ಕೊಠಡಿಯಿದೆ.

- **ಭವನ–3:**

ಮೇಲೆ ವಿವರಿಸಲಾದ ಭವನಗಳಗಿಂತ ಗಾತ್ರದಲ್ಲಿ ಕಿರಿದಾದ ಈ ಭವನದಲ್ಲಿ ಆಯತಾಕಾರದ ಒಂದೇ ಕಟ್ಟಡವಿದ್ದು ಸುತ್ತಲೂ ದೊಡ್ಡಗಾತ್ರದ ಕಲ್ಲುಗಳಿಂದ ಕಟ್ಟಿದ ಎತ್ತರದ ಪ್ರಾಕಾರವಿದೆ. ಮಧ್ಯದ ಕಟ್ಟಡದಲ್ಲಿ ಒಂದರ ಹಿಂದೆ ಇನ್ನೊಂದು ಇರುವಂತೆ ಕೇವಲ ಎರಡು ಹಜಾರಗಳವೆ. ಮುಂದಿರುವ ಆಯತಾಕಾರದ ಹಜಾರವು ತಗ್ಗಿನಲ್ಲಿದ್ದು, ಹಿಂದಿರುವ ಚೌಕಾಕಾರದ ಹಜಾರಕ್ಕಿಂತ ಚಿಕ್ಕದಾಗಿದೆ. ಮುಂದಿನ ಹಜಾರವನ್ನು ಪ್ರವೇಶಿಸಲು ಸೋಪಾನವು ಮಧ್ಯದಲ್ಲಿದ್ದರೆ ಹಿಂದಿನದಕ್ಕೆ ಪಾರ್ಶಗಳಲ್ಲಿವೆ. ಹಿಂದಣ ಹಜಾರದ ಮಧ್ಯದಲ್ಲಿ ಒಂದೇ ಬಾಗಿಲಿರುವ ದೊಡ್ಡ ಆಯತಾಕಾರದ ಕೊಠಡಿಯಿದೆ. ಮುಂದಿನ ಹಜಾರದ ಅಧಿಷ್ಠಾನವು ಅಲಂಕೃತವಾಗಿದ್ದು, ನಯಗೊಳಿಸಿದ ಕಲ್ಲುಗಳಿಂದ ನಿರ್ಮಿತವಾಗಿದ್ದರೆ; ಹಿಂದಿನದು ಕಲ್ಲು, ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲ್ಪಟ್ಟು ದೇವಾಲಯಗಳ ಆಧೀಷ್ಠಾನವನ್ನು ಹೋಲುತ್ತದೆ. ಗೋಡೆಗಳನ್ನು ಒರಟು ಬಂಡೆಗಲ್ಲುಗಳಿಂದ ಕಟ್ಟಲಾಗಿದ್ದರೂ ಕೊಠಡಿಗಳ ನಡುವಣ ಮಾರ್ಗ ಹಾಗೂ ಮುಂದಣ ಅಂಗಳದ ನೆಲಗಟ್ಟನ್ನು ಗಾರೆಹಾಕಿ ನಯಗೊಳಿಸಿದೆ[32].

ಈ ಭವನವೂ ಸಹ ವ್ಯಾಪಕ ಅಗ್ನಿ ಅನಾಹುತಿಕ್ಕೀಡಾಗಿದ್ದು ಇಲ್ಲಿ ದೊರೆತ ಆರೆಸುಟ್ಟ ಮರದ ಕಂಬ ತೊಲೆ ಮತ್ತು ಛಾವಣಿಯ ಭಾಗಗಳಿಂದ ವಿಜಯನಗರದ ಕಾಲದ ಕಟ್ಟಡಗಳ ಛಾವಣಿನಿರ್ಮಾಣ ಪದ್ಧತಿಯ ಬಗೆಗೆ ಹೆಚ್ಚಿನ ಮಾಹಿತಿ ದೊರೆತಿದೆ.

ಗೊಡೆಗಳ ಒಳಮೈಯಿಂದ ಸ್ವಲ್ಪ ಹೊರಚಾಚಿದ ಮರದ ಅರೆಗಂಬಗಳನ್ನು ನಿಲ್ಲಿಸಿ, ಅದರ ಮೇಲೆ ತೊಲೆ ಹಾಗೂ ದೂಲಗಳನ್ನು ಬಿಗಿಯಲಾಗುತ್ತಿತ್ತು. ಇದರ ಮೇಲೆ ಬಿದಿರಿನ ದಪ್ಪ ಚಾಪೆಯನ್ನು ಹಾಸಿ, ಮೇಲೆ ಉದ್ದೇಶ ಹಾಗೂ ಉಪಯೋಗಕ್ಕೆ ತಕ್ಕಂತೆ ಬೇಕಾದ ದಪ್ಪದ ಸುಣ್ಣಕಲ್ಲಿನ ಜಲ್ಲಿಗಾರೆಯ ಪದರವನ್ನು ಹಾಕಿ ಗಾರೆಯ ಪದರಗಳ ಮೂಲಕ ನಯ ಮಾಡಲಾಗುತ್ತಿತ್ತು.

- **ಭವನ–4:**

ಮೇಲೆ ವಿವರಿಸಲಾದ ಭವನದ ಅಗ್ನೇಯದಲ್ಲಿರುವ ಈ ಭವನವು ತಲವಿನ್ಯಾಸ ಹಾಗೂ ವಿಸ್ತಾರದಲ್ಲಿ ಭವನ–3ನ್ನು ಹೋಲುತ್ತಿದ್ದರೂ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ ಕೂಡಿದೆ. ಮೂರು ಹಂತಗಳಲ್ಲಿರುವ ಈ ಭವನದ ಮೊದಲ ಹಂತದ ಮುಂಭಾಗದಲ್ಲಿ ವಿಶಾಲವಾದ ᑎ – ಆಕಾರದ ಅಂಗಳವಿದೆ. ಅಂಗಳದಿಂದ ಮೊದಲ ಹಂತಕ್ಕೆ ಹೋಗಲು ಮಧ್ಯೆ ಹಾಗೂ ಪಕ್ಕಗಳಲ್ಲಿ ಸೋಪಾನಗಳಿವೆ. ವೇದಿಕೆ ಹಾಗೂ ವರಾಂಡಗಳ ನೆಲವನ್ನು ವಿಶೇಷ ರೀತಿಯ ಗಾರೆಯಿಂದ ನಯಗೊಳಿಸಲಾಗಿದೆ. ವೇದಿಕೆ ಬಹುಶಃ ಮರದ ಎತ್ತರದ ಛಾವಣಿ ಇದ್ದಿರಬೇಕು. ಆ ಛಾವಣಿಗೆ ಆಧಾರವಾಗಿದ್ದ ಕಂಬಗಳ ಕಲ್ಲಿನ ಸ್ತಂಭ ಪೀಠಗಳು ಮಾತ್ರ ಉಳಿದಿವೆ[33].

ಎರಡನೆಯ ಹಂತವನ್ನು ತಲುಪಲು ವೇದಿಕೆಯ ತುದಿಗಳಲ್ಲಿ ಎರಡು ಸೋಪಾನಗಳಿವೆ. ಇಲ್ಲಿರುವ ವೇದಿಕೆಯ ಮೇಲೂ ಸಮಾನಾಂತರಗಳಲ್ಲಿರುವ ಅನೇಕ ಸ್ತಂಭಪೀಠಗಳು ಕಂಡುಬಂದಿದ್ದು, ಇವು ಸಹ ಮೇಲೆ ಹೇಳಿದಂತಹ ಛಾವಣಿಯನ್ನೇ

ಸೂಚಿಸುತ್ತವೆ. ಈ ವೇದಿಕೆಗೆ ಹೊಂದಿಕೊಂಡಂತೆ ಉತ್ತರ, ದಕ್ಷಿಣಗಳಲ್ಲಿ ಒಂದೊಂದು ಕೊಠಡಿಯಿದೆ, ಈ ಕೊಠಡಿಗಳ ಗೋಡೆಗಳನ್ನು ನಯಗೊಳಿಸಿದ ಶಿಲಾಖಂಡಗಳಿಂದ ನಿರ್ಮಿಸಿ, ಗಾರೆಯಿಂದ ನಯಗೊಳಿಸಲಾಗಿದೆ. ಹೊರಗೋಡೆಗಳ ಮೇಲೆ ಗಚ್ಚುಗಾರೆಯ ಅಲಂಕರಣವಿದೆ. ವೇದಿಕೆಯ ಹಿಂಭಾಗದಲ್ಲಿ ಕಲ್ಲಿನ ಚಿಕ್ಕ ಆಧಿಷ್ಠಾನವೊಂದಿದ್ದು, ಮಧ್ಯದಲ್ಲಿರುವ ಸೋಪಾನದ ಮೂಲಕ ಅದನ್ನು ತಲುಪಬಹುದು. ಈ ಆಧಿಷ್ಠಾನದ ಸುತ್ತಲೂ ಪ್ರದಕ್ಷಿಣಾಪಥದಂತಹ ಮಾರ್ಗವಿದ್ದು; ನಾಲ್ಕೂ ಮೂಲೆಗಳಲ್ಲಿರುವ ಸ್ತಂಭಪೀಠಗಳಿಂದ ಊಹಿಸಲಾಗುವಂತೆ ಬಹುಶಃ ಇದು ಮರದ ಚಪ್ಪರದ ರೀತಿಯ ಛಾವಣಿಯಿಂದ ಅವೃತವಾಗಿತ್ತು.

ಭವನ–4ರ ಉತ್ತರಕ್ಕಿರುವ ಆಯತಾಕಾರದ ಕಟ್ಟಡವು ಮೇಲೆ ವಿವರಿಸಲಾದ ಎಲ್ಲ ಭವನಗಳಿಗಿಂತ ಭಿನ್ನರೀತಿಯದಾಗಿದೆ. ನಾಲ್ಕು ಕಡೆ ಗೋಡೆಯಿಂದಾವೃತವಾಗಿದ್ದು, ವಿಶಾಲವಾದ ಈ ಕಟ್ಟಡವು ಪೂರ್ವಾಭಿಮುಖವಾಗಿದೆ. ಇದರ ಪಶ್ಚಿಮದ ಗೋಡೆಯುದ್ದಕ್ಕೂ ಸಮಾನಂತರಗಳಲ್ಲಿ, ಆಯತಾಕಾರದ ಕುಳಿಗಳಿದ್ದು, ಬಹುಶಃ ಮರದ ಅರೆಗಂಬಗಳಿದ್ದುವೆಂದು ಸೂಚಿಸುತ್ತವೆ. ಈ ಕಟ್ಟಡದ ವೈಶಿಷ್ಟ್ಯ ಹಾಗೂ ಉಳಿದ ಭವನಗಳೊಂದಿಗಿನ ಇದರ ಸಂಬಂಧವನ್ನು ನಿಖರವಾಗಿ ಊಹಿಸುವುದು ಕಷ್ಟ, ಆದರೂ ಕಡುಗೆಂಪು ಬಣ್ಣದ ನುಣ್ಣನೆಯ ಮಣ್ಣಿನ ನೆಲ ಹಾಗೂ ಇಲ್ಲಿ ದೊರಕಿರುವ ದೊಡ್ಡಗಾತ್ರದ ತೂಕದಬಟ್ಟನಂತಹ ಶಿಲಾವಸ್ತುವಿನ ಆಧಾರದ

ಮೇಲೆ ಈ ಕಟ್ಟಡವು ಬಹುಶಃ ವ್ಯಾಯಾಮಶಾಲೆಯಾಗಿದ್ದಿರಬಹುದೆಂದು ಊಹಿಸಬಹುದು.

ಈ ವ್ಯಾಯಾಮಶಾಲೆಯ ಉತ್ತರ ಹಾಗೂ ಪಶ್ಚಿಮದಿಕ್ಕುಗಳಲ್ಲಿ ಅಂಕುಡೊಂಕಾಗಿ ಬಳಸಿಕೊಂಡು ಹೋಗುವ ಎತ್ತರವಾದ ಪ್ರಾಕಾರವಿದೆ. ವ್ಯಾಯಾಮಶಾಲೆಯ ಪಶ್ಚಿಮದ ಗೋಡೆ ಹಾಗೂ ಪ್ರಾಕಾರದ ನಡುವಣ ಜಾಗದಲ್ಲಿ ವಿಶಿಷ್ಟರೀತಿಯ ಸೌಲಭ್ಯಗಳಿಂದ ಕೂಡಿದ ಶೌಚಾಲಯವೊಂದು ಬೆಳಕಿಗೆ ಬಂದಿದೆ. ದಕ್ಷಿಣಾಭಿಮುಖವಾದ ಈ ಶೌಚಾಲಯಕ್ಕೆ ನಾಲ್ಕನೆಯ ರಾಜಪ್ರಮುಖರ ಭವನದಿಂದಲೂ ಬಾಗಿಲಿದ್ದು, ಹಂಪಿಯ ಉತ್ಖನನದಲ್ಲಿ ಇದುವರೆಗೆ ಬೆಳಕಿಗೆ ಬಂದಿರುವ ಎಲ್ಲ ಶೌಚಾಲಯಗಳಿಗಿಂತ ಉತ್ತಮ ರೀತಿಯಲ್ಲಿ ನಿರ್ಮಿತವಾಗಿದ್ದು ಅಷ್ಟೇ ಉತ್ತಮ ಸ್ಥಿತಿಯಲ್ಲಿ ಉಳಿದು ಬಂದಿರುವ ಒಂದೇ ಉದಾಹರಣೆಯಾಗಿದೆ. ಇದರ ನಿರ್ಮಿತಿಯಲ್ಲಿನ ವೈಶಿಷ್ಟ್ಯಗಳು ವಿಜಯನಗರ ಕಾಲದಲ್ಲಿ ಒಳಚರಂಡಿ ಮತ್ತು ನೈರ್ಮಲ್ಯ ವ್ಯವಸ್ಥೆ ಮುಂತಾದ ಸಾರ್ವಜನಿಕ ಆರೋಗ್ಯ ತತ್ತ್ವಗಳಿಗೆ ನೀಡುತ್ತಿದ್ದ ಮಹತ್ವಕ್ಕೆ ಉದಾಹರಣೆಯಾಗಿವೆ[34].

ಮೇಲೆ ವಿವರಿಸಲಾದ ರಾಜಪ್ರಮುಖರ ಭವನಗಳು ಮತ್ತಿತರ ಕಟ್ಟಡಗಳೇ ಅಲ್ಲದೆ ರಾಜ್ಯ ಪುರಾತತ್ತ್ವ ಇಲಾಖೆಯ ಅನೇಕ ಕಟ್ಟಡಗಳನ್ನು ಪ್ರಕಾಶ ಪಡಿಸುತ್ತಲಿದ್ದು ಅವು ಉತ್ಖನನದ ವಿವಿಧ ಹಂತಗಳಲ್ಲಿವೆ.

**ಜೈನದೇವಾಲಯ ಸಂಕೀರ್ಣ:**

ಗಜಶಾಲೆಯ ಹಿಂಭಾಗದಲ್ಲಿರುವ, ಶಾಸನಗಳಲ್ಲಿ 'ಕ್ರಮುಕಪರ್ಣಾಪಣ ವೀಥಿ' ಅಥವಾ 'ಪರ್ಣಪೂಗೀಫಲಾಪಣ ವೀಥಿ' (ಪಾನ್–ಸುಪಾರಿ ಬಜಾರ್) ಎಂದು ಉಲ್ಲೇಖಿಸಲ್ಪಟ್ಟಿರುವ ರಸ್ತೆಯಲ್ಲಿರುವ ಜೈನದೇವಾಲಯ ಸಂಕೀರ್ಣದಲ್ಲಿ ನಡೆದಿರುವ ಉತ್ಖನನದಲ್ಲಿ ಅರ್ಧ ಮುಚ್ಚಿಹೋಗಿದ ನಾಲ್ಕು ದೇವಾಲಯಗಳನ್ನು ಬೆಳಕಿಗೆ ತರಲಾಗಿದೆ. ಈ ನಾಲ್ಕರಲ್ಲಿ ಎರಡು ಜೈನಸಂಪ್ರದಾಯಕ್ಕೂ ಉಳಿದವುಗಳಲ್ಲಿ ಕ್ರಮವಾಗಿ ಒಂದೊಂದು ಶೈವ ಹಾಗೂ ವೈಷ್ಣವ ಸಂಪ್ರದಾಯಗಳಿಗೂ ಸಂಬಂಧಿಸಿದವು. ನಾಲ್ಕು ದೇವಾಲಯಗಳ ತಲವಿನ್ಯಾಸಗಳು ಪೂರ್ಣರೂಪದಲ್ಲಿ ದೊರೆತಿದ್ದರೂ, ಊರ್ಧ್ವವಿನ್ಯಾಸದ ಹಲವಾರು ಭಾಗಗಳು ಭಗ್ನವಾಗಿರುವ ಈ ದೇವಾಲಯಗಳು ಬಹುಜೀರ್ಣಾವಸ್ಥೆಯಲ್ಲಿವೆ[35].

ಉತ್ಖನನದ ಆರಂಭದಲ್ಲಿ ಉದ್ದೇಶಿಸಿದ್ದಂತೆ ಈ ದೇವಾಲಯಗಳ ನಡುವೆ ಹಾದು ಶೃಂಗಾರದಹೆಬ್ಬಾಗಿಲು ಹಾಗೂ ಹಜಾರರಾಮ ದೇವಾಲಯಗಳನ್ನು ಸೇರಿಸುವಂತೆ ರಚಿತವಾಗಿರಬಹುದಾದಂತಹ ಬಜಾರಿನ ಬಗೆಗೆ ಹೆಚ್ಚಿನ ಮಾಹಿತಿ ದೊರೆಯಲಿಲ್ಲ. ಪ್ರಸಕ್ತ ಭೂನೆಲೆಯಿಂದ ಸುಮಾರು ಆರುಮೀಟರ್ ಆಳದವರೆಗೆ ನಡೆಸಿದ ಉತ್ಖನನದಲ್ಲಿಯೂ ಗ್ರನೈಟ್ ಶಿಲೆಯ ಹಾಸುಗಲ್ಲುಗಳ ರಸ್ತೆಯ ಯಾವೊಂದು ಕುರುಹೂ ಬೆಳಕಿಗೆ ಬರಲಿಲ್ಲ. ಇದರಿಂದ ಇನ್ನೊಂದು ವಾದಕ್ಕೆ ಪುಷ್ಟಿ ದೊರೆಯುತ್ತದೆ. ಜೈನದೇವಾಲಯ ಸಂಕೀರ್ಣವು ಅಂತಃಪುರಕ್ಕೆ ಸಮೀಪದಲ್ಲಿರುವುದರಿಂದ ಅನಪೇಕ್ಷಿತ ಜನಜಂಗುಳಿ

ಹಾಗೂ ಗಲಭೆಯನ್ನು ತಪ್ಪಿಸಲು ಶೃಂಗಾರದ ಹೆಬ್ಬಾಗಿಲಿನಿಂದ ಅರಂಭವಾಗುವ ಮುಖ್ಯರಸ್ತೆಯು ಜೈನದೇವಾಲಯ ಸಂಕೀರ್ಣದ ನಾಲ್ಕನೆಯ ದೇವಾಲಯವಾದ ವಿಷ್ಣುದೇವಾಲಯದ ಬಳಿ ಕವಲೊಡೆದು; ಅವುಗಳಲ್ಲಿ ಎಡಗಡೆಯ ರಸ್ತೆಯು ಜೈನದೇವಾಲಯಗಳು, ರಂಗದೇವಾಲಯ (ಮಾಧವರಾಯನ ಗುಡಿ) ಹಾಗೂ ಅದರ ಪಶ್ಚಿಮಕ್ಕಿರುವ ಕಟ್ಟಡಗಳ ಅವಶೇಷಗಳನ್ನು ಸುತ್ತುವರೆದು ಪೂರ್ವದಿಕ್ಕಿನಿಂದ ಹಜಾರ ರಾಮ ದೇವಾಲಯವನ್ನು ಸೇರುವಂತಯೂ; ಬಲಭಾಗದ ರಸ್ತೆಯು ಗಜಶಾಲೆ, ಅಂಗರಕ್ಷಕರ ವಾಸಗೃಹ, ಅಂತಃಪುರ ಮುಂತಾದ ಕಟ್ಟಡಗಳನ್ನು ಬಳಸಿಕೊಂಡು ಉತ್ತರದಿಕ್ಕಿನಿಂದ ಅದೇ ದೇವಾಲಯವನ್ನು ಸೇರುವಂತಿಯೂ ವಿನ್ಯಾಸಗೊಂಡಿರಬೇಕು. ಇದಲ್ಲದೆ ಪಾನ್–ಸುಪಾರಿ ಬಜಾರಿನ ಹೆಸರು ಹೆಚ್ಚು ಅರ್ಥಪೂರ್ಣವಾಗುವಂತೆ ಇಲ್ಲಿನ ಉತ್ಖನನದಲ್ಲಿ ಬೇಯಿಸಿದ ಗೋಟು ಅಡಿಕೆಯ ಹೋಳುಗಳು ಸಾಕಷ್ಟು ಪ್ರಮಾಣದಲ್ಲಿ ದೊರಕಿದವು[36].

**ಬಜಾರುಗಳು**:

ವಿಶಿಷ್ಟರೀತಿಯಲ್ಲಿ ಯೋಚಿಸಿ, ರೂಪಿಸಿದ ಇಲ್ಲಿನ ರಾಜಮಾರ್ಗ ಅಥವಾ ಬಜಾರುಗಳು ಈ ರಾಜಧಾನಿಯ ನಗರ ವಿನ್ಯಾಸವು ಪ್ರಪಂಚಾದ್ಯಂತ ಪ್ರಸಿದ್ಧಿಗೆ ಬರಲು ಕಾರಣವಾದ ಕೆಲವು ವಿಶೇಷ ಲಕ್ಷಣಗಳಲ್ಲಿ ಒಂದು[37]. ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿ ಇಲ್ಲಿಗೆ ಆಗಮಿಸಿದ್ದ ವಿದೇಶೀ ಪ್ರವಾಸಿಗರು ಸಹ ಅಂದಿನ ಪ್ರಮುಖ

ಬಜಾರುಗಳ ವೈಭವದ ಒಂದು ಚಿತ್ರಣವನ್ನು ನೀಡಿದ್ದಾರೆ. ಈ ಬಜಾರುಗಳಲ್ಲಿ ವಿವಿಧ ಉದ್ಯೋಗ, ಕುಶಲ ಕರ್ಮಗಳಿಗೆ ಸಂಬಂಧಿಸಿದಂತೆ ನಾನಾವರ್ಗದ ವರ್ತಕರು ಅತ್ಯುತ್ತಮ ರೀತಿಯ ಸರಕುಗಳಿರುವ ತಮ್ಮ ಅಂಗಡಿಗಳನ್ನು ಹೊಂದಿದ್ದರಲ್ಲದೆ, ವಜ್ರಾಭರಣಗಳ ವ್ಯಾಪಾರಿಗಳು ಮುತ್ತು, ರತ್ನ, ವೈಢೂರ್ಯಗಳನ್ನು ಮುಕ್ತವಾಗಿ ವ್ಯಾಪಾರಮಾಡುತ್ತಿದ್ದರು[38].

ಹಂಪಿಯ ಪ್ರಸಿದ್ಧ ಬಜಾರುಗಳಾದ ವಿರೂಪಾಕ್ಷಬಜಾರ್, ವಿಠ್ಠಲಬಜಾರ್, ಕೃಷ್ಣಬಜಾರ್ ಮತ್ತು ಪಾನ್-ಸುಪಾರಿಬಜಾರ್‌ಗಳಲ್ಲಿ ನಡೆಸಿದ ಸ್ಥಳ ಪರಿಶೋಧನೆಯಿಂದ ಈ ಬಜಾರುಗಳು, ಪಾರ್ಶ್ವಗಳಲ್ಲಿನ ಹಲವಂತಸ್ತಿನ ಮಂಟಪಗಳೂ ಸೇರಿದಂತೆ ಬಹಳಷ್ಟು ಶಿಥಿಲವಾಗಿ, ಮಣ್ಣಿನೊಳಗೆ ಮುಚ್ಚಿಹೋಗಿದ್ದ ಅಂಶ ಬೆಳಕಿಗೆ ಬಂದಿತು. ಪ್ರಮುಖ ದೇವಾಲಯಗಳ ಮುಂದಿನ ಮಾರ್ಗಗಳ ವಿನ್ಯಾಸ, ನಿರ್ಮಾಣಪದ್ಧತಿ ಮೊದಲಾದ ಅಂಶಗಳ ಬಗೆಗೆ ಹೆಚ್ಚಿನ ಮಾಹಿತಿ ದೊರಕಿಸಿಕೊಳ್ಳುವುದರ ಸಲುವಾಗಿ ಮತ್ತು ಕೆಲವಾದರೂ ಪ್ರಾಚೀನ ಮಾರ್ಗಗಳನ್ನು ಮೊದಲಿನ ಸ್ಥಿತಿಯಲ್ಲಿಟ್ಟು ಸಂರಕ್ಷಿಸುವ ಸಲುವಾಗಿ ಈ ಮುಖ್ಯ ಬಜಾರುಗಳಲ್ಲಿ ಉತ್ಖನನ ನಡೆಸಲಾಯಿತು[39].

**ಅಡಿಟಿಪ್ಪಣಿಗಳು;**

1. ಎಂ. ಎಲ್. ಶಿವಶಂಕರ, ವಿಜಯನಗರ ಅಧ್ಯಯನ, ಸಂಪುಟ-2, ಪು.47

2. ಅದೇ, ಪು.51

3. ಎಂ. ಎಲ್. ಶಿವಶಂಕರ, ವಿಜಯನಗರ ಅಧ್ಯಯನ, ಸಂಪುಟ-3, ಪು.63

4. ಅದೇ, ಪು.71

5. ಎಂ. ಎಲ್. ಶಿವಶಂಕರ, ವಿಜಯನಗರ ಅಧ್ಯಯನ, ಸಂಪುಟ–4, ಪು.13

6. ಅದೇ, ಪು.51

7. ಎಂ. ಎಲ್. ಶಿವಶಂಕರ, ವಿಜಯನಗರ ಅಧ್ಯಯನ, ಸಂಪುಟ–4, ಪು.21

8. ಅದೇ, ಪು.23

9. ಎಂ. ಎಲ್. ಶಿವಶಂಕರ, ವಿಜಯನಗರ ಅಧ್ಯಯನ, ಸಂಪುಟ–5, ಪು.07

10. ಅದೇ, ಪು.31

11. ಎಸ್.ವೈ. ಸೋಮಶೇಖರ್, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ, ಪು.67

12. ಅದೇ, ಪು.71

13. ಕೆ. ಕುಶಾಲಪ್ಪ (ಅನು.), ಮಧುರಾ ವಿಜಯಂ, ಪು.41

14. ಅದೇ, ಪು.49

15. ಲಕ್ಷ್ಮಣ್ ತೆಲಗಾವಿ (ಸಂ), ರಾಮರಾಜನಬಖೈರು, ಪು.114

16. ಅದೇ, ಪು.115

17. ಗುರುಮೂರ್ತಿ ಪೆಂಡಕೂರು, ಭಗ್ನ ವಿಜಯನಗರ ಚರಿತ್ರೆ, ಪು.45

18. ಅದೇ, ಪು.64

19. ಬಿ.ಎ. ವಿವೇಕ ರೈ (ಸಂ), ಪು.36

20. ಅದೇ, ಪು.42

21. ಅದೇ, ಪು.57

22. ಎಂ. ಕೊಟ್ರೇಶ್, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪು. 44

23. ಅದೇ, ಪು.51

24. ಅದೇ, ಪು.63

25. ಅದೇ, ಪು.74

26. ಜಿ.ಎಸ್. ದೀಕ್ಷಿತ್, ಸಂಗಮರ ಕಾಲದ ವಿಜಯನಗರ, ಪು. 111

27. ಅದೇ, ಪು.117

28. ಅದೇ, ಪು.121

29. ಸದಾನಂದ ಕನವಳ್ಳಿ, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು.45

30. ಅದೇ, ಪು. 65

31. ಅದೇ, ಪು.121

32. ಎನ್. ಚಿನ್ನಸ್ವಾಮಿ, ಸಾಮ್ರಾಜ್ಯ ಮತ್ತು ಸಂಸ್ಥಾನ, ಪು.151

33. ಅದೇ, ಪು.161

34. ಎಚ್.ಎಂ. ನಾಗರಾಜು, ವಿಜಯನಗರದ ಇಮ್ಮಡಿದೇವರಾಯ, ಪು.203

35. ಅದೇ, ಪು.205

36. ಅದೇ, ಪು.217

೩7. ಎನ್. ವೆಂಕಟರಮಣಯ್ಯ, ವಿಜಯನಗರ ಚರಿತ್ರೆ, ಪು.125

೩8. ಅದೇ, ಪು.131

೩9. ಅದೇ, ಪು.139

# ಅಧ್ಯಾಯ 6

# ಸಮಾರೋಪ

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ, ದಕ್ಷಿಣ ಭಾರತದ ಇತಿಹಾಸದಲ್ಲಿ ಅದ್ವಿತೀಯವಾದ ಘಟನೆ. ಇಲ್ಲಿನ ರಾಜಕೀಯ ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಸಾಮ್ರಾಜ್ಯದ ಆವಿರ್ಭಾವವಾಯಿತು. ಈ ವೇಳೆಗೆ ಉತ್ತರ ಭಾರತವೆಲ್ಲಾ ಸಂಪೂರ್ಣವಾಗಿ ಮುಸ್ಲಿಮರ ಆಡಳಿತಕ್ಕೆ ಒಳಪಟ್ಟಿದ್ದುದಲ್ಲದೆ, ಅವರ ಹಿಡಿತ ದಕ್ಷಿಣದ ಕಡೆಗೂ ವ್ಯಾಪಿಸತೊಡಗಿತ್ತು. ಹೊಯ್ಸಳ ಸಾಮ್ರಾಜ್ಯದ ಅವನತಿ ಆಗಲೇ ನಿರ್ಧಾರವಾಗಿತ್ತು. ಮಲಿಕ ನಯೆಬ ಕಫುರ್ ದಕ್ಷಿಣದ ಕಡೆಗೆ ದಂಡೆತ್ತಿಬಂದು ವಿಜಯ ದುಂದುಭಿಯನ್ನು ಬಾರಿಸತೊಡಗಿದ್ದನು. ದೆಹಲಿಯ ಸುಲ್ತಾನ ಮಹಮ್ಮದ್ ಬಿನ್ ತೊಗಲಕ್‌ನ ಕಾಲದಲ್ಲಿ ಈ ಭೀತಿ ಇನ್ನೂ ಹೆಚ್ಚಿತು. ದೇಶವೆಲ್ಲಾ ಅವ್ಯವಸ್ಥಿತವಾಯಿತು. ಅತ್ಯಂತ ಸುಸಂಘಟಿತವೂ ಸುಸಜ್ಜಿತವೂ ಆದ ರೀತಿಯಲ್ಲಿ ಅದನ್ನು ಎದುರಿಸದೇ ಹೋಗಿದ್ದರೆ, ದಕ್ಷಿಣ ದೇಶವೂ ಮಹಮ್ಮದೀಯರ ವಶವಾಗುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಆ ಅಪಾಯವನ್ನರಿತು ಅದನ್ನು ಎದುರಿಸಿ ಹಿಂದೂ ರಾಜ್ಯವನ್ನೂ, ಧರ್ಮವನ್ನೂ, ಸಂರಕ್ಷಿಸುವುದಕ್ಕಾಗಿಯೇ ದೀಕ್ಷೆವೆತ್ತು ಸ್ಥಾಪಿತವಾಯಿತು ಧರ್ಮ ಸಾಮ್ರಾಜ್ಯ ವಿಜಯನಗರ ಸಾಮ್ರಾಜ್ಯ.

ಇದು ಸ್ಥಾಪನೆಯಾದ ಬಗೆಯನ್ನು ಕುರಿತು ಏಕಾಭಿಪ್ರಾಯವಿಲ್ಲ. ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಈ ಸಾಮ್ರಾಜ್ಯಕ್ಕೆ ಪ್ರಮುಖ ಕಾರಣಕರ್ತರೆಂಬ ವಿಚಾರದಲ್ಲಿಯಾವ ಸಂದೇಹವೂ ಇಲ್ಲ; ಉಳಿದ ಕೆಲವು ವಿವರಗಳಲ್ಲಿ

ಭಿನ್ನಾಭಿಪ್ರಾಯಗಳಿವೆ. ಈ ವಿಚಾರದಲ್ಲಿ ರಾಬರ್ಟ ಸಿವೆಲ್‌ರವರು ಅಭಿಪ್ರಾಯ ಹೀಗಿದೆ: ಹರಿಹರ ಮತ್ತು ಬುಕ್ಕ ಸಹೋದರರು ಓರಂಗಲ್ಲಿನ ಪ್ರತಾಪರುದ್ರ ದೇವನ ಬಳಿಯಲ್ಲಿದ್ದರು. ಮುಸ್ಲಿಮರ ದಾಳಿಯಿಂದ ಓರಂಗಲ್ಲು ನಾಶವಾದ ಮೇಲೆ ಆನೆಗೊಂದಿಗೆ ಬಂದು ಅಲ್ಲಿ ಆಶ್ರಯವನ್ನು ಪಡೆದರು. ಮುಸ್ಲಿಮರ ಅತ್ಯಾಚಾರದಿಂದ ಅವರ ಮನಸ್ಸುನೊಂದಿತ್ತು. ದೇಶ ಮತ್ತು ಧರ್ಮ ರಕ್ಷಣೆಗೆ ಪ್ರತಿಜ್ಞೆ ಮಾಡಿದ್ದರು. ಆನೆಗೊಂದಿಗೆ ಬಂದು ಅಲ್ಲಿ ಕಂಪಿಲ ರಾಜನ ಬಳಿಯಲ್ಲಿ ಮಂತ್ರಿ ಮತ್ತು ಭಂಡಾರದ ಅಧಿಕಾರಿಗಳಾಗಿ ಸ್ಥಾನವನ್ನು ಪಡೆದರು. ಸುಮಾರು 1334ರಲ್ಲಿ ಬಹಾವುದ್ದೀನನಿಗೆ ಆಶ್ರಯವನ್ನು ಕೊಟ್ಟ ಕಾರಣಕ್ಕಾಗಿ ತುಘಲಕ್‌ನು ಆನೆಗೊಂದಿಯನ್ನೂ ಕಂಪಿಲ ದುರ್ಗವನ್ನೂ ಮುತ್ತಿ ಕಂಪಿಲರಾಯನನ್ನು ಸೋಲಿಸಿ ಅವುಗಳನ್ನು ವಶಪಡಿಸಿಕೊಂಡನು. ಅಲ್ಲಿ ತನ್ನ ಪ್ರತಿನಿಧಿಯನ್ನಾಗಿ ಮಲ್ಲಿಕ್ ಮಹಮ್ಮದ್‌ನನ್ನು ನೇಮಿಸಿ ದೆಹಲಿಗೆ ಹಿಂತಿರುಗಿದನು. ಮಹಮ್ಮದನಿಗೆ ಅಲ್ಲಿನ ಜನರನ್ನು ವಶದಲ್ಲಿಟ್ಟುಕೊಂಡು ಆಳುವುದು ಕಷ್ಟವಾಯಿತು. ರಾಜ್ಯವನ್ನು ಅವರಿಗೇ ಕೊಡಲೂ ಉದ್ದೇಶಿಸಿ, ಹರಿಹರನನ್ನು ರಾಜನನ್ನಾಗಿಯೂ, ಬುಕ್ಕನನ್ನು ಮಂತ್ರಿಯನ್ನಾಗಿಯೂ ನೆಮಿಸಿ ಹೊರಟುಹೋದನು. ಈ ಸಹೋದರರಿಂದಲೇ ಮುಂದೆ ವಿಜಜಯನಗರ ಸ್ಥಾಪಿತವಾಯಿತು – ಇದು ಅನೇಕ ಅಭಿಪ್ರಾಯಗಳನ್ನು ಮಥಿಸಿ ಸಿವೆಲ್‌ರವರು ಕೊಡುವ ಅಭಿಪ್ರಾಯ. ಕಂಪಿಲರಾಯ ಮತ್ತು ಅವನ ಮಗ ರಾಮನಾಥ ಅಥವಾ ಕುಮಾರರಾಮ ಇವರ ಪಾತ್ರವೂ ಈ ಸಾಮ್ರಾಜ್ಯ ಸ್ಥಾಪನೆಯಲ್ಲಿ ಇರುವಂತೆ ತೋರುತ್ತದೆ.

ಇನ್ನೊಂದು ಅಭಿಪ್ರಾಯದ ಪ್ರಕಾರ ೩ನೆಯ ಹೊಯಿಸಳ ಬಲ್ಲಾಳ ಈ ಸಾಮ್ರಾಜ್ಯ ಸ್ಥಾಪನೆಗೆ ಸ್ವಲ್ಪಮಟ್ಟಿಗೆ ಕಾರಣನಾಗುತ್ತಾನೆ. ಹರಿಹರ ಮತ್ತು ಬುಕ್ಕರು ಬಲ್ಲಾಳನ ಆಶ್ರಿತರಾಗಿದ್ದವರು. ಆನೆಗೊಂದಿಯನ್ನು ಕೇಂದ್ರವಾಗಿಟ್ಟುಕೊಂಡು ಹೊಸ ಸಾಮ್ರಾಜ್ಯದ ಸ್ಥಾಪನೆಗೆ ಮೊದಲು ಅವರು ನಾಂದಿಯನ್ನು ಹಾಡಿದರು. ಆನಂತರ ಹಂಪೆಯಲ್ಲಿ ವಿಜಯನಗರ ನಿರ್ಮಿತವಾಯಿತು. ಈಚೆಗೆ ಸಿಕ್ಕ ಅನೇಕ ಆಧಾರಗಳು ಇಲ್ಲಿ ಬಲ್ಲಾಳನ ಪಾತ್ರವನ್ನು ಸಮರ್ಥಿಸುವಂತಿವೆ ಎನ್ನುತ್ತಾರೆ ಕೆಲವು ವಿದ್ವಾಂಸರು. ವಿಜಯನಗರ ಸ್ಥಾಪಿತವಾಗುವುದಕ್ಕೆ ಮುನ್ನ "ಹೊಸ ಪಟ್ಟಣ" ಎಂದು ಕರೆಯಲಾಗುತ್ತಿದ್ದ ಆ ಊರು ಬಲ್ಲಾಳನ ಅನೇಕ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ತಿಳಿದುಬರುತ್ತದೆ. ಆದ್ದರಿಂದ ಈ ಸಾಮ್ರಾಜ್ಯದ ಸ್ಥಾಪನೆಯಲ್ಲಿ ಆತನ ಪಾತ್ರವೂ ಪ್ರಮುಖವಾಗಿದ್ದಿರಬೇಕೆಂದು ಅಭಿಪ್ರಾಯ ಪಡಲಾಗಿದೆ.

ಇದಲ್ಲದೆ ಇನ್ನೊಂದು ಅಭಿಪ್ರಾಯವಿದೆ. ಹರಿಹರ ಮತ್ತು ಬುಕ್ಕರು ಓರುಂಗಲ್ಲಿನ ಪತನಾನಂತರ ಸುಲ್ತಾನ್ ಮಹ್ಮದ್ ತುಘಲಕ್‌ನ ಪ್ರತಿನಿಧಿಗಳಾಗಿ ಅಲ್ಲಿದ್ದರು. ಮಹಮ್ಮದನು ೩ನೇ ಬಲ್ಲಾಳನನ್ನು ಅಡಗಿಸಲು ದಕ್ಷಿಣಕ್ಕೆ ಅವರನ್ನು ಕಳುಹಿಸಿಕೊಟ್ಟನು. ಆದರೆ ಅವರು ಇತ್ತ ಬಂದ ನಂತರ ಮಾಧವಾಚಾರ್ಯ ಅಥವಾ ವಿದ್ಯಾರಣ್ಯರ ಪ್ರಭಾವಕ್ಕೆ ಸಿಕ್ಕು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ರಾರಣರಾದರು ಹೀಗೆ ಈ ರಾಜ್ಯದ ಹುಟ್ಟನ್ನು ಕುರಿತು ಅನೇಕ ಅಭಿಪ್ರಾಯಗಳು ಬೆಳೆದಿವೆ. ಇವುಗಳಲ್ಲೆಲ್ಲಾ ಕಾಣುವ ಒಂದು ನಿರ್ದಿಷ್ಟವಾದ ಅಂಶವೆಂದರೆ ಹರಿಹರ ಮತ್ತು ಬುಕ್ಕರು ಇದರ ಸ್ಥಾಪನೆಗೆ ಕಾರಣರಾದರೆಂಬುದು. ಇವರಿಗೆ ಹಿನ್ನೆಲೆಯಲ್ಲಿ ಪ್ರಮುಖ ಶಕ್ತಿಯಾಗಿ ನಿಂತವರು ವಿದ್ಯಾರಣ್ಯರೆಂಬ ವಿಚಾರವೂ ಸಂದೇಹಾಸ್ಪದ.

ವಿದ್ವಾಂಸರಾದ ಶ್ರೀ ಬಿ.ಎ. ಸಾಲೆತೊರೆ ಅವರು ಹೇಳುವ ಅಭಿಪ್ರಾಯಗಳು ಗಮನಾರ್ಹವಾಗಿವೆ. ವಿದ್ಯಾರಣ್ಯರು ಈ ಸಾಮ್ರಾಜ್ಯ ಸ್ಥಾಪನೆಗೆ ಕಾರಣಕರ್ತರೆನ್ನುವುದು ಚಾರಿತ್ರಿಕ ಸತ್ಯವಲ್ಲವೆಂಬುದು ಅವರ ನಿರ್ದಿಷ್ಟ ಅಭಿಪ್ರಾಯವಾಗಿದೆ. ಶಾಸನ ಮತ್ತು ಇತರ ಅಧಾರಗಳ ಮೇಲಿಂದ ಅವರು ಈ ಅಭಿಪ್ರಾಯಕ್ಕೆ ಬಂದಿದ್ದಾರೆ. ಹರಿಹರ ಮತ್ತು ಬುಕ್ಕರ ರಾಜಗುರುಗಳು ಕ್ರಿಯಾಶಕ್ತಿ ಒಡೆಯರು ಎಂಬುದಕ್ಕೆ ಶಾಸನದ ಅಧಾರಗಳಿವೆಯೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ.

ವಿವಿಧ ಅಭಿಪ್ರಾಯಗಳೇನೇ ಇರಲಿ ಒಟ್ಟಿನಲ್ಲಿ ಕನ್ನಡ ವಂಶದ ಸಂಗಮನ ಮಕ್ಕಳಾದ ಹರಿಹರ ಬುಕ್ಕರು ವಿಜಯನಗರದ ಸ್ಥಾಪಕರು ಎಂಬುದರಲ್ಲಿ ಸಂದೇಹವಿಲ್ಲ. ಅವರ ಈ ಕಾರ್ಯದಲ್ಲಿ ಅನೇಕ ಶಕ್ತಿಗಳು ನೆರವಾದುವು. ದೇಶದ ಆ ಸಂದಿಗ್ಧ ಪರಿಸ್ಥಿತಿಯನ್ನೆದುರಿಸಲು ಎಲ್ಲ ಸತ್ವ ಶಕ್ತಿಗಳು ಒಟ್ಟುಗೂಡಿ, ಜೊತೆಗೆ ಕರ್ನಾಟಕದ ಆಧಿದೇವಿ ಭುವನೇಶ್ವರಿಯ ಆಶೀರ್ವಾದವನ್ನು ಪಡೆದು ವಿಜಯನಗರ ಸಾಮ್ರಾಜ್ಯ ಮೈವೆತ್ತಿತೆನ್ನಬಹುದು.

ತುಂಗಭದ್ರಾ ತಟದಲ್ಲಿ ಪ್ರಧಾನ ದುರ್ಗನಗರವನ್ನೂ ಹೊರಪಾಳೆಯವನ್ನಾಗಿ ಆನೆ ಗೊಂದಿಯನ್ನೂ ನಿರ್ಮಿಸಿದ ಆ ಚಿರಸ್ಮರಣೀಯ ಕಾಲ ಯಾವುದು? ಆ ನಿರ್ಮಾಪಕರು ಯಾರು? ಎಂಬ ವಿಚಾರದಲ್ಲಿ ವಿದ್ವಾಂಸರೊಂದಿಗೆ ಒಮ್ಮತವಿಲ್ಲ. ಕ್ರಿ.ಶ. ೧೩೩೬ರಲ್ಲಿ ವಿಜಯನಗರದ ಸ್ಥಾಪನೆ ಯಾಯಿತೆಂಬ ಭಾವನೆ ಸರ್ವತ್ರ ಬೇರೂರಿರುವುದು ನಿಜ; ಆದರೆ ಈ ತೀರ್ಮಾನಕ್ಕೆ ಭಾದಕವಾಗಿರುವ ಹಲವಾರು ಅಂಶಗಳಿವೆ. ಸರ್ವಸಂಗಪರಿತ್ಯಾಗಿಯಾಗಿ ತಪಃಪ್ರಭಾವದಿಂದ ಚಿನ್ನದ ಮಳೆಗರೆದ

ಶ್ರೀ ವಿದ್ಯಾರಣ್ಯರೇ ವಿಜಯನಗರ ಧರ್ಮರಾಜ್ಯದ ಸಂಸ್ಥಾಪಕರೆಂಬ ಕಲ್ಪನೆ ಸರ್ವಸಾಮಾನ್ಯವಾಗಿ ನೆಲಸಿದೆ, ಆದರೆ, ಆ ಕಲ್ಪನೆಯನ್ನೂ ನೀಕರಿಸುವ ಹಲವಾರು ಸಂಗತಿಗಳು ಬೆಳಕಿಗೆ ಬಂದಿವೆ. ಈ ಸಮಸ್ಯಗಳ ಸ್ಥೂಲಾವ ಲೋಕನ ಇಲ್ಲಿ ಅಪ್ರಸ್ತುತವಾಗಲಾರದು.

ಕ್ರಿ.ಶ. 1327-28ರಲ್ಲಿ ಮಹಮ್ಮದ್ ಬಿನ್ ತುಘಲಕ್‌ನು ಕಂಪಲಿ ರಾಜ್ಯವನ್ನು ಮಣ್ಣುಗೂಡಿಸಿದನಷ್ಟೆ. ಈ ಸಂದರ್ಭದಲ್ಲಿ ವೀರಬಲ್ಲಾಳನು, ಉತ್ತರದ ಮಹಮ್ಮದೀಯ ರಾಜರಿಗೆ ಗೋಚರವಾಗದಂತೆ, ಸ್ವಶಕ್ತಿವರ್ಧನೆಗೆ ತೊಡಗಿರಬೇಕು. ಆ ದುರ್ಗಮ ದುರ್ಗ ಸ್ಥಾಪನೆಗೆ ವೀರಬಲ್ಲಾಳನು ಶೃಂಗೇರಿ ಮಠಾಧೀಶರಾದ ವಿದ್ಯಾತೀರ್ಥರ ಆಶೀರ್ವಾದವನ್ನು ಯಾಚಿಸಿದ್ದರೂ ಇರಬಹುದು. ವಿಜಯನಗರ ದುರ್ಗಸ್ಥಾಪನೆಯ ಕೆಲಸ ಹೀಗೆ ರಹಸ್ಯವಾಗಿ ನಡೆದು, ಮಧುರೆಯ ಸುಲ್ತಾನನ ದಂಗೆ ಕೊನೆಗೊಂಡೊಡನೆ ಪ್ರಾಕಟ್ಯಕ್ಕೆ ಬಂದಿರಬೇಕು. ವಿಜಯನಗರವು ಕ್ರಿ.ಶ. 1336ರಲ್ಲಿ ಸ್ಥಾಪಿತವಾಯಯಿತೆಂಬ ದಂತ ಕಥೆಗೆ ಅದುವೇ ಕಾರಣವಾಗಿದ್ದರೂ ಇರಬಹುದು. ಈ ಕಥೆಯನ್ನು ಸಮರ್ಥಿಸ ಬಲ್ಲ ಸಮರ್ಪಕ ಚಾರಿತ್ರಿಕಾಧಾರಗಳು ಇದುವರೆಗೆ ದೊರೆತಿಲ್ಲ. ಮಹಮ್ಮದಿಯಾಕ್ರಮಣಗಳನ್ನು ತಡೆಗಟ್ಟುವ ಸಲುವಾಗಿ ಹೊಯಿಸಳ ಬಲ್ಲಾಳನು ಕ್ರಿ.ಶ. 1335 ರಿಂದ 1342ರ ವರೆಗೆ ನಡೆಸಿದ ಪ್ರಯತ್ನ ಸಫಲವಾಗದೆ ಹೋದ ಮೇಲೆ, ಅವನ ಉತ್ತರಾಧಿಕಾರಿಗಲು ಈ ಹೊಣೆ ಹೊತ್ತಿರಬೇಕು. ಅತಿ ಮಹತ್ತ್ವದ ಉತ್ತರಗಡಿಯ ರಕ್ಷಣೆಯನ್ನು ಹಕ್ಕ ಬುಕ್ಕರೆಂಬ ಆ ನಿಷ್ಠಾವಂತ ಸೋದರರು ವಹಿಸಿಕೊಂಡ ಮೇಲೆ, ಸ್ವಧರ್ಮರಕ್ಷಣೆಗೂ ಅವರು ಕಂಕಣಬದ್ಧರಾಗಿದ್ದಿರಬೇಕು. ಕ್ರಿ.ಶ. 1340ರಲ್ಲಿ ಯೌವರಾಜ್ಯಾಭಿಕ್ತನಾದ ನಾಲ್ಮಡಿ

ಬಲ್ಲಾಳನು ಮೂರನೆಯ ಬಲ್ಲಾಳ ಮರಣಾನಂತರ ಮೂರು ನಾಲ್ಕು ವರ್ಷಗಳೊಳಗೆ ನಾಮಾವಶೇಷನಾದ ಮೇಲೆ ಉತ್ತರ ಗಡಿಯ ಸಂರಕ್ಷಕರಾಗಿ ನಿಂತಿದ್ದ ಈ ಸಹೋದರರರೇ ಸಾಮ್ರಾಜ್ಯ ರಕ್ಷಣೆಯ ಅಧ್ವರ್ಯುಗಳಾಗಿ ಇತಿಹಾಸ ಪ್ರಸಿದ್ಧರಾದರು, ನಾಲ್ಕಡಿ ಬಲ್ಲಾಳನ ಮರಣ ಕಾರಣವೇನು? ಅವನಿಗೆ ಉತ್ತರಾಧಿಕಾರಿಗಳಾಗಬಲ್ಲ ಔರಸಪುತ್ರರಿರಲಿಲ್ಲವೆ? ಅದೊಂದೂ ತಿಳಿಯದು, ಹರಿಹರ ಬುಕ್ಕರೆಂಬ ಈ ಸಹೋದರರ ಹೆಸರುಗಳು ಕ್ರಿ.ಶ. 1346ರ ತರುವಾಯ, ಗುಲಬರ್ಗಾ ರಾಜ್ಯ ಸ್ಥಾಪನೆಗೆ ನಿಕಟ ಪೂರ್ವದಲ್ಲಿ, ಎಂದರೆ ಮಹಮ್ಮದ್‌ನ ದಕ್ಷಿಣ ರಾಜ್ಯಗಳು ದಂಗೆಯೇಳುವ ಕಾಲದಲ್ಲಿ, ಪ್ರಸಿದ್ಧಿಗೆ ಬಂದುವು. ಆದರೆ, ಈ ದಕ್ಷಿಣ ಪ್ರಾಂತಗಳಲ್ಲಿ ಏನೇ ನಡೆದರೂ ಮಹಮ್ಮದ್‌ನು ಉತ್ತರದಿಂದ ಈ ರಾಜ್ಯಗಳ ರಕ್ಷಣೆಗೆ ಬರುವ ಸ್ಥಿತಿಯಲ್ಲಿರಲಿಲ್ಲ. ಹೀಗೆ ಬಲ್ಲಾಳನ ರಾಜ್ಯ ರಕ್ಷಣೆಯಿಂದ ಹಿಡಿದು, ಕಟ್ಟಕಡೆಗೆ ಮಹಮ್ಮದೀಯರ ದಾಳಿಗಳನ್ನು ಪ್ರಬಲವಾಗಿ ವಿರೋಧಿಸಬಲ್ಲ ಸುಭದ್ರ ಹಿಂದೂ ರಾಜ್ಯ ಸ್ಥಾಪನೆಯಾಗುವ ವರೆಗೆ, ಹಲವಾರು ಘಟನೆಗಳು ಕಾರ್ಯಕಾರಣ ಪೂರ್ವಕವಾಗಿ, ಒಂದರ ಹಿಂದೊಂದಾಗಿ ಸಂಭವಿಸಿರುವುದು ವ್ಯಕ್ತವಾಗಿದೆ. ಈ ನಾನಾ ಪರಿಣಾಮ ರಮಣೀಯ ಘಟನೆಗಳ ಫಲವೇ ವಿಜಯನಗರದ ಸ್ಥಾಪನೆ.

ಮಹಮ್ಮದೀಯರ ದಾಳಿಗಳನ್ನು ಶಕ್ತಿಮೀರಿ ಪ್ರತಿಭಟಿಸಿದ ಓರಂಗಲ್ಲಿನ ಕಾಕತೀಯ ಪರ್ರತಾಪರುದ್ರದೇವನು ಕ್ರಿ.ಶ. 1323ರಲ್ಲಿ ಸೋತು ಮೃತನಾದನು. ಆಗ ಅವನ ಆಶ್ರಯದಲ್ಲಿದ್ದ ಹರಿಹರನು ತನ್ನ ಸಹೋದರರೊಡನೆ ವೀರ ಬಲ್ಲಾಳನ ಸಹಾಯಾರ್ಥವಾಗಿ ಬಂದನಷ್ಟೆ. ಬಂದೊಡನೆ, ಅವರನ್ನು ವೀರಬಲ್ಲಾಳನು ತನ್ನ ರಾಜ್ಯದ ಗಡಿಯುದ್ದಕ್ಕೂ ದೇಶರಕ್ಷಣೆಗಾಗಿ ನಿಯೋಜಿಸಿದನು, ಇವರೆಲ್ಲರೂ

ಹೊಯಿಸಳ ಸಾಮ್ರಾಜ್ಯದ ಮಾಂಡಲಿಕರಾಗಿ ನಿಂತು ತುರುಷ್ಕರ ವಿರುದ್ಧವಾಗಿ ಕತ್ತಿಹಹಿಡಿದು ನಿಂತರು; ವೈರಿಗಳ ದಾಳಿಗಳನ್ನು ತಡೆದು ವಿಜಯಿಗಳಾದರು. ಈ ಘಟನೆ ಸುಮಾರು ಕ್ರಿ.ಶ. 1346ರಲ್ಲಿ ನಡೆಯಿತು. ವಿಜಯಸ್ಮಾರಕವಾಗಿ ಬಲ್ಲಾಳನ ಆಸ್ಥಾನದಲ್ಲಿ ನಡೆದ ಸಮಾರಂಭದಲ್ಲಿ ಹರಿಹರನು ಕೊಡಿಸಿದ ಒಂದು ದಾನಶಾಸನವು ಅವನನ್ನು "ಶ್ರೀ ಮನ್ಮಹಾಮಂಡಲೇಶ್ವರಂ" ಎಂದು ನಿರ್ದೇಶಿಸಿದೆ. ಇದರಿಂದ ಹರಿಹರನು ಆ ಕಾಲಕ್ಕೂ ಸ್ವತಂತ್ರ ಮಹಾರಾಜನಾಗಿರಲಿಲ್ಲವೆಂದು ಖಚಿತವಾಗುವುದು, ಆದುದರಿಂದ, ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದವನು ಅವನಲ್ಲವೆಂದೂ ಸ್ಫುಟವಾಗುವುದು. ಆದುದರಿಂದ, ಕ್ರಿ.ಶ. 1346ರಲ್ಲಿ ಲಿಖಿತವಾದ ಆ ಶಾಸನದಲ್ಲಿ ವಿಜಯನಗರದ ಉಲ್ಲೇಖವೂ ಇಲ್ಲದ ಕಾರಣ, ಕ್ರಿ.ಶ. 1336ರಲ್ಲಿ ವಿಜಯನಗರ ಸ್ಥಾಪನೆಯಾಗಿರಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ, ವಿಜಯನಗರವು ತರುವಾಯ ಯಾವ ಪ್ರಾಂತ್ಯವನ್ನು ಒಳಗೊಂಡಿತ್ತೋ ಆ ಪ್ರಾಂತ್ಯಕ್ಕೆ ಕ್ರಿ.ಶ. 1339ರಲ್ಲಿ ಮೂರನೆಯ ವೀರ ಬಲ್ಲಾಳನು ಸ್ವತಂತ್ರಾಧಿಪತಿಯಾಗಿದ್ದನು. ಕ್ರಿ.ಶ. 1340ರಲ್ಲಿ ಅವನು ತನ್ನ ಮಗನಾದ ವೀರ ವಿಜಯ ವಿರೂಪಾಕ್ಷನಿಗೆ ಯೌವರಾಜ್ಯಾಭಿಷೇಕ ಮಾಡಿ ಹಂಪೆಗೆ 'ವಿಜಯನಗರ' ಎಂಬ ಹೆಸರಿಟ್ಟನೆಂದು ಫೇರಿಸ್ತಾ ಹೇಳುತ್ತಾನೆ. ಕ್ರ.ಶ. 1342ರಲ್ಲಿ ವೀರಬಲ್ಲಾಳನ ಮರಣಾನಂತರ ವೀರ ವಿರೂಪಾಕ್ಷನು ಹೊಯಿಸಳ ಚಕ್ರವರ್ತಿಯಾದ ಮೇಲೆ, ಕ್ರಿ.ಶ. 1346ರಲ್ಲಿ ಹೊರಟ ಶೃಂಗೇರಿ ಶಾಸನ ಕಾಲದಲ್ಲಾಗಲಿ ಕ್ರಿ.ಶ. 1356ರಲ್ಲಾಗಲಿ, ಹರಿಹರಾದಿ ಸಹೋದರರು ಮಾಂಡಲಿಕರಾಗಿದ್ದರೇ ಹೊರತು, ರಾಜ್ಯಸಂಸ್ಥಾಪಕರೆಂದು ಎಲ್ಲೂ ಸ್ತುತರಾಗಿಲ್ಲ. ಕ್ರಿ.ಶ. 1356ರಲ್ಲಿ ಹರಿಹರನು

ಕಾಲಾಧೀನನಾದಾಗಲೂ ಅವನು ಮಾಂಡಲಿಕನಾಗಿಯೇ ಇದ್ದನು. ಅವನು ವಿಜಯನಗರದ ಸ್ಥಾಪಕನಾಗಿ, ಚಕ್ರವರ್ತಿಯಾಗಿ ರಾಜ್ಯವಾಳಿದ್ದರೆ, ಅವನ ತಮ್ಮಂದಿರು ಅವನ ಮಾಂಡಲಿಕರಾಗಿಯೇ ಆಳುಬಹುದಾಗಿತ್ತು. ವಸ್ತುಸ್ಥಿತಿಹಾಗಿಲ್ಲ; ಅವರು ಬಲ್ಲಾಳ ರಾಜನ ಮಾಂಡಲಿಕರಾಗಿಯೇ ರಾಜ್ಯರಕ್ಷಣೆ ಮಾಡಿದವರಾಗಿದ್ದರು.

ಒಂದನೆಯ ಹರಿಹರನಿಗೆ ಮಕ್ಕಳಿರಲಿಲ್ಲವಾಗಿ ಅವನ ತಮ್ಮನಾದ ಒಂದನೆಯ ಬುಕ್ಕನು ಸುಮಾರು ಕ್ರಿ.ಶ. 1356ರಲ್ಲಿ ಪಟಕ್ಕೆ ಬಂದನು. ಈ ಬುಕ್ಕರಾಯ ಮಹಾರಾಜನಾಗಿ ಮಹಾಮಂಡಾಳೇಶ್ವರ, ಅರಿರಾಯ, ವಿಭಾಡ, ಭಾಷೆಗೆ ತಪ್ಪುವ ರಾಯರ ಗಂಡ, ಹಿಂದೂರಾಯ ಸುರತ್ರಾಣ, ಪೂರ್ವ-ಪಶ್ಚಿಮ ಸಮುದ್ರಾಧಿಪತಿ. ವೀರಸಂಗಮೇಶ್ವರ ರಾಯಬಾಹುತು ಮುಂತಾದ ಬಿರುದುಗಳಿದ್ದವು. ಶ್ರೀರಂಗಪಟ್ಟಣದ ಶಾಸನವೂಂದರಲ್ಲಿ ಇದೇ ಅರಸನನ್ನು ವೀರ ಬುಕ್ಕಣರಾಯನೆಂದೂ ಮದ್ದೂರಿನ ಶಾಸನವೊಂದರಲ್ಲಿ ಬುಕ್ಕಣ ಒಡೆಯರ್ ಎಂದೂ ಕರೆಯಲಾಗಿದೆ. ಚಾಮನಗರದ ಶಾಸನವೊಂದರಲ್ಲಿ ಬುಕ್ಕನನ್ನು ಪೂರ್ವ-ಪಶ್ಚಿಮ ಸಮುದ್ರಾಧೀಶ್ವರನೆಂದು ಬಣ್ಣಿಸಲಾಗಿದೆ.

ಒಂದನೆಯ ಬುಕ್ಕನು ಅರಸನಾದೊಡನೆ ರಾಜ್ಯದ ಐಕ್ಯತೆಗೂ ತನ್ನ ಸ್ಥಾನದ ಭದ್ರತೆಗೂ ಸೂಕ್ತ ಕ್ರಮಗಳನ್ನು ಕೈಗೊಂಡನು. ತನ್ನ ಮಕ್ಕಳನ್ನೇ ಪ್ರಾಂತ್ಯಗಳ ಮಂಡಲೇಶ್ವರರನ್ನಾಗಿ ನೇಮಿಸಿ, ರಾಜ್ಯಭಾರಕ್ಕೆ ಅವರನ್ನೇ ಹೊಣೆಯನ್ನಾಗಿ ಮಾಡಿದನು. ಹಾಗೆ ನೇಮಕ ಮಾಡಲ್ಪಟ್ಟವರಲ್ಲಿ ಉದಯಗಿರಿಯ ಮಂಡಲೇಶ್ವರ ಕುಮಾರಕಂಪಣ, ಮೊದಲು ಪೆನುಕೊಂಡೆ ಆನಂತರ, ಅರಗದ ರಾಜ್ಯಸೂತ್ರಗಳನ್ನು ವಹಿಸಿಕೊಂಡ ವಿರೂಪಣ್ಣ ಹಾಗೂ ಹೊಯ್ಸಳ ರಾಜ್ಯದ ಭಾಗಗಳ ಉಸ್ತುವಾರಿ

ನೋಡಿಕೊಳ್ಳುತ್ತಿದ್ದ ಚಿಕ್ಕ ಕಂಪಣ, ಮಲ್ಲಪ್ಪ ಮತ್ತು ಎರಡನೆಯ ಹರಿಹರರು ಸೇರಿದ್ದರು.

ಒಂದನೆಯ ಬುಕ್ಕನ ಸುತನೂ ಉತ್ತರಾಧಿಕಾರಿಯೂ ಆದ ಇಮ್ಮಡಿ ಹರಿಹರನನ್ನು ಯಳಂದೂರು ಶಾಸನದಲ್ಲಿ ಹರಿಯಪ್ಪ ಒಡೆಯರ್ ಎಂದು ಕರೆಯಲಾಗಿದೆ. ಮಳವಳ್ಳಿ ಶಾಸನಗಳಲ್ಲಿ ಇಮ್ಮಡಿ ಹರಿಹರನನ್ನು ವೀರ ಹರಿಹರೇಶ್ವರ, ವೀರ ಹರಿಹರ ಮಹಾರಾಯಾ ಎಂಬುದಾಗಿಯೂ ಕರೆಯಲಾಗಿದೆ. ಬೇಲೂರಿನ ಶಾಸನಗಳು ಇಮ್ಮಡಿ ಹರಿಹರನು ಚೋಳ, ಕೇರಳ, ಪಾಂಡ್ಯರ ಮೇಲೆ ಯುದ್ಧಮಾಡಿ ವಿಜಯಿಯಾದನೆಂದೂ ಅವನು ಭಯಗ್ರಸ್ತರಾದ ಸೌರಾಷ್ಟ್ರರು, ಅಂಗರು, ಕಳಿಂಗರು, ವಂಗರು ಮತ್ತು ಯವನರನ್ನು ಕಾಪಾಡಿದನೆಂದೂ ವರ್ಣಿಸಿವೆ. ಇವು ಸ್ವಲ್ಪ ಮಟ್ಟಿಗೆ ಸಾಂಪ್ರದಾಯಿಕ ಸ್ತುತಿ ಎನ್ನಬಹುದು.

ಇಮ್ಮಡಿ ಹರಿಹರನ ಪಟ್ಟಾಭಿಷೇಕದ ಕಾಲದಲ್ಲಿ ಶಾಂತವಾತಾವರಣವಿದ್ದಿತು. ಆದರೆ ಅದು ತಾತ್ಕಾಲಿಕವಾಗಿದ್ದಿತು. ಕೊಂಕಣದಲ್ಲೂ ತಮಿಳು ದೇಶದಲ್ಲಿಯೂ ಬಂಡಾಯದ ಗೋಚರಿಸಿದುವು. ಕುಮಾರ ಕಂಪಣ ಮಕ್ಕಳೂ ಅಧಿಕಾರಿಗಳೂ ಹರಿಹರನ ಮೇಲಿನ ಅಸೂಯೆಯಿಂದ ಬಂಡಾಯಗಾರರನ್ನು ಪ್ರಚೋದಿಸಿದರೆಂದೂ ಭಾವಿಸಲಾಗಿದೆ. ಆದರೆ ಹರಿಹರನು ಅಶಾಂತಿಯ ಬಿರುಗಾಳಿಯನ್ನು ತಡೆಯುವುದರಲ್ಲಿ ಜಯಶೀಲನಾದನು. ಅವನ ಮಗನಾದ ವಿರೂಪಾಕ್ಷ ಅಥವಾ ವಿರೂಪಣ್ಣ ಒಡೆಯನು ನಿರ್ದಾಕ್ಷಿಣ್ಯವಾಗಿ ಬಂಡಾಯವನ್ನು ದಮನ ಮಾಡಿ, ತಮಿಳು ದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಅವನು ದಕ್ಷಿಣದಲ್ಲಿ

ಸಿಂಹಳ ದ್ವೀಪದವರೆಗೂ ಮುಂದುವರಿದು ಅಲ್ಲಿನ ಅರಸನಿಂದ ಕಪ್ಪ–ಕಾಣಿಕೆಗಳನ್ನು ವಸೂಲು ಮಾಡಿದನು.

ಇಮ್ಮಡಿ ಹರಿಹರ ಮತ್ತು ಮೇಳಾದೇವಿಯವರ ಪುತ್ರನಾದ ಒಂದನೆಯ ದೇವರಾಯನ ಪಟ್ಟಾಭಿಷೇಕವು ಕ್ರಿ.ಶ. 1406ರ ನವೆಂಬರ್ ಏಳರಂದು ಎಇಜಯನಗರದಲ್ಲಿ ಜರುಗಿತು. ಒಂದನೆಯ ದೇವರಾಯನು ಪಟಕ್ಕೆ ಬಂದೊಡನೆ ಬಹಮನಿರಾಜ್ಯದೊಂದಿಗೆ ಯುದ್ಧ ಮಾಡಬೇಕಾಯಿತು. ಅಲ್ಲಿನ ಸುಲ್ತಾನನಾದ ಫಿರೋಜ್ ಶಾಹನು ವೇಲಮರು ಹಾಗೂ ಕೊಂಡವೀಡು ರೆಡ್ಡಿ ರಾಜ್ಯದ ಅರಸ ಪೆದ್ದ ಕೋಮಟ ವೇಮನೊಂದಿಗೆ ಮೈತ್ರಿ ಬೆಳೆಸಿಕೊಂಡು, ವಿಜಯನಗರದ ಮೇಲೆ ದಂಡೆತ್ತಿ ಬಂದನು, ದೇವರಾಯನು ಕೃಷ್ಣ ಮತ್ತು ತುಂಗಭದ್ರಾ ನದಿಗಳ ಮಧ್ಯದ ಪ್ರದೇಶದಲ್ಲಿ ತನ್ನ ಪಡೆಗಳನ್ನು ಕೇಂದ್ರೀಕರಿಸಿ, ಸುಲ್ತಾನನ ಮುನ್ನಡೆಯನ್ನು ತಡೆಗಟ್ಟಲು ಪ್ರಯತ್ನಿಸಿದನು. ಸುಲ್ತಾನನು ವಿಜಯನಗರವನ್ನು ಆಕ್ರಮಿಸಿಕೊಳ್ಳುವುದರಲ್ಲಿ ವಿಫಲನಾದನು. ಈ ರೀತಿ ಪ್ರಾರಂಭದಲ್ಲಿ ದೇವರಾಯನ ಸೈನ್ಯಗಳು ಗೆಲ್ಲುವ ಲಕ್ಷಣ ಕಂಡು ಬಂದರೂ ಕೊನೆಗೆ ಮುಸ್ಲಿಮರೇ ಮೇಲ್ಗೈಯಾದರು. ದೇವರಾಯನು ಸಂಧಿಗಾಗಿ ಪ್ರಯತ್ನಿಸಿದಾಗ ಫಿರೋಜ್ ಶಾಹನು ಕಠಿಣವಾದ ಷರತ್ತುಗಳನ್ನು ಹಾಕಿದನು. ಅವುಗಳ ಪ್ರಕಾರ, ಒಂದನೆಯ ದೇವರಾಯನು ಬಂಕಾಪುರದ ಕೋಟೆಯನ್ನು ಬಹಮನಿರಾಜ್ಯಕ್ಕೆ ಒಪ್ಪಿಸಿದುದಲ್ಲದೆ, ತನ್ನ ಮಗಳನ್ನೇ ಸುಲ್ತಾನನಿಗೆ ಕೊಟ್ಟು ಮದುವೆ ಮಾಡಿದನು. ಈ ವೃತ್ತಾಂತಗಳೆಲ್ಲವೂ ಮುಸ್ಲಿಮ ಇತಿಹಾಸಕಾರರಿಂದ ಮಾತ್ರ ದೊರೆತುದರಿಂದ

ದೇವರಾಯ ತನ್ನ ಪುತ್ರಿಯನ್ನೇ ವಿಧರ್ಮೀಯನಿಗೆ ಕೊಟ್ಟು ವಿವಾಹ ಮಾಡಿಕೋಡಲು ಒಪ್ಪಿದನೇ ಎಂಬುದು ಸಂದೇಹಕ್ಕೆ ಎಡೆಮಾಡಿಕೊಟ್ಟಿದೆ.

ವೀರವಿಜಯರಾಯನ ಮಗನೂ ಉತ್ತರಾಧಿಕಾರಯೂ ಆದ ಇಮ್ಮಡಿ ದೇವರಾಯನಿಗೆ ಪ್ರೌಢದೇವರಾಯನೆಂಬ ಮತ್ತೊಂದು ಹೆಸರು ಇದ್ದಿತು. ಕೈಕಿಣಿಯ ಶಾಸನವು ಅವನನ್ನು ಶ್ರೀಮದ್ರಾಜಾಧಿರಾಜ ರಾಜಾಪರಮೇಶ್ವರ, ಶ್ರೀ ವೀರಪ್ರತಾಪದೇವರಾಯ ಮಹಾರಾಯ, ಕರ್ನಾಟಕದ ಮಹಾರಾಜಧಾನಿ ವಿಜಯನಗರದ ಪುರವರಾಧೀಶ್ವರ ಎಂಬುದಾಗಿ ಬಣ್ಣಿಸಿದೆ. ತಿರ್ಥಹಳ್ಳಿಯ ಶಾಸನವು ಅಂಗ, ಕನೋಜ, ಕಾಂಬೋಜ, ವಂಗ ಮತ್ತು ನೇಪಾಳದ ಆರಸರು ಅವನ ಛತ್ರ ಚಾಮರಗಳನ್ನು ಹೊತ್ತಿರುವ ಸೇವಕರಂತಿದ್ದರೆಂದು ಇಮ್ಮಡಿ ದೇವರಾಯನನ್ನು ಸುತ್ತಿಸಿದೆ. ಇಮ್ಮಡಿ ದೇವರಾಯನ ಪಟ್ಟಾಭಿಷೇಕದ ಇಸವಿಯನ್ನು ಖಚಿತವಾಗಿ ತಿಳಿಸಲು ಸಾಧ್ಯವಿಲ್ಲವಾದರೂ ಅವನು 1421 ಮಾರ್ಚ್‌ದಿಂದಲೇ ರಾಜ್ಯಭಾರದಲ್ಲಿ ಭಾಗವಹಿಸಿಸುತ್ತಿದ್ದರಬಹುದೆಂದು ದಕ್ಷಿಣಕನ್ನಡ ಜಿಲ್ಲೆಯ ಮಣಿಗರಕೇರಿ ಶಾಸನದಿಂದ ತಿಳಿದು ಬರುತ್ತದೆ. ಅವನು ಮೊದಲು ತುಳುರಾಜ್ಯದ ವೈವಹಾರಗಳನ್ನು ಗಮನಿಸುತ್ತಿದ್ದನೆಂದು ಕಾಣುತ್ತದೆ.

ಶೃಂಗೇರಿಯ ಮಲ್ಲಿಕಾರ್ಜುನ ದೇವರ ಅನುಗ್ರಹದಿಂದ ಜನಿಸಿದನೆಂದು ಹೇಳಲಾದ ಮಲ್ಲಿಕಾರ್ಜುನನು, ಇಮ್ಮಡಿ ದೇವರಾಯನ ನಂತರ ವಿಜಯನಗರದ ಸಿಂಹಾಸನದ ಮೇಲೆ ಮಂಡಿಸಿದನು. ದೇವರಾಯನ ತಮ್ಮನಾದ ಇಮ್ಮಡಿ ವಿಜಯ ಅಥವಾ ಪ್ರತಾಪದೇವರಾಯನೂ ಮಲ್ಲಿಕಾರ್ಜುನನೂ ಸ್ವಲ್ಪ ಕಾಲ ಒಟ್ಟಿಗೆ ಆಳಿದರೆಂದೂ ಒಂದು ಅಭಿಪ್ರಾಯವಿದೆ.

ಮಲ್ಲಿಕಾರ್ಜುನನಿಗೆ ಮುಮ್ಮಡಿ ದೇರಾಯ, ಮುಮ್ಮಡಿ ಪ್ರೌಢದೇವರಾ, ದೇವರಾಯ ಮಹಾರಾಯ ಎಂಬ ಹೆಸರುಗಳೂ ಇದ್ದುವು. 'ಗಜ ಬೇಂಟೆಕಾರ' ಎಂಬುದು ಅವನ ಮತ್ತೊಂದು ಬಿರುದು.

ಮಲ್ಲಿಕಾರ್ಜುನನು ದುರ್ಬಲ ಅರಸನಾಗಿದ್ದನು. ಅವನು ಪಟ್ಟಕ್ಕೆ ಬಂದ ನಾಲ್ಕು ವರ್ಷಗಳಲ್ಲಿಯೇ ಪ್ರಾಯಶಃ ಕ್ರಿ.ಶ. 1450ರಲ್ಲಿ ಬಹಮನಿ ಸುಲ್ತಾನನ ಹಾಗೂ ಗಜಪತಿ ಕಪಿಲೇಂದ್ರನ ಸಂಯುಕ್ತ ದಂಡಯಾತ್ರೆಯನ್ನು ಎದುರಿಸಬೇಕಾಯಿತು. ಆದರೆ ಮಲ್ಲಿಕಾರ್ಜುನನು ಈಆಕ್ರಮಣಕಾರರನ್ನು ಹೊರದೋಡಿಸಿ, ತನ್ನ ಅಧಿಕಾರವನ್ನು ಉಳಿಸಿಕೊಂಡುದುದು ಅಚ್ಚರಿಯೇ ಸರಿ.

ಮಲ್ಲಕಾರ್ಜುನನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ವಿರೂಪಾಕ್ಷನು ಇಮ್ಮಡಿ ದೇವರಾಯನ ತಮ್ಮನಾದ ಪ್ರತಾಪದೇವರಾಯನ ಮಗನು. ಸಾಗರದ ಶಾಸನವೊಂದರಲ್ಲಿ ವಿರೂಪಾಕ್ಷನನ್ನು ಈಶ್ವರಕುಲದ ಹೆಮ್ಮೆ ಎಂದು ವರ್ಣಿಸಲಾಗಿದೆ. ಅರಸನಾಗುವುದಕ್ಕೆ ಮುಂಚೆ ಇಮ್ಮಡಿ ವಿರೂಪಾಕ್ಷನು ಪೆನುಕೊಂಡೆಯ ಆಧಿಪತಿಯಾಗಿದ್ದನು. ಅನೇಕ ದುಶ್ಚಟಗಳಿಗೆ ಬಲಿಯಾಗಿದ್ದ ವಿರೂಪಾಕ್ಷನು ನಿರ್ವೀರ್ಯನಾಗಿದ್ದನು.

ಸಾಮಂತರನೇಕರು ವಿರೂಪಾಕ್ಷನನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ ಸ್ವೇಚ್ಛೆಯಿಂದ ಆಳಲಾರಂಭಿಸಿದರು. ಕರ್ನಾಟಕದ ದಕ್ಷಿಣ ಭಾಗ ಮತ್ತು ಪಶ್ಚಿಮ ಭಾಗದ ಆಂಧ್ರ ಜಿಲ್ಲೆಗಳಿಗೆ ಒಡೆಯರಾಗಿದ್ದ ಸಾಳುವರು ನೆಪಮಾತ್ರಕ್ಕೆ ವಿಜಯನಗರದ ಪರಮಾಧಿಕಾರವನ್ನು ಅಂಗೀಕರಿಸಿ, ನಿಜವಾಗಿಯೂ ಸ್ವತಂತ್ರ ಅರಸರಂತೆ

ವರ್ತಿಸುತ್ತಿದ್ದರು. ತಮಿಳುನಾಡಿನ ಕೆಲವು ಭಾಗಗಳನ್ನು ಆಳುತ್ತಿದ್ದವರೂ ತುಳುವ ಮತ್ತು ಕೊಂಕಣಿ ಸರದಾರರೂ ವಿರೂಪಾಕ್ಷನ ನಿರೂಪವನ್ನು ಲೆಕ್ಕಿಸುತ್ತಲೇ ಇರಲಿಲ್ಲ.

ಪ್ರೌಢದೇವರಾಯನು ಪಟ್ಟವೇರಿದಾಗ ತರುಣನಾಗಿದ್ದನು. ಅವನು ಕ್ರಿ.ಶ. 1447ರಿಂದಲೇ ತಂದೆಯ ಆಡಳಿತದಲ್ಲೂ ಸಹಭಾಗಿಯಾಗಿದ್ದನು. ಆದರೆ ಇಂದ್ರಿಯನಿಗ್ರಹಶಕ್ತಿಯಿಲ್ಲದ, ದುರ್ಬಲ ಮನಸ್ಸುಳ್ಳವನಾಗಿದ್ದುದರಿಂದ ಅರಸೊತ್ತಿಗೆಯ ಹೊಣೆ ಹೊರಲು ಅನರ್ಹನಾಗಿದ್ದನು. ರಾಜ್ಯದಲ್ಲಿ ಅರಾಜಕತೆ ತಾಂಡವವಾಡತೊಡಗಿತು. ಸಾಮ್ರಾಜ್ಯದ ಆಗುಹೋಗುಗಳ ಬಗ್ಗೆ ಪ್ರೌಢದೇವರಾಯನು ಅಲಕ್ಷ್ಯದಿಂದಿದ್ದನು. ಸಾಳುವ ನರಸಿಂಹನಂತಹ ಪ್ರಬಲ ಸಾಮಂತನನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯ ಅವನಲ್ಲಿ ಖಂಡಿತ ಇರಲಿಲ್ಲ.

ವಿಜಯನಗರದ ಅರಸರು ವೈಯಕ್ತಿಕವಾಗಿ ಶೈವಧರ್ಮಕ್ಕೋ ವೈಷ್ಣವಧರ್ಮಕ್ಕೋ ಸೇರಿದವರಾಗಿದ್ದರೂ ಪರಮಧರ್ಮಸಹಿಷ್ಣುಗಳಾಗಿದ್ದರು. ಸತ್ಯ ಧರ್ಮಗಳಿಗೆ ಹಿಂದೂ ಸಾಮ್ರಾಜ್ಯದಲ್ಲಿ ಇನ್ನೂ ಬೆಲೆ ಇದ್ದಿತು. 'ಸಾವಿರ ಅಶ್ವಮೇಧಯಾಗಗಳನ್ನೂ ಸತ್ಯವನ್ನೂ ತಕ್ಕಡಿಗೆ ಹಾಕಿದರೆ, ಸತ್ಯವು ಸಾವಿರ ಅಶ್ವಮೇಧಯಾಗಗಳಿಗಿಂತಲೂ ಹೆಚ್ಚು ತೂಗುತ್ತದೆ'. ಎಂಬುದಾಗಿ ಬೇಲೂರಿನ ಶಾಸನವೊಂದರಲ್ಲಿ ತಿಳಿಸಲಾಗಿದೆ.

ಸಂಗಮ ವಂಶದ ರಾಜರು ಶೈವಧರ್ಮಕ್ಕೆ ಹೆಚ್ಚಿನ ಉತ್ತೇಜನವನ್ನಿತ್ತರು, ಹಂಪೆಯ ವಿರೂಪಾಕ್ಷನು ಕೇವಲ ಪಂಪಾಪತಿಯಾಗಿರಲಿಲ್ಲ; ಸಾಮ್ರಾಜ್ಯಾಧಿ ದೇವನೂ ಆಗಿದ್ದನು. ಸಂಗಮಸಂತತಿಯ ದೊರೆಗಳು ಶ್ರೀ ವಿರೂಪಾಕ್ಷನ

ಕಿಂಕರರಾಗಿದ್ದರು. ಕಾಳಾಮುಖ ಪಂಥದ ಆಚಾರ್ಯ ಕಾಶೀವಿಲಾಸ ಕ್ರಿಯಾಶಕ್ತಿ ಎಂಬುವರು ರಾಜಗುರುವೆನಿದ್ದರು. ಒಂದನೆಯ ಹರಿಹರನು ವಿರೂಪಾಕ್ಷ ದೇವಾಲಯವನ್ನು ವಿಸ್ತರಿಸಿದನು. ಅವನ ಮಗನಾದ ಇಮ್ಮಡಿ ಬುಕ್ಕನು ಕ್ರಿಯಾಶಕ್ತಿಯ ಅನುಮತಿ ಪಡೆದು ವಿದ್ಯಾಶಂಕರ ದೇವಾಲಯಕ್ಕೆ ದತ್ತಿ ಬಿಟ್ಟನು. ಕ್ರಿಯಾಶಕ್ತಿಯು ಸ್ಥಳೀಯ ವಿಷ್ಣು ದೇವಾಲಯಕ್ಕೆ ಭೂದಾನ ಮಾಡಿದನೆಂದು ಹೇಳಲಾಗಿದೆ. ತನ್ನ ಗುರು ಕಾಶೀವಿಲಾಸನ ವಿಸ್ಮಯಕಾರೀ ಅನುಗ್ರಹದಿಂದ ಮಂತ್ರಿ ಮಾಧವನು ಶೈವನಾಗಿ ಲೋಕಮಾನ್ಯನಾದನೆಂದೂ ಉಪನಿಷತ್ತುಗಳ ದುರ್ಗಮ ಹಾದಿಯನ್ನು ಸುಗಮಗೊಳಿಸಿದನೆಂದೂ ಶಿಕಾರಿಪುರದ ಶಾಸನವೊಂದರಲ್ಲಿ ಹೇಳಲಾಗಿದೆ.

ವಿಜಯನಗರ ಕಾಲದ ಸಾಮಾಜಿಕ ಪರಿಸ್ಥಿತಿಯ ಕುರಿತು ಬಾರ್ಬೋಸ ತನ್ನ ವರದಿಯಲ್ಲಿ ವಿವರಿಸುತ್ತಾನೆ; ಎಲ್ಲ ಹಳ್ಳಿಗಳಲ್ಲಯೂ ಹಿಂದೂ ಮುಸಲ್ಮಾನರಿದ್ದರು, ಕ್ಷತ್ರಿಯರು, ಬ್ರಾಹ್ಮಣರು, ವೀರಶೈವರು ಮತ್ತು ವೈಶ್ಯರು ಪ್ರಮುಖ ಕೋಮುಗಳಿಗೆ ಸೇರಿದವರಾಗಿದ್ದರು. ಇವರುಗಳಲ್ಲದೆ ಚೆಟ್ಟಿಗಳು, ವೀರಪಾಂಚಾಲರು, ಕೈಕ್ಕೊಳರು, ನಾಯಂದಿರು, ಅಗಸರು, ಕುಂಬಾರರು, ದೊಂಬರು, ಜೋಗಿಗಳು, ಹೊಲೆಯರು ಇತ್ಯಾದಿ ಕೋಮುಗಳೂ ಇದ್ದುವು. ಆಡಳಿತ ಮತ್ತು ಹೋರಾಟ ಕ್ಷತ್ರಿಯರ ಕಾರ್ಯಕ್ಷೇತ್ರಗಳಾಗಿದ್ದುವು. ಅವರಲ್ಲಿ ಬಹುಪತ್ನಿತ್ವ ಮತ್ತು ಸಹಗಮನ ಪದ್ಧತಿ ವಾಡಿಕೆಯಲ್ಲಿದ್ದುವು, ದುಷ್ಟ ಶಿಕ್ಷಣ, ಶಿಷ್ಟಪರಿಪಾಲನೆ ಅರಸನ ಕರ್ತವ್ಯವಾಗಿದ್ದಿತು. ಕ್ಷತ್ರಿಯರು ಮದ್ಯಪಾನ ಮಾಡುವ ಹಕ್ಕನ್ನು ಹೊಂದಿದ್ದರು.

ಪೌರೋಹಹಿತ್ಯ ಮತ್ತು ಅರ್ಚನಾವೃತ್ತಿಗಳು ಬ್ರಾಹ್ಮಣರಿಗೆ ಮಿಸಲಾಗಿದ್ದವು. ಬ್ರಾಹ್ಮಣರೂ ವ್ಯವಸಾಯಕ್ಕೆ ಅರ್ಹರೆಂದು ಅಂದಿನ ಪರಾಶರ ಸ್ಮೃತಿಯಲ್ಲಿ ತಿಳಿಸಲಾಗಿದೆ.

ವೀರಶೈವರು ಲಿಂಗಧಾರಣೆ ಮಾಡಿಕೊಳ್ಳುತ್ತಿದ್ದರು. ಅವರಿಗೆ ಸಮಾಜದಲ್ಲಿ ಗೌರವವಿದ್ದಿತು. ಅವರಲ್ಲನೇಕರು ವರ್ತಕರಾಗಿದ್ದರು. ಅವರು ಸಸ್ಯಾಹಾರಿಗಳೂ ಏಕಪತ್ನೀವ್ರತಸ್ಥರೂ ಆಗಿದ್ದರೆಂದು ತಿಳಿಸಲಾಗಿದೆ.

ವಿಜಯನಗರ ಕಾಲದ ಶಿಕ್ಷಣವನ್ನು 'ಬಾಲಭೋಧೆ' ಎಂದು ಕರೆಯುತ್ತಿದ್ದರು. ಮಕ್ಕಳು ಧೂಳು ಅಥಾವಾ ಮರಳಿನ ಮೇಲೆ ಅಕ್ಷರಗಳನ್ನು ತಿದ್ದಿ ಅವುಗಳನ್ನು ಕಲಿಯುತ್ತಿದ್ದರು, ನೂರರ ಅಂಕಿಗಳನ್ನು ಕಲಿಸಿದ ಮೇಲೆ ಮಗ್ಗಿ, ಕೋಷ್ಟಕಗಳನ್ನು ಬೋಧಿಸುತ್ತಿದ್ದರು. ಧೂಳಾಕ್ಷರದ ಬೋಧನೆಯ ನಂತರ ಕಾಗದದ ಮೇಲೆ ಬರೆಯುವವುದನ್ನೂ ಓದುವ ಕಲೆ ಹಾಗೂ ಅಂಕಗಣಿತವನ್ನೂ ಮಕ್ಕಳು ಕಲಿಯುವತ್ತಿದ್ದರು. ಮುಂದಿನ ಘಟ್ಟಗಳಲ್ಲಿ ಜೈಮಿನಿ ಭಾರತ, ವಿದುರನೀತಿ, ಅಮರಕೋಶ, ಪಂಚತಂತ್ರ ಮತ್ತು ಸೋಮೇಶ್ವರ ಶತಕಗಳು ವಿದ್ಯಾರ್ಥಿಗಳ ಅಧ್ಯಯನದಲ್ಲಿ ಸೇರಿದ್ದುವು.

ಬ್ರಹ್ಮಪುರಿಗಳು, ದೇವಾಲಯಗಳು, ಅಗ್ರಹಾರಗಳು ಮತ್ತು ಮಠಗಳು ಉನ್ನತ ಶಿಕ್ಷಣದ ಕೇಂದ್ರಗಳಾಗಿದ್ದುವು. ವೇದಗಳು, ಮೀಮಾಂಸೆ, ನ್ಯಾಯ, ವ್ಯಾಕರಣ, ಪುರಾಣ, ಧರ್ಮಶಾಸ್ತ್ರ, ಸಂಗೀತ, ವೈದ್ಯ ಮತ್ತು ಧನುರ್ವಿದ್ಯೆಗಳಿಗೆ ಪಠ್ಯಕ್ರಮದಲ್ಲಿ ಸ್ಥಾನವಿದ್ದಿತು.

ವೀರಶೈವರ ವಚನಗಳು, ಹರಿದಾಸರ ಕೀರ್ತನೆಗಳು ಸಾಮಾನ್ಯ ಶಿಕ್ಷಣದ ಸಾಧನಗಳಾಗಿದ್ದುವು. ಪವಿತ್ರ ಗ್ರಂಥಗಳ ವಾಚನವು ರಾಜ ಕುಟುಂಬದ ಮಹಿಳೆಯರ ಶಿಕ್ಷಣದ ವಿಧಾನಗಳಲ್ಲಿ ಒಂದಾಗಿದ್ದಿತು. ನೃತ್ಯ ಶಿಕ್ಷಣಕ್ಕೆ ಪೂರ್ವಭಾವಿಯಾದ ಅಂಗಸೌಷ್ಠವವನ್ನು ಬೆಳೆಸಿಕೊಳ್ಳಲು ಮಹಿಳೆಯರು ನಾನಾ ಬಗೆಯ ವ್ಯಾಯಾಮಗಳನ್ನು ಮಾಡಬೇಕಾಗಿದ್ದಿತು. ವಿಜಯನಗರದ ಅರಮನೆಯಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕ ಗರಡಿಮನೆ ಇದ್ದಿತು.

ವಿಜಯನಗರದ ಕಾಲದಲ್ಲಿ ಕನ್ನಡ, ತೆಲಗು ಮತ್ತು ಸಂಸ್ಕೃತ ಸಾಹಿತ್ಯಗಳು ಚೆನ್ನಾಗಿ ಬೆಳೆದುವಲ್ಲದೆ, ತಮಿಳು ಸಾಹಿತ್ಯಕ್ಕೂ ಪ್ರೋತ್ಸಾಹ ದೊರೆಯಿತು. ಜೈನ ವೀರಶೈವ ಹಾಗೂ ಬ್ರಾಹ್ಮಣ ಸಾಹಿತಿಗಳನೇಕರಿಗೆ ರಾಜಾಶ್ರಯ ದೊರೆತು, ಸಾಹಿತ್ಯದ ಪ್ರಗತಿಯಾಯಿತು.

ಜೈನ ಕವಿಗಳು ತಮಗೆ ಪ್ರಿಯವಾಗಿದ್ದ ತೀರ್ಥಂಕರರ ಜೀವನವನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದರು. ಕ್ರಿ.ಶ. 1352ರಲ್ಲಿ ಬಾಹುಬಲಿಯೂ ಕ್ರಿ.ಶ. 1385ರಲ್ಲಿ ಮಧುರನೂ ಸಾಂಪ್ರದಾಯಿಕ ಚಂಪೂ ಶೈಲಿಯಲ್ಲಿ ಹದಿನೈದನೆಯ ತೀರ್ಥಂಕರನಾದ ಧರ್ಮನಾಥನ ಜೀವನವನ್ನು ಕುರಿತು ಕಾವ್ಯವನ್ನು ರಚಿಸಿದನು. ಹರಿಹರನ ಮಂತ್ರಿ ಮುದ್ದ ದಂಡೇಶನ ಕೃಪಾಪೋಷಿತ ಮಧುರನ ಕೃತಿಯ ಪೀಠಿಕಾರೂಪದ ಪದ್ಯಗಳು ಸೊಗಸಾಗಿರುವವಲ್ಲದೆ, ಇತರ ಭಾಗಗಳಲ್ಲಿ ಅಲ್ಲಲ್ಲಿ ನಿಸರ್ಗನೋಟದ ರಮ್ಯ ಚಿತ್ರಣವಿದೆ. ಹಂಪೆಯ ಕೃಷ್ಣದೇವಾಲಯದ ಬಳಿ ಇರುವ ಶಾಸನವನ್ನು ಈ ಕವಿಯೇ ರಚಿಸಿದನೆಂದು ಹೇಳಬಹುದಾಗಿದೆ.

ಪ್ರಾಚೀನ ಭಾರತದ ಕಲಾಕಾರರು ದೇವಾಲಯಗಳ ನಿರ್ಮಾಣ ಮತ್ತು ಶಿಲ್ಪಗಳನ್ನು ಕೆತ್ತುವುದು ಒಂದು ಪವಿತ್ರ ಕೆಲಸವೆಂದು ತಿಳಿದಿದ್ದರು. ತಾವು ನಿರ್ಮಣ ಮಾಡಿದ ದೇವಾಲಯಗಳ ಮೇಲಾಗಲಿ ಅಥವಾ ಶಿಲ್ಪಗಳ ಮೇಲಾಗಲಿ ತಮ್ಮ ಹೆಸರುಗಳನ್ನು ನಮೂದಿಸುವ ಆಸಕ್ತಿ ಅವರಿಗೆ ಇರಲಿಲ್ಲವೆಂದು ತೋರುತ್ತದೆ. ಆದರೂ ಕೂಡಾ ಕರ್ನಾಟಕದಲ್ಲಿ ಬಾದಾಮಿಯ ಚಾಲುಕ್ಯರ, ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಕಾಲಗಳಲ್ಲಿ ಕೆಲವರು ತಮ್ಮ ಹೆಸರುಗಳನ್ನು ಶಿಲ್ಪಗಳ ಮೇಲೆ ನಮೂದಿಸಿರುವುದು ಕಂಡು ಬರುತ್ತದೆ. ಈ ಮೇಲಿನ ರಾಜ ಮನೆತನಗಳ ಸ್ಥಪತಿಗಳು ಮತ್ತು ಶಿಲ್ಪಗಳ ಬಗ್ಗೆ ಸಾಕಷ್ಟು ಸಂಶೋಧನೆಗಳು ನಡೆದಿವೆ. ಆದರೆ ವಿಜಯನಗರ ಕಾಲದಲ್ಲಿ ಶಿಲ್ಪಗಳ ಮತ್ತು ಸ್ಥಪತಿಗಳ ಹೆಸರುಗಳನ್ನು ನಮೂದಿಸುವ ಪದ್ಧತಿಯು ಸ್ಥಗಿತವಾಗಿರುವುದು ಕಂಡುಬರುತ್ತದೆ. ಆದರೂ ಕೂಡಾ ಅವರ ಬಗ್ಗೆ ಶಾಸನಗಳಲ್ಲಿರುವ ಉಲ್ಲೇಖಗಳನ್ನು ಗಮನಿಸಿ ಒಂದು ಚಿತ್ರವನ್ನು ರೂಪಿಸು ಪುಟ್ಟ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

ವಿಜಯನಗರದ ಕಾಲದಲ್ಲಿ ವಾಸ್ತು ಶಿಲ್ಪ. ಮೂರ್ತಿಶಿಲ್ಪ, ಚಿತ್ರ, ನೃತ್ಯ, ಸಂಗೀತ, ನಾಟಕ ಮುಂತಾದ ಕಲೆಗಳು ಅಭಿವೃದ್ಧಿ ಹೊಂದಿದುವು. ಹೇಮಕೂಟದಲ್ಲಿರುವ ಜೈನಬಸದಿಗಳೂ ಮತ್ತಿತರ ಪುಟ್ಟ ಹಿಂದೂ ದೇವ ಮಂದಿರಗಳೂ ಇರುಗಪ್ಪನಿಂದ ನಿರ್ಮಿಸಲ್ಪಟ್ಟ ಗಾಣಗಿತ್ತಿ ದೇವಾಲಯವೂ ಕದಂಬರ ಕಾಲದ ಸರಳ ರೀತಿಯ ವಾಸ್ತು ಶಿಲ್ಪವನ್ನು ನೆನಪಿಗೆ ತರುತ್ತವೆ. ಅಲ್ಲಿನ ವಿಮಾನಗಳು ಕದಂಬ ವಿಮಾನಗಳ ಮಾದರಿಯಲ್ಲಿವೆ. 'ಕಡಲೆಕಾಳು ಗಣಪತಿ'

ದೇವಾಲಯವೂ ಇದೇ ರೀತಿಯ ಇವೆಲ್ಲಾ ವಿಜಯನಗರ ಕಾಲದ ಆದಿಯ ವಾಸ್ತು ಶಿಲ್ಪದ ಕುರುಹುಗಳು.

ಸಂಗಮರ ಕಾಲದ ವೇಳೆಗೆ ಅಲಂಕಾರಕ್ಕೆ ಹೆಸರಾದ ಚಾಲುಕ್ಯ ಮತ್ತು ಹೊಯ್ಸಳ ರೀತಿಯ ವಾಸ್ತು ಶಿಲ್ಪದ ಅನುಕರಣೆಯಾಯಿತು. ಕಂಬ ಮತ್ತು ಕಮಾನುಗಳು ವಿಜಯನಗರದ ಶೈಲಿಯ ದೇವಾಲಯಗಳ ಸೌಂದರ್ಯವನ್ನು ಇಮ್ಮಡಿ ಗೊಳಿಸಿದವು. ವಿಜಯನಗರ ಕಾಲದ ಅತ್ಯಂತ ಹಳೆಯ ದೇವಾಲಯವೆಂದರೆ ಪಂಪಾಪತಿ ದೇವಾಲಯ.

## ಸಂದರ್ಭ ಗ್ರಂಥಗಳು

**ಪ್ರಾಥಮಿಕ ಆಕರ ಕನ್ನಡ:**

1. *ಎಪಿಗ್ರಾಫಿಯ ಕರ್ನಾಟಕ, ಹದಿಮೂರು ಸಂಪುಟಗಳು*
2. ಎಂ.ಎಂ. ಕಲಬುರ್ಗಿ (ಸಂ), *ಕರ್ನಾಟಕದ ಕೈಫಿಯತ್ತುಗಳು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 1994
3. ಕುಶಾಲಪ್ಪಗೌಡ, ಕೆ. (ಅನು), *ಗಂಗಾದೇವಿಯ ಮಧುರಾವಿಜಯಂ ಅಥವಾ ವೀರಕಂಪಣರಾಯ ಚರಿತಂ,* ಪೆರಾಜೆ, ಜಯಗೌರಿ ಪ್ರಕಾಶನ
4. ಕೃಷ್ಣ ಭಟ್ಟ ಕೆ. (ಅನು), *ಕೌಟಲ್ಯನ ಅರ್ಥಶಾಸ್ತ್ರ,* ಧಾರವಾಡ, ಸಮಾಜ ಪುಸ್ತಕಾಲಯ, 1972
5. ಗೋಪಾಲ್ ಬಿ.ಆರ್. ಮತ್ತು ಇತರರು (ಸಂ), *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-4,* ಹಂಪಿ, 2000
6. ತೊರವೆ ನರಹರಿ, *ತೊರವೆ ರಾಮಾಯಣ*, ಭಾಗ-1 ಮತ್ತು 2, ಮೈಸೂರು ವಿಶ್ವವಿದ್ಯಾಲಯ, 1956-59
7. ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ), *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-1,2,3*, ಹಂಪಿ, ಕನ್ನಡ ವಿಶ್ವವಿದ್ಯಾಲಯ, 1998-2000
8. ದೇವಿರಪ್ಪ, ಎಚ್, (ಸಂ), *ರಾಮನಾಥ ಚರಿತ*, ಸಂಪುಟ-2-3, ಮೈಸೂರು ವಿಶ್ವವಿದ್ಯಾಲಯ, 1994

9. ನರಸಿಂಹಚಾರ್, ಡಿ.ಎಲ್. (ಸಂ), *ವಡ್ಡಾರಾಧನೆ,* ಶಾರದಾಮಂದಿರ, ಮೈಸೂರು, 1955

10. ನಾಗೇಗೌಡ, ಎಚ್.ಎಲ್, *ಪ್ರವಾಸಿಕಂಡ ಇಂಡಿಯಾ,* ಸಂಪುಟ–1–2, ಮೈಸೂರು ವಿಶ್ವವಿದ್ಯಾಲಯ, 1964–66

11. ನಿರುಪಮಾ, *ಆಮುಕ್ತಮಾಲ್ಯದ (ಶ್ರೀ ಕೃಷ್ಣದೇವರಾಯ),* ಬೆಂಗಳೂರು, ಶ್ರೀ ಪ್ರಕಾಶನ, 1979

12. ಪಂಪ, *ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ,* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1977

13. ಬಸಪ್ಪ ಎಸ್. (ಸಂ), *ಶಿವತತ್ವ ಚಿಂತಾಮಣಿ* (ಲಕ್ಕಣ ದಂಡೇಶ), ಮೈಸೂರು ವಿಶ್ವವಿದ್ಯಾಲಯ, 1970

14. ಬಸವರಾಜ ಭೂಪಾಲ, *ಶಿವತತ್ತ್ವರತ್ನಾಕರ,* ಸಂಪುಟ–1–2, ಹಂಪಿ ಕನ್ನಡ ವಿಶ್ವವಿದ್ಯಾಲಯ, 1999

15. ಭೀಮಕವಿ, *ಬಸವ ಪುರಾಣ,* ಧಾರವಾಡ, ಲಿಂಗಾಯತ ಅಭಿವೃದ್ಧಿ ಸಂಸ್ಥೆ, 1969

16. ಮಂಜುನಾಥನ್ ಜಿ.ಜಿ., *ಅಶ್ವಶಾಸ್ತ್ರ,* ಮೈಸೂರು ವಿಶ್ವವಿದ್ಯಾನಿಲಯ, 1987

17. ಮಂಜುನಾಥನ್ ಜಿ.ಜಿ. (ಸಂ), *ಸನತ್ಕುಮಾರ ಚರಿತೆ,* ಮೈಸೂರು ವಿಶ್ವವಿದ್ಯಾನಿಲಯ, 1970

18. ಮನು, *ಮನುಸ್ಮೃತಿ,* ಅನುಚಕ್ರಕೋಡಿ ಈಶ್ವರ ಶಾಸ್ತ್ರಿ, ಸಮಾಜ ಪುಸ್ತಕಾಲಯ, ಧಾರವಾಡ, 1987

19. ಮಲ್ಲಿಕಾರ್ಜುನ, *ಸೂಕ್ತಸುಧಾರ್ಣವಂ*, ಮೈಸೂರು, 1947

20. ಮುಹಮ್ಮದ್ ಇಬ್ರಾಹಿಂ ಜುಬೇರಿ, *ಬುಸಾತಿನೆ ಸಲಾತೀನ* (ಅನು. ಕೃಷ್ಣಕೊಲ್ಹಾರ ಕುಲಕರ್ಣಿ), ಹಂಪಿ, ಕನ್ನಡ ವಿಶ್ವವಿದ್ಯಾಲಯ, 1999

21. ವಿರೂಪಾಕ್ಷ ಪಂಡಿತ, *ಚೆನ್ನಬಸವ ಪುರಾಣ*, ಧಾರವಾಡ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, 1934

22. ಶಾಮಶಾಸ್ತ್ರಿ, ಆರ್, (ಸಂ), *ಕಂಠೀರವ ನರಸರಾಜ ವಿಜಯಂ*, ಮೈಸೂರು, 1926

23. ಶಾಮಶಾಸ್ತ್ರಿ, ಆರ್, (ಸಂ), *ಕೆಳದಿ ನೃಪವಿಜಯಂ,* ಮೈಸೂರು ವಿಶ್ವವಿದ್ಯಾನಿಲಯ, 1973

24. ಸೀತಾರಾಮಯ್ಯ, ಎಂ.ವಿ. (ಸಂ), *ಶ್ರೀ ಕೃಷ್ಣದೇವರಾಯನ ದಿನಚರಿ*, ಬೆಂಗಳೂರು, ಬಿ.ಎಂ. ಶ್ರೀ ಪ್ರತಿಷ್ಠಾನ, 1983

25. ಸೀತಾರಾಮಯ್ಯ, ಎಂ.ವಿ. (ಸಂ), *ಕವಿರಾಜಮಾರ್ಗಂ*, ಮೈಸೂರು, ಡಿ.ವಿ.ಕೆ. ಮೂರ್ತಿ ಪ್ರಕಾಶನ, 1975

26. ಹಿರೇಮಠ, ಆರ್.ಸಿ. (ಸಂ), *ಮೋಹನ ತರಂಗಿಣಿ,* ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, 1973

**ಪೂರಕ ಆಕರ ಕನ್ನಡ**:

1. ಅನಂತ ಕೃಷ್ಣ ಶರ್ಮಾ, *ಸಾಹಿತ್ಯ ಮತ್ತು ಜೀವನ ಕಲೆ,* ಮೈಸೂರು, ಕಾವ್ಯಾಲಯ, 1971

2. *ಕರ್ನಾಟಕ ಚರಿತ್ರೆ, ಏಳು ಸಂಪುಟಗಳು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 1995–1997

3. ಎಂ.ಎಂ. ಕಲಬುರ್ಗಿ, *ಮಾರ್ಗ–4*, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು, 2004

4. ಪಿ.ವಿ. ಕೃಷ್ಣಮೂರ್ತಿ, ಕೆ. ವಸಂತಲಕ್ಷ್ಮಿ (ಸಂ), *ಸೂರ್ಯಕೀರ್ತಿ,* ಬೆಂಗಳೂರು, ಡಾ. ಸೂರ್ಯನಾಥ ಕಾಮತ್ ಅಭಿನಂದನಾ ಸಮಿತಿ, 2000

5. ಎಂ.ವಿ. ಕೃಷ್ಣರಾವ್ ಮತ್ತು ಕೇಶವಭಟ್ಟ, *ಕರ್ನಾಟಕದ ಇತಿಹಾಸ ದರ್ಶನ,* ಬೆಂಗಳೂರು, ಕರ್ನಾಟಕ ಸಹಕಾರಿ ಪ್ರಕಾಶನ, 1970

6. ಕೃಷ್ಣಶರ್ಮಾ, *ಕರ್ನಾಟಕ ಜನಜೀವನ,* ಬೆಂಗಳೂರು, ವಿಶ್ವಕನ್ನಡ ಸಮ್ಮೇಳನ, 1983

7. ಎಸ್.ಬಿ. ಕೋಡದ, *ವಿಜಯನಗರದ ನಿರ್ಣಾಯಕ ಯುದ್ಧ,* ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, 1970

8. ಎಸ್.ಬಿ. ಕೋಡದ, *ವಿಜಯನಗರ ಸಾಮ್ರಾಜ್ಯ ಹಾಗೂ ಹಿಂದೂ–ಮುಸ್ಲಿಂ ಬಾಂಧವ್ಯ,* ಕೋಡದ ಪ್ರಾಕಾಶನ, 1966

9. ಕೆ.ಆರ್. ಗಣೇಶ, *ಆಂಧ್ರ ಪ್ರದೇಶದ ಕನ್ನಡ ಶಾಸನಗಳು,* ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, 1997

10. ಚನ್ನಬಸಪ್ಪ, ಎಸ್. ಪಾಟೀಲ, *ಕರ್ನಾಟಕದ ಕೋಟೆಗಳು*, ಸಂಪುಟ–1, ಹಂಪಿ, ಕನ್ನಡ ವಿಶ್ವವಿದ್ಯಾಲಯ, 2000

11. ಚಿದಾನಂದ ಮೂರ್ತಿ, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಮೈಸೂರು ವಿಶ್ವವಿದ್ಯಾಲಯ, 1966

12. ಚಿದಾನಂದ ಮೂರ್ತಿ*, ಹೊಸತು ಹೊಸತು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 1993

13. ಜೋಶಿ, ಜಿ.ಜಿ., *ಕೌಟಲ್ಯನ ರಾಜ್ಯ ಪದ್ಧತಿಯ ಸಮೀಕ್ಷೆ,* ಬೆಳಗಾವಿ, ಶರತ್ ಪ್ರಕಾಶನ, 1991

14. ದೀಕ್ಷಿತ್ ಜಿ.ಎಸ್. ಮತ್ತು ಇತರರು, *ಶ್ರೀ ಕೃಷ್ಣದೇವರಾಯ–ಜೀವನ ಸಾಧನೆಗಳು,* ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, 1997

15. ಪರಮಶಿವಮೂರ್ತಿ, *ಕನ್ನಡ ಶಾಸನಶಿಲ್ಪ,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 1999

16. ಪರಮಶಿವಮೂರ್ತಿ (ಸಂ), *ಪ್ರೌಢದೇವರಾಯನ ಶಾಸನಗಳು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 2007

17. ಫಿಲಿಯೋಜಾ (ವಸುಂಧರಾ), *ಅಳಿದುಳಿದ ಹಂಪೆ,* ಬೆಂಗಳೂರು, ಮಾನಸೋಲ್ಲಾಸ ಪ್ರಕಾಶನ, 1982

18. ಬಸವರಾಜ ಮಲಶೆಟ್ಟಿ (ಸಂ), *ಎನಗಿಂತ ಕರಿಯರಿಲ್ಲ,* ಕೊಪ್ಪಳ, 1999

19. ಭೂಸನೂರ ಮಠ (ಸಂ), *ವಿಜಯ ಕಲ್ಯಾಣ ಹಂಪೆ,* ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, 1988

20. ಮಹದೇವಯ್ಯ, ಎಂ.ಪಿ., *ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯ ಕೆಲವು ಅಂಶಗಳು,* ಮೈಸೂರು ವಿಶ್ವವಿದ್ಯಾನಿಲಯ, ಪಿಹೆಚ್.ಡಿ. ಮಹಾಪ್ರಬಂಧ, 1994

21. ರಡ್ಡೆಪ್ಪ ಪಂಪಣ್ಣ, *ರಾಯಚೂರು ಕೋಟೆಯ ಇತಿಹಾಸ,* ಎಂ.ಫಿಲ್. ಪ್ರೌಢ ಪ್ರಬಂಧ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, 1995

22. ರಾಜಶೇಖರ, ಎಸ್., *ವಿಜಯನಗರ ಕಾಲದ ಘಟನಾವಳಿ ಸೂಚಿ,* ಧಾರವಾಡ, ಸುಜಾತ ಪಬ್ಲಿಕೇಶನ್ಸ್.

23. ರಾಮರಾವ್, ಜೆ.ಎನ್., *ವಿದೇಶಿಯರು ಕಂಡ ವಿಜಯನಗರ,* ಬೆಂಗಳೂರು, ಐ.ಬಿ.ಎಚ್. ಪ್ರಕಾಶನ

24. ರಾಮಚಂದ್ರಪ್ಪ, ಬರಗೂರು, *ಕನ್ನಡ ಸಾಹಿತ್ಯದಲ್ಲಿ ಯುದ್ಧ ಮತ್ತು ಶಾಂತಿ,* ಬೆಂಗಳೂರು ಕರ್ನಾಟಕ ಸಾಹಿತ್ಯ ಅಕಾಡೆಮಿ, 1993

25. ರಾಮೇಗೌಡ, *ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು,* ಮೈಸೂರು, ಚಿತ್ರಕೂಟ, 1992

26. ರಾವ್, ಎಸ್.ಆರ್. *ಲೋಥಲ್ ಮತ್ತು ಸಿಂಧೂ ನಾಗರೀಕತೆ*, ಧಾರವಾಡ, 1994

27. ವರದರಾಜ ರಾವ್, ಜೆ., *ಕುಮಾರರಾಮನ ಸಾಂಗತ್ಯಗಳು,* ಮೈಸೂರು, 1966

28. ಶಿವಾನಂದ ವೀರಕ್ತಮಠ, *ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,* ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, 1978

29. ವಿಲ್ ಮತ್ತು ಏರಿಯಲ್ ಡುರಾಂಟ್, *ಇತಿಹಾಸದ ಪಾಠಗಳು,* ಮೈಸೂರು, ನಭಶ್ರೀ ಪ್ರಕಾಶನ, 1978

30. ವೆಂಕಟರತ್ನಂ ಎ.ವಿ., *ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,* ಮೈಸೂರು ವಿಶ್ವವಿದ್ಯಾನಿಲಯ, 1974

31. ವೆಂಕಟರಾಮಪ್ಪ, ಕೆ., *ಶ್ರೀ ಕೃಷ್ಣದೇವರಾಯನ ಕಾಲದ ಕರ್ಣಾಟಾಂಧ್ರ ಸಾಹಿತ್ಯ ಸಮೀಕ್ಷೆ,* ಮೈಸೂರು ವಿಶ್ವವಿದ್ಯಾನಿಲಯ, 1974

32. ವೆಂಕಟಾಚಲಶಾಸ್ತ್ರಿ, ಟಿ.ವಿ. (ಸಂ), *ಕನ್ನಡ ಸಾಹಿತ್ಯ ಚರಿತ್ರೆ,* ಸಂಪುಟ-5, ಮೈಸೂರು ವಿಶ್ವವಿದ್ಯಾನಿಲಯ, 1981

33. ತಿ.ತಾ. ಶರ್ಮಾ, *ಚಾರಿತ್ರಿಕ ದಾಖಲೆಗಳು,* ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, 1971

34. ಶ್ರೀಕಂಠಯ್ಯ, ಕೆ., *ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ,* ಮೈಸೂರು, ಗೀತಾ ಬುಕ್ ಹೌಸ್, 1982

35. ಶ್ರೀಕಂಠಯ್ಯ, ಕೆ., *ಕನ್ನಡ ಕಾವ್ಯಗಳಲ್ಲಿ ಸಮರ ಚಿತ್ರಗಳು,* ಮೈಸೂರು ವಿಶ್ವವಿದ್ಯಾನಿಲಯ, 1983

36. ಶ್ರೀಧರ ಎಚ್.ಜಿ., *ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ,* ವಿವೇಕಾನಂದ ಕಾಲೇಜು ಪುತ್ತೂರು, 2002

37. ಬಿ.ಎಸ್. ಶೇಠೆ, *ಕರ್ನಾಟಕದಲ್ಲಿ ಸತಿಪದ್ಧತಿ,* ಬೆಳಗಾವಿ, ವೀರಶೈವ ಅಧ್ಯಯನ ಅಕಾಡೆಮಿ, 1991

38. ಆರ್. ಶೇಷಾಶಾಸ್ತ್ರಿ, *ಕರ್ನಾಟಕದ ವೀರುಗಲ್ಲುಗಳು,* ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, 1982

39. ಸಿವೆಲ್, ರಾಬರ್ಟ್, *ಮರೆತಹೋದ ಮಹಾಸಾಮ್ರಾಜ್ಯ ವಿಜಯನಗರ* (ಅನು. ಸದಾನಂದ ಕನವಳ್ಳಿ), ಹಂಪಿ, ಕನ್ನಡ ವಿಶ್ವವಿದ್ಯಾಲಯ, 1992

40. ಸುಬ್ರಮಣಿಯನ್, ಎನ್., *ಸಂಗಮ್ ರಾಜಕೀಯ ಸಾಮಾಜೀಕ ವ್ಯವಸ್ಥೆ* (ಅನು. ನಿರಂಜನ), ಮೈಸೂರು ವಿಶ್ವವಿದ್ಯಾನಿಲಯ, 1976

41. ಎಸ್. ವೈ. ಸೋಮಶೇಖರ, *ಹಂಪೆಯ ಬಜಾರುಗಳು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 1997

42. ಬಿ.ಆರ್. ಹಿರೇಮಠ, *ಶಾಸನಗಳಲ್ಲಿ ಕರ್ನಾಟಕದ ವರ್ತಕರು,* ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, 1980

43. ಎಸ್. ವೈ. ಸೋಮಶೇಖರ, *ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ,* ಸಂಚಿಕೆ ಪ್ರಕಾಶನ, ಚಿತ್ರದುರ್ಗ, 2009

44. ಕುಂದೂರಿ ಈಶ್ವರದತ್ತು, *ಭಗ್ನ ವಿಜಯನಗರ ಚರಿತ್ರೆ,* (ಅನು. ಗುರುಮೂರ್ತಿ ಪೆಂಡಕೂರು), ಹಂಪಿ, ಕನ್ನಡ ವಿಶ್ವವಿದ್ಯಾಲಯ, 2010

45. ಲಕ್ಷ್ಮಣ ತೆಲಗಾವಿ (ಸಂ), *ರಾಮಾಜಿ ತಿರುಮಲ ಹರಿಕಾರೆಯ ರಾಮರಾಜನ ಬಖೈರು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 2011

46. ಬಿ.ಎ. ವಿವೇಕ ರೈ. (ಸಂ), *ಪ್ರವಾಸಿ ಕಂಡ ವಿಜಯನಗರ,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 2005

47. ಎಂ. ಕೊಟ್ರೇಶ್, *ಬಳ್ಳಾರಿ ಜಿಲ್ಲೆಯ ಕೋಟೆಗಳು,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 2011

48. ರಾಜನಾಥ ಡಿಂಡಿಮ ವಿರಚಿತ, *ಅಚ್ಯುತರಾಯಾಭ್ಯುದಯಂ,* (ಅನು. ಸುಚೇತಾ ನವರತ್ನ), ಹಂಪಿ, ಕನ್ನಡ ವಿಶ್ವವಿದ್ಯಾಲಯ, 2010

49. ಜಿ.ಎಸ್. ದೀಕ್ಷಿತ್ ಮತ್ತು ಇತರರು (ಸಂ), *ಸಂಗಮರ ಕಾಲದ ವಿಜಯನಗರ: ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ,* ಬೆಂಗಳೂರು, ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, 1991

50. ಎಚ್, ಎಂ, ನಾಗರಾಜು, *ವಿಜಯನಗರದ ಇಮ್ಮಡಿ ದೇವರಾಯ,* ಮೈಸೂರು, ಸಂವಹನ, 1999

51. ಪಾಂಡುರಂಗರಾವ ದೇಸಾಯಿ, *ಹಂಪೆ,* ಬೆಂಗಳೂರು, ಸಪ್ನ ಬುಕ್ ಹೌಸ್, 2003

52. ಎ.ಎಸ್. ನಂಜುಂಡಸ್ವಾಮಿ, *ವಿಜಯನಗರದ ಇತಿಹಾಸ,* ಧಾರವಾಡ, ಸಮಾಜ ಪುಸ್ತಕಾಲಯ, 1970

53. ಎನ್. ಚಿನ್ನಸ್ವಾಮಿ ಸೋಸಲೆ, *ಸಾಮ್ರಾಜ್ಯ ಮತ್ತು ಸಂಸ್ಥಾನ,* ಹಂಪಿ, ಕನ್ನಡ ವಿಶ್ವವಿದ್ಯಾಲಯ, 2004

54. ಎಂ.ಎಲ್. ಶಿವಶಂಕರ ಮತ್ತು ಇತರರು, *ವಿಜಯನಗರ ಅಧ್ಯಯನ,* ಸಂಪುಟ–2, ಹಂಪಿ ಉತ್ಸವ 1996ರಲ್ಲಿ ಮಂಡಿಸಿದ ಪ್ರಬಂಧಗಳು, ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, 1997

55. ಎಂ.ಎಲ್. ಶಿವಶಂಕರ ಮತ್ತು ಇತರರು, *ವಿಜಯನಗರ ಅಧ್ಯಯನ,* ಸಂಪುಟ-3, ಹಂಪಿ ಉತ್ಸವ 1997ರಲ್ಲಿ ಮಂಡಿಸಿದ ಪ್ರಬಂಧಗಳು, ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, 1998

56. ಎಂ.ವಿ. ಕೃಷ್ಣಪ್ಪ ಮತ್ತು ಇತರರು, *ವಿಜಯನಗರ ಅಧ್ಯಯನ,* ಸಂಪುಟ-4, ಹಂಪಿ ಉತ್ಸವ 1998ರಲ್ಲಿ ಮಂಡಿಸಿದ ಪ್ರಬಂಧಗಳು, ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, 1999

57. ಎಂ.ವಿ. ಕೃಷ್ಣಪ್ಪ ಮತ್ತು ಇತರರು, *ವಿಜಯನಗರ ಅಧ್ಯಯನ*, ಸಂಪುಟ-5, ಹಂಪಿ ಉತ್ಸವ 1999ರಲ್ಲಿ ಮಂಡಿಸಿದ ಪ್ರಬಂಧಗಳು, ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, 2000

**ಔಡಿಟಜಚಿಟ ಖಚಿಜಿಛಿಜ**

1. *ಂಟಟಣಚಿಟ ಖಜಿಠಿಠಿಣ ಠಿ ಖಟಿಜಚಿಟ ಇಡಿಡಿಚಿಡಿಧಿ*

2. *ಂಟಟಣಚಿಟ ಖಜಿಠಿಠಿಣ ಠಿ ಖಚಿಚಿಣ ಖಟಿಜಚಿಟ ಇಡಿಡಿಚಿಡಿಧಿ*

3. *ಂಟಟಣಚಿಟ ಖಜಿಠಿಠಿಣ ಠಜ ಣಜ ಒಧಿಠಿಜ ಂಡಿಛಿಚಿಜಚಿಟಠಿಛಿಚಿಟ ಆಜಿಚಿಡಿಣಟಜಟಣ*

4. ಂಧಿಧಿಚಿಟಿಚಿಡಿ, ಏಡಿಠಿಟಿಚಿತಿಚಿಟ (ಇಜ.), *ಖಚಿಡಿಛಿಜ ಠಜ ಗಿಟಚಿಧಿಚಿಟಿಚಿಡಿ ಊಡಿಠಿಧಿ*, ಆಜಟಟ ಉಧಿಚಿಟಿ ಕಚಿಟಟಟಿಂ ಊಠಜ, 1986

5. *ಇಡಿಡಿಚಿಡಿಟಜಿ ಅಚಿಡಿಟಿಚಿಣಛಿಚಿ*

6. *ಇಡಿಡಿಚಿಡಿಟಜಿ ಖಟಿಜಛಿಚಿ*

24. ಊ.ಏ. ಖ್ಞಹಿತಿಚಿಟು & ಕಃ. ಎಥ್ಞು (ಇಜ.), *ಊಥ್ಞಾಡಿಥಿ ಡಿ ಒಜಾಜಚಿಟ ಆಜಾಭಿಚಿಟ*, 2ಞಜ, ಊಥಿಜಡಿಚಿಬಿಜ, 1974

25. ಏ.ಖ ಖ್ಞಜಿಟಟಚಿ, *ಖ್ಞಜ ೦ಡಿಚಿಡಿಚಿಟ ಷಿಥಿಣಜ ಡಿ ಏಚಿಡಿಟಚಿಣಚಿಞಚಿ*, ಒಥಿಛಿಜ ಗಿಜಞಜಿಥಿಣಥಿ, 1983

26. ಅ. ಖ್ಞಜಿಡಿಚಿಟಚಿಣಜಿಣ್ಞಥಿ, *ಗಿಔಚಿಥಿಚಿಟಚಿಡಿಚಿ ಛಿಟಿಣಿಟಿಡಿ* ಓಜತಿ ಆಜಿಟ್ಞು 1985

27. ಖಾಜು ಃಣಜಿಣಡು, ಗಿ*ಔಚಿಥಿಚಿಟಚಿಡಿಚಿ*, ಖ್ಞಜ ಓಜತಿ ಅಚಿಟಟಿಜಿಜಡಿಜ ಊಥ್ಞಾಡಿಥಿ ಡಿ ಖಿಟಜಿಚಿ, 1991

28. ಖಾಜು ಃಣಜಿಣಡು, *ಹಿಜಿಚಿಟಣ ಖಾಚಿಣಜ ಚಿಟಜ ಖಿಜಿಜಾಥಿ ಟ ಒಜಾಜಚಿಟ ಖಾಡು ಖಿಟಜಿಚಿ*, 1980

29. ಖಾಜಿಟಜ್ಞಚಿ ಖ್ಞಚಿಡಿಟಜಿ, *ಊಥ್ಞಾಡಿಥಿ ಡಿ ೦ಟಣಟಜಡಿಜ ಡಿ ಖಚಿಟಿಜಿಣಜಿ ಈಡಿಣ*, ಆಜಿಟ್ಞು ಫಚಿಡಿಣಥಿಚಿ ಏಚಿಟಚಿ ಊಜಿಚಿಞಿಚಿಟ, 1998

30. *ಖಾಣಜಜ ಟ ಏಚಿಡಿಟಚಿಣಚಿಞಚಿ ಊಥ್ಞಾಡಿಥಿ ಚಿಟಜ ಅಣಟಿಣಜಿಜ ಗಿಡು-ಖಿಖಿ*, ಒಥಿಛಿಜ, ಫಚಿಡಿಚಿಣ್ಞ ಊಜಿಚಿಞಿಚಿಟ, 1987

31. ಖಾಜಿಥಿಚಿಟಚಿಡಿಚಿಥಿಚಿಡಿಚಿಠ *ಖ್ಞಜ ಓಜಾಜಿ ಣ೦ ಛಜ ಈಡಿಡಿಜಾಣಡು ಇಟಜಿಜಿಜ*, ಓಜತಿ ಆಜಿಟ್ಞು ೦.ಇ.ಖ, 1993

32. ಗಿಜಿಞಚಿಣಚಿ ಖಚಿಟಟಚಿಥಿಥಿಚಿ, *ಏಚಿಟಜಿಟು ಚಿಟಜ ಗಿಔಚಿಥಿಚಿಟಚಿಡಿಚಿ*, ಒಚಿಜಡಿಚಿ, 1929

